# ಕೀರ್ತಿನಾರಾಯಣ

ತ. ರಾ. ಸು.

ಪ್ರಕಾಶಕರು:

ಜಿ. ಕೆ. ಅಂಡ್ ಬ್ರದರ್ಸ್

ಬಸವನಗುಡಿ - ಬೆಂಗಳೂರು ೪.

ಮೊದಲ ಮುದ್ರಣ: ಆಶ್ವಯುಜ ೧೯೫೭



ಮುದ್ರಕರು:
ಕಲ್ಯಾಣ್ ಪ್ರಿಂಟರ್ಸ್
೧೨, ಶ್ರೀ ಜಯಚಾಮರಾಜ ರಸ್ತೆ
ಬೆಂಗಳೂರು ೨

ಬೆಲೆ: ರೂ. ೩/೦೦

# ಹರಕೆ

**ಸಿ. ನಿಜಲಿಂಗಪ್ಪ,**
ಮುಖ್ಯ ಮಂತ್ರಿ
ಮೈಸೂರು

ಪ್ರೀತಿಯ ಚಿರಂಜೀವಿ ಸುಬ್ಬಣ್ಣನಿಗೆ–ಆಶೀರ್ವಾದಗಳು.

ನೀನು ಪ್ರೀತಿಯಿಂದ ತಂದುಕೊಟ್ಟ 'ಕೀರ್ತಿನಾರಾಯಣ' ಎಂಬ ಚಾರಿತ್ರಿಕ ಕಾದಂಬರಿಯನ್ನು ಓದಿದೆ; ಓದಿ ತುಂಬಾ ಸಂತೋಷಪಟ್ಟೆ.

ಅದಕ್ಕೆ ನಾನು ಮುನ್ನುಡಿಯನ್ನು ಬರೆಯಬೇಕೆಂದು ನೀನು ಅಪೇಕ್ಷಿಸಿದ್ದೀಯ. ಆದರೆ ಸಾಹಿತಿಯಲ್ಲದ ನನಗೆ 'ಮುನ್ನುಡಿ' ಯನ್ನು ಬರೆಯುವ ಕೆಲಸ ಅಪರಿಚಿತವಾದದ್ದು. ಆದ್ದರಿಂದ ನಿನ್ನ ಕಾದಂಬರಿಯ ಬಗ್ಗೆ ಇಷ್ಟನ್ನು ಮಾತ್ರ ಧಾರಾಳವಾಗಿ ಹೇಳಬಲ್ಲೆ. ಓದುವಾಗ ಇದು ನನಗೆ ತುಂಬಾ ಸಂತೋಷವನ್ನೂ ಸ್ಫೂರ್ತಿಯನ್ನೂ ನೀಡಿತು. ಇಂದು ನನಗಾದ ಸಂತೋಷ, ಈ ಕಾದಂಬರಿಯನ್ನು ಓದುವ ಕನ್ನಡಿಗರೆಲ್ಲರಿಗೂ ಆಗುವುದರಲ್ಲಿ ಏನೂ ಸಂಶಯವಿಲ್ಲ.

ಕನ್ನಡಿಗರಲ್ಲಿ ಚಾರಿತ್ರಿಕ ಕಾದಂಬರಿಗಳ ಸಂಖ್ಯೆ ಬಹು ಅಲ್ಪ. ನೀನು ಈಗಾಗಲೇ ಹತ್ತಾರು ಚಾರಿತ್ರಿಕ ಕಾದಂಬರಿಗಳನ್ನು ಬಹು ಯಶಸ್ವಿಯಾಗಿ ರಚಿಸಿ ಕೀರ್ತಿಯನ್ನು ಗಳಿಸಿದ್ದೀಯ. ಈ ಕಾದಂಬರಿಯು ನಿನ್ನ ಈಗಿನ ಕೀರ್ತಿಯನ್ನು ಹೆಚ್ಚಿಸುವುದರಲ್ಲಿ ನನಗೆ ಸಂಶಯವಿಲ್ಲ. ಈ ಕಾದಂಬರಿಯಲ್ಲಿ ನೀನು, ಹೊಯ್ಸಳ ಚಕ್ರವರ್ತಿ ವಿಷ್ಣುವರ್ಧನನ ಬಾಯಲ್ಲಿ ಆಡಿಸಿರುವ ಮಾತು:—

'ಕನ್ನಡಿಗರು ಕೀರ್ತಿಕಾಮಿಗಳಾಗಬೇಕು; ಧರ್ಮಕ್ಕೆ ಶರಣಾಗಿ ಬಾಳಬೇಕು. ಪರರ ಬಗ್ಗೆ ದ್ವೇಷ, ಅಸೂಯೆಯಿಂದ ತಮ್ಮ ಚೈತನ್ಯ ಕುಂಠಿತವಾಗದಿರಲಿ; ಆತ್ಮವಿಶ್ವಾಸ, ಸಕಲ ಮಾನವತಾ ಪ್ರೇಮದ ಜಾಡಿನಲ್ಲಿ ತಮ್ಮ ಚೈತನ್ಯಗಂಗೆ ಪ್ರವಹಿಸಿ, ಕನ್ನಡಿಗರ ಕೀರ್ತಿ ವಿಶ್ವವ್ಯಾಪಿಯಾಗಲಿ'

—ಎಂಬುದು ನನಗೆ ಅತ್ಯಂತ ಪ್ರಿಯಕರ ಮಾತಷ್ಟೇ ಅಲ್ಲ, ಕನ್ನಡಿಗರೆಲ್ಲರೂ ತಮ್ಮ ಜೀವನದಲ್ಲಿ ಅರಿತು ಆಚರಿಸಬೇಕಾದ ಮಾತು.

ಈ ಕಾದಂಬರಿಯಲ್ಲಿ ನೀನು ಬಳಸಿರುವ ಭಾಷೆ, ಸೃಷ್ಟಿಸಿರುವ ಸನ್ನಿವೇಶಗಳು, ಚಿತ್ರಿಸಿರುವ ವಿಷ್ಣುವರ್ಧನ, ಶಾನ್ತಲಾದೇವಿ, ದಂಡನಾಯಕ ಗಂಗರಾಜ, ಕುಮಾರ ವಿಷ್ಣು, ಸಂಶೋಧಕ ಗೌರಾಚಾರಿ ಮೊದಲಾದ ಪಾತ್ರಗಳು, ಹೃದಯಂಗಮವಾಗಿರುವುದಷ್ಟೇ ಅಲ್ಲ, ಕನ್ನಡ ಸಾಹಿತ್ಯದಲ್ಲಿ ಬಹುಕಾಲ ಜೀವಂತವಾಗಿ ಉಳಿಯುತ್ತದೆ ಎಂದು ನನಗೆ ಅನಿಸುತ್ತದೆ.

ಹೆಚ್ಚೇನು ಹೇಳಲಿ—ನೀನು ನನ್ನ ಕಣ್ಣಮುಂದೆ ಆಡಿ ಬೆಳೆದ ಹುಡುಗ. ಚಿಕ್ಕಂದಿನಿಂದಲೂ ನನಗೆ ಬಹು ಬೇಕಾದವನು. ನಿನ್ನ ಕಾದಂಬರಿಯ ಬಗ್ಗೆ ನಾನು ಹೆಚ್ಚು ಹೇಳ ಹೋದರೆ, ಅದು ಅಕ್ಕರೆಯ ಅತಿಶಯೋಕ್ತಿಯೆಂದು ಜನ ಹೇಳಬಹುದು. ಆದರೆ ಇಷ್ಟನ್ನು ಮಾತ್ರ ಧಾರಾಳವಾಗಿ ಹೇಳಬಲ್ಲೆ. ಈ ಕಾದಂಬರಿಯಿಂದ ನಿನ್ನ ಕೀರ್ತಿ ಹೆಚ್ಚುವುದೇ ಅಲ್ಲದೆ, ಕನ್ನಡ ಜನ ಎಂದೆಂದಿಗೂ ನಿನ್ನ ಹೆಸರನ್ನು ಪ್ರೀತಿಯಿಂದ ಸ್ಮರಿಸುವರು. ನೀನು ನನಗೆ ಬೇಕಾದವನಷ್ಟೇ ಅಲ್ಲ, ಇಂದು ನಾಡಿಗೇ ಬೇಕಾದವನಾಗಿದೀಯ. ಇದು ನನಗೆ ಪ್ರೀತಿಯ, ಹೆಮ್ಮೆಯ ಮಾತು.

ನಿನ್ನ ‘ಕೀರ್ತಿನಾರಾಯಣ’ ಕಾದಂಬರಿ, ಕನ್ನಡಿಗರೆಲ್ಲರ, ಮುಖ್ಯವಾಗಿ, ನಾಳಿನ ಜನಾಂಗವಾದ ಕನ್ನಡ ಬಾಲ-ಬಾಲಕಿಯರೆಲ್ಲರ ಕೈಯಲ್ಲೂ ನಲಿದು, ನಿನಗೆ ಕೀರ್ತಿಯನ್ನು ತರಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

ಕನ್ನಡ ರಾಜರಾಜೇಶ್ವರಿ ನಿನಗೆ ಸಕಲ ಶ್ರೇಯೋಭಿವೃದ್ಧಿಯನ್ನು ನೀಡಲಿ.

‘ಜಲದರ್ಶಿನಿ’, ಮೈಸೂರು
೨೪-೯-೧೯೫೬.

ಇಂತು ನಿನ್ನ ಶ್ರೇಯೋಭಿಲಾಷಿ,
ಸಿ. ನಿಜಲಿಂಗಪ್ಪ

# ಕೆಲವು ಮಾತು

ಕರ್ನಾಟಕವನ್ನು ಆಳಿದ ನೂರಾರು ಜನ ರಾಜಾಧಿರಾಜ ಮಹಾರಾಜರ ಮಾಲೆಯಲ್ಲಿ ಧೃವಕಾಂತಿಯಿಂದ ಬೆಳಗುತ್ತಿರುವ ಉಜ್ವಲ ತಾರೆ, ಹೊಯ್ಸಳ ವಿಷ್ಣುವರ್ಧನ ಮಹಾರಾಯನದು. ಇಂದು ನಾವು ಕರ್ನಾಟಕವೆಂದು ಪಡೆದಿರುವಷ್ಟು ಭಾಗವನ್ನು ಒಂದು ನಾಡಾಗಿ ಕಟ್ಟಿದ ಮೊದಲ ಅರಸು ವಿಷ್ಣುವರ್ಧನ. ಕಲಾರಂಗವಲ್ಲಂತೂ ಈ ದೊರೆಯ ಹೆಸರು, ಆತನ ಕಾಲದಲ್ಲಿ, ಆತನಿಂದ, ಆತನ ಪರಿವಾರದವರಿಂದ ನಿರ್ಮಿತವಾದ ನೂರಾರು ದೇವಾಲಯ ಬಸದಿಗಳಿಂದಾಗಿ ಆಚಂದ್ರಾರ್ಕಸ್ಥಾಯಿಯಾಗಿದೆ.

ಇಂಥ ಭವ್ಯಜೀವಿಯ ಜೀವನ ಮತ್ತು ಸಾಧನೆಗಳ ಬಗ್ಗೆ ನನ್ನ ಗಮನವನ್ನು ಸೆಳೆದು, ಅಭ್ಯಾಸ ಮಾಡಿ ಗ್ರಂಥ ರಚಿಸೆಂದು, ೧೯೫೭ ರಲ್ಲೇ ನನ್ನ ಗುರುಗಳಾದ ಡಾ|| ಎಸ್. ಶ್ರೀಕಂಠಶಾಸ್ತ್ರಿಗಳು ಅಪ್ಪಣೆ ಮಾಡಿ, ಆಶೀರ್ವದಿಸಿದರು. ಆ ಗ್ರಂಥ ಬರಲಿದೆ ಎಂದು ಆ ವರ್ಷವೇ ಬೇರೊಂದು ಪುಸ್ತಕದಲ್ಲಿ ಬಡಾಯಿಯನ್ನು ಕೊಚ್ಚಿಕೊಂಡೆ. ಆದರೆ ಅಂದು ಆರಂಭವಾದ ಕೆಲಸದ ಒಂದು ಖಂಡ ಹೊರಬರಲು ಒಂಭತ್ತು ವರ್ಷಗಳ ಅವಧಿ ಕಳೆಯಬೇಕಾಯಿತು. ಏನಾದರೂ ಮತ್ತೆ ಕನ್ನಡನಾಡು ಒಂದಾಗಿ ಉದಯಿಸುವ ವೇಳೆಗಾದರೂ ಇದು ಹೊರಬಂದಿತಲ್ಲಾ ಎಂಬುದೊಂದೇ ನನಗೆ ಬಹು ದೊಡ್ಡ ಸಮಾಧಾನ.

ಇಲ್ಲಿ ವಾಚಕರ ಮುಂದಿರುವುದು, ನನ್ನಿಂದ ರಚಿತವಾಗುತ್ತಿರುವ 'ಹೊಯ್ಸಳೇಶ್ವರ' ಎಂಬ ಬೃಹತ್ ಕಾದಂಬರಿಯ ಒಂದು ಖಂಡ ಮಾತ್ರ; ವಿಷ್ಣುವರ್ಧನನ ಜೀವನದ ಬಹು ಮುಖ್ಯ ಸಾಧನೆಗಳಲ್ಲೊಂದಾದ ತಲಕಾಡು ವಿಜಯದ ಚಿತ್ರಣ. ಉಳಿದ ಭಾಗವೂ ಕನ್ನಡಿಗರ ಹರಕೆಯಿದ್ದರೆ, ಆದಷ್ಟು ಬೇಗ ಹೊರಬರುತ್ತದೆ.

ಈ ಪುಸ್ತಕವನ್ನು ಕೃಪೆಯಿಟ್ಟು ಓದಿ ತಮ್ಮ ವಿಶ್ವಾಸದ ಮೆಚ್ಚಿಗೆಯನ್ನೂ ಪ್ರೀತಿಯ ಹರಕೆಯನ್ನೂ ನೀಡಿರುವ ಮುಖ್ಯ ಮಂತ್ರಿ ಶ್ರೀ ಸಿ. ನಿಜಲಿಂಗಪ್ಪನವರಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳು.

ಈ ಗ್ರಂಥ ರಚನೆಯ ಸಂದರ್ಭದಲ್ಲಿ ಹಲವಾರು ಮಿತ್ರರಿಂದ ನೆರವಾಗಿದೆ. ಅವರಲ್ಲಿ ಮುಖ್ಯರಾದವರು, ಮೈಸೂರಿನ ಆರ್ಕಿಯೋಲಾಜಿಕಲ್ ಶಾಖೆಯ ಡೈರೆಕ್ಟರವರಾದ ಡಾ|| ಎಂ. ಶೇಷಾದ್ರಿ, ಶ್ರೀ ಎಂ. ಹನುಮಂತ

ರಾಯರು, ಬೇಲೂರಿನ ಶ್ರೀ ಎಸ್. ಜೋಶಿಗಳು ಮತ್ತು ಶ್ರೀ ಕೊಂಡಿ ನಾರಾಯಣಾಚಾರ್ಯರು. ಇವರೆಲ್ಲರೂ ಅಗತ್ಯವಾದ ಗ್ರಂಥಗಳನ್ನು ಕೊಟ್ಟು ಸಲಹೆ ನೀಡಿ ಉಪಕರಿಸಿದ್ದಾರೆ. ಇವರಿಗೆ ನಾನು ಋಣಿ.

ಹಾಗೇ ಈ ಪುಸ್ತಕಕ್ಕೆ ಬಹು ಮುದ್ದಾದ ಹೊಯ್ಸಳ ದೇವಾಲಯದ ದ್ವಾರಚಿತ್ರವನ್ನು ಬರೆದು ಕೊಟ್ಟ ಶಾಸನ ಇಲಾಖೆಯ ಡ್ರಾಫ್ಟ್ಸ್‌ಮನ್ ಸಿ. ಕುಪ್ಪಾಚಾರಿಯವರಿಗೂ, ಮತ್ತು ಶ್ರೀ ನಾಗೇಶಮೂರ್ತಿಯವರಿಗೂ ನಾನು ಕೃತಜ್ಞ.

ಈ ಗ್ರಂಥವನ್ನು ನನ್ನಿಂದ ಒತ್ತಾಯಮಾಡಿ ಬರೆಯಿಸಿದ ಬೆಂಗಳೂರಿನ ಪ್ರಕಾಶಕರಾದ ಶ್ರೀ ಜಿ. ಕಲ್ಲಯ್ಯನವರಿಗೂ, ಮುದ್ದಾಗಿ ಮುದ್ರಿಸಿದ ಕಲ್ಯಾಣ್ ಪ್ರಿಂಟರ್ಸ್‌ರವರಿಗೂ ನನ್ನ ಸ್ನೇಹಪೂರ್ವಕವಾದ ವಂದನೆಗಳು.

'ಗಿರಿಕನ್ಯಕಾ'
ಯಾದವಗಿರಿ: ಮೈಸೂರು

ತ. ರಾ. ಸು.

# ವಿಷಯಾನುಕ್ರಮಣಿಕೆ

೧

# ದೊರೆ ಕೊಟ್ಟ ವಚನ

ಸಿಂಹಾಸನಾರೋಹಣ ಮಾಡಿದ ಗಳಿಗೆಯಿಂದಲೂ ವಿಷ್ಣುವರ್ಧನನಿಗಿದ್ದ ಚಿಂತೆ ಒಂದೇ ಒಂದು—

ರೋಗಗ್ರಸ್ತನಾಗಿದ್ದ ತನ್ನ ಅಗ್ರಜ ಹೊಯ್ಸಳ ಬಲ್ಲಾಳರಾಯನ, ಮೊದಲೇ ವ್ಯಾಧಿಯಿಂದ ಬಳಲುತ್ತಿದ್ದ ಜೀವಕ್ಕೆ ಒಂದು ಗಳಿಗೆಯೂ ಬಿಡುವು ಕೊಡದಂತೆ ಸಾಲು ಸಮರಗಳಿಂದ ಕಾಡಿದ ಚೋಳ–ಚಾಲುಕ್ಯರನ್ನು ಮೂಲೋತ್ಪಾಟನ ಮಾಡುವುದು.

ವಿಷ್ಣುವರ್ಧನನ ತಂದೆ ಯುವರಾಜ ಎರೆಯಂಗದೇವ, ಆತನ ತಂದೆ ವಿನಯಾದಿತ್ಯ–ಇಬ್ಬರೂ ಒಬ್ಬರ ಬೆನ್ನ ಹಿಂದೆ ಮತ್ತೊಬ್ಬರು ಕಣ್ಣುಮುಚ್ಚಿ ಹೊಯ್ಸಳ ಸಾಮ್ರಾಜ್ಯ ಲಕ್ಷ್ಮಿಯನ್ನು ಅನಾಥಳನ್ನಾಗಿ ಮಾಡಿ ತೆರಳಿದ ಹೊತ್ತಿನಲ್ಲಿ, ಎರೆಯಂಗದೇವನ ಮೂವರು ಮಕ್ಕಳಲ್ಲಿ ಹಿರಿಯನಾದ ಬಲ್ಲಾಳರಾಯ ಶಕವರ್ಷ ಸಾವಿರದ ಇಪ್ಪತ್ತೆರಡನೆಯ ವಿಕ್ರಮ ಸಂವತ್ಸರದಲ್ಲಿ ಸಿಂಹಾಸನಾರೋಹಣ ಮಾಡಿದ.

ಆದರೆ ಆತನ ಪಾಲಿಗೆ ಸಿಂಹಾಸನ ಸಿಂಹಾಸನವಾಗಲಿಲ್ಲ; ಸಮರಾಸನವಾಯಿತು.

*   *   *   *   *

ಸಳಮಹಾರಾಯ, ವಾಸನ್ತಿಕಾದೇವಿಯ ಮಂದಿರದಲ್ಲಿ, ಸಳೆಯಿಂದ ಹುಲಿಯನ್ನು ಹೊಯ್ದು, ಸುದತ್ತಮುನಿಗಳ ಹರಕೆ ಪಡೆದು, ಹೊಯ್ಸಳ ರಾಜ್ಯಕ್ಕೆ ಬೀಜಾರೋಪಣ ಮಾಡಿ, ಸುತ್ತಲ ಮಲೆಯರಸುಗಳನ್ನು ಮೆಟ್ಟಿ, ದ್ವಾರಸಮುದ್ರದ ನೂತನ ನಿರ್ಮಿತ ಕೋಟೆಯ ಮೇಲೆ ತನ್ನ ವ್ಯಾಘ್ರಪತಾಕೆಯನ್ನು ಹಾರಿಸಿದ ಗಳಿಗೆಯಿಂದಲೂ, ತಲಕಾಡಿನ ಗಂಗವಂಶದ ಅರಸುಗಳನ್ನು ಕಬಳಿಸಿ, ಕಾವೇರಿಯಿಂದ ತುಂಗಭದ್ರೆಯ ನಡುವಿನ ನಾಡಿನಲ್ಲಿ ತಮ್ಮ

ಸಾಮ್ರಾಜ್ಯವನ್ನು ಸ್ಥಾಪಿಸಿದ ಚೋಳರು, ಹೊಯ್ಸಳರ ವೈರಿಗಳಾಗಿದ್ದರು. ಧರ್ಮಪುರಿಯ ರಾಜಧಾನಿಯಲ್ಲಿ ಬೀಡುಬಿಟ್ಟ ಚೋಳಪ್ರತಿನಿಧಿಗಳು, ಅವರ ಸಾಮನ್ತರಾದ ಚೆಂಗಾಳ್ವ, ಕೊಂಗಾಳ್ವ ಪ್ರಭುಗಳು, ದಿನದಿನವೂ ಹೊಯ್ಸಳರಿಗೆ ಕಿರುಕುಳ ಕೊಡುವುದೇ ತಮ್ಮ ಕರ್ತವ್ಯವೆಂದು ನಂಬಿದ್ದರು.

ಹೊಯ್ಸಳ ಅರಸುಗಳು ಚೋಳರನ್ನು ಪ್ರತಿಭಟಿಸಿ, ಕಲ್ಯಾಣಿಯ ಚಾಲುಕ್ಯ ದೊರೆಗಳ ಸಾಮನ್ತರೆನಿಸಿಕೊಂಡ ಬಳಿಕ, ಈ ದ್ವೇಷಭಾವನೆ ಮತ್ತಷ್ಟು ಬಲಿದು, ಹೊಯ್ಸಳ ಅರಸುಗಳು ತಮ್ಮ ಉಳಿವಿಗಾಗಿ ಹಗಲಿರುಳೂ ಖಡ್ಗ ಧರಿಸಿ ಬಾಳಬೇಕಾಯಿತು. ಪ್ರಥಮ ವಿನಯಾದಿತ್ಯ, ನೃಪಕಾಮ ಹೊಯ್ಸಳ ದೊರೆಗಳ ಆಯುಷ್ಯವೆಲ್ಲವೂ ಈ ಸಮರಗಳಲ್ಲಿಯೇ ಸವೆದು ಹೋಯಿತು.

ನೃಪಕಾಮ ದೊರೆಯ ಬಳಿಕ, ಪಟ್ಟಕ್ಕೆ ಬಂದ ಇಮ್ಮಡಿ ವಿನಯಾದಿತ್ಯ ದೊರೆಯ ಕಾಲದಲ್ಲಿ ಹೊಯ್ಸಳರ ಪಾಲಿಗೆ ವಿಧಿ ಕೊಂಚ ಸುಮುಖವಾಯಿತು.

ಆತನ ಪ್ರಚಂಡ ಖಡ್ಗಾಘಾತದ ಇದಿರು ಹೊಯ್ಸಳರ ಕುಲವೈರಿಗಳಾದ ಚೆಂಗಾಳ್ವ, ಕೊಂಗಾಳ್ವರು, ಅಳ್ವಖೇಡದ ಅರಸುಗಳು ಸೋತು, ತಲೆ ಬಾಗಿದುದಷ್ಟೇ ಅಲ್ಲ, ಕನಸಿನಲ್ಲೂ 'ರಕ್ಕಸ ಹೊಯ್ಸಳ' ನೆಂಬ ಆರಕ್ಕರದ ಬಿರುದು ಕೆತ್ತಿಸಿದ ಪಳವಿಗೆಯನ್ನು ಕಂಡು ಬೆದರುವಂತಾಯಿತು. ವಿನಯಾದಿತ್ಯ ಹೊಯ್ಸಳರಾಯನ ಪುತ್ರ ಯುವರಾಜ ಎರೆಯಂಗದೇವ ತಂದೆಯಷ್ಟೇ ಪರಾಕ್ರಮಶಾಲಿ. ವಿನಯಾದಿತ್ಯನ ಅಸಿಧಾರೆ, ಕೊಂಕಣಿಗರನ್ನು, ಸುತ್ತಲ ಮಲೆಯರಸುಗಳನ್ನು ಸವರಿದರೆ, ಪುತ್ರನ ಪರಾಕ್ರಮ ಚೋಳರು ತಳಿರುಟ್ಟು ಬಾಳುವಂತೆ ಮಾಡಿ, ಭೋಜನ ಧಾರಾನಗರವನ್ನು ಸುಟ್ಟು, ಆ ಕೋಟೆಯ ಮೇಲೆ ಚಾಲುಕ್ಯರ ಜಯಧ್ವಜವನ್ನೂ ತನ್ನ ಕೀರ್ತಿಧ್ವಜವನ್ನೂ ಬೆಳಗಿಸಿ 'ಚಾಲುಕ್ಯ ಭುಜಬಲದಂಡ' ಎಂಬ ಪ್ರಶಸ್ತಿಗೆ ಪಾತ್ರವಾಯಿತು.

ಯುವರಾಜ ಎರೆಯಂಗದೇವನ ಪರಾಕ್ರಮವೇ, ಕ್ಷತ್ರತೇಜವೇ ಪುತ್ರರೂಪವಾದಂತೆ, ಆತನ ಪಟ್ಟ ಮಹಾದೇವಿ ಏಚಲಾದೇವಿಯ ಗರ್ಭ ಸುಧಾಂಬುಧಿಯಲ್ಲಿ ಕಟ್ಟಾಳುಗಳಾದ ಬಲ್ಲಾಳ ದೇವ, ವಿಷ್ಣುವರ್ಧನ, ಉದಯಾದಿತ್ಯರು ಜನಿಸಿದರು. ಕತ್ತಿ ನಡೆದಲ್ಲಿ ಜಯ, ಕಾಲಿಟ್ಟಲ್ಲಿ ಕೀರ್ತಿ, ಕಣ್ಣಾಡಿದಲ್ಲಿ ಹರ್ಷಗಳು ಲಭಿಸಿದ ಹೊಯ್ಸಳರ ಹಿರಿಮೆಯನ್ನು ಕಂಡು

ದೇವತೆಗಳ ಕರುಬುಬುದ್ಧಿ ಕೆರಳಿತೇನೊ! ನಡುಹಗಲ ಮಾರ್ತಾಂಡನಂತೆ ಉಜ್ವಲ ವೈಭವದಿಂದ ಬೆಳಗುತ್ತಿದ್ದ ಹೊಯ್ಸಳರ ಅರಮನೆಯಲ್ಲಿ, ವಿಧಿ ಇದ್ದಕ್ಕಿದ್ದ ಹಾಗೇ ನಡುರಾತ್ರಿಯ ಕತ್ತಲನ್ನು ಕವಿಯಿಸಿತು—ಎರೆಯಂಗ ದೇವನ ಬಾಳ ಮರೆವನ್ನ ಸಾವಿನ ಸಿಡಿಲೇಟಿನಿಂದ ಮುರಿದು.

ಹೊಯ್ಸಳರ ಕೀರ್ತಿಲತೆಗೆ ಆಶ್ರಯನಾಗಿ ಹೆಮ್ಮರದಂತೆ ಬೆಳೆದ ಎರೆಯಂಗದೇವ ವಿಧಿಯ ವಿಕಟಾಟ್ಟಹಾಸದ ಸಿಡಿಲಾಘಾತಕ್ಕೆ ಗುರಿಯಾಗಿ ಧರಾಶಾಯಿಯಾದಾಗ, ವೃದ್ಧಾಪ್ಯದಲ್ಲಿ ಮಗನನ್ನೆ ನಂಬಿ ಬೆಳೆದ ವಿನಯಾದಿತ್ಯನ ಬಾಳಬಳ್ಳಿಯೂ, ಮಗನೊಂದಿಗೆ ಇಳೆಗುರುಳಿ, ಹೊಯ್ಸಳ ರಾಜ್ಯ ಲಕ್ಷ್ಮಿ ಇದ್ದಕ್ಕಿದ್ದ ಹಾಗೇ ಅನಾಥೆಯಾದಳು.

ಈ ಕತ್ತಲು ಕವಿದ ಹೊತ್ತಿನಲ್ಲಿ ಎರೆಯಂಗದೇವನ ಪ್ರಥಮ ಪುತ್ರ ಬಲ್ಲಾಳರಾಯ ಸಿಂಹಾಸನವನ್ನೇರಿದ.

ಬಲ್ಲಾಳರಾಯ ತನ್ನ ತಂದೆ ಎರೆಯಂಗದೇವನಿಗೆ ತಕ್ಕ ವೀರಪುತ್ರ. ಆದರೆ ಹುಟ್ಟಿನೊಂದಿಗೇ ಕೈಹಿಡಿದು ಬಂದು, ಆಗಾಗ ಮರುಕಳಿಸಿ, ಉಲ್ಬಣಿಸಿ, ಕಾಡುವ ರೋಗ ಬಾಧೆ, ಆತನ ಮೈಯನ್ನು ಟೊಳ್ಳು ಮಾಡಿ, ಆತನ ರೋಗಗ್ರಸ್ತ ದುರ್ಬಲ ಹಸ್ತಗಳಿಂದ ಸುಲಭವಾಗಿ ಹೊಯ್ಸಳ ರಾಜ್ಯಶ್ರೀಯನ್ನು ಕಸಿದು ಕೊಳ್ಳಬಹುದು ಎಂಬ ಆಸೆಯನ್ನು ಹೊಯ್ಸಳ ಶತ್ರುಗಳಲ್ಲಿ ಮೂಡಿಸಿತು.

ವಿನಯಾದಿತ್ಯ, ಎರಯಂಗದೇವರಿಂದ ಒದೆತಿಂದು, ಬಾಲ ಮುದುರಿ ಕೊಂಡಿದ್ದ ಚೆಂಗಾಳ್ವ, ಕೊಂಗಾಳ್ವ ಮೊದಲಾದವರು, ಮತ್ತೆ ಹಲ್ಲು ಮಸೆಯ ಲಾರಂಭಿಸಿದರು.

ಆ ಹೊತ್ತಿನಲ್ಲಿ ನೃಪಕಾಮ ದೊರೆಯಿಂದ ಪಾಲಿತನಾದ ಏಚದಂಡ ನಾಯಕನ ಮಗ ದಂಡನಾಯಕ ಗಂಗರಾಜ, ವಿನಯಾದಿತ್ಯನ ಮಡದಿ ಕೆಳೆಯಬ್ಬರಸಿಯಿಂದ ಪರಿಪಾಲಿತನಾದ ಮರಿಯಾನೆದಂಡನಾಯಕನ ಮಕ್ಕಳಾದ ಮರಿಯಾನೆ ಮತ್ತು ಭರತದಂಡನಾಯಕರು, ಎರೆಯಂಗದೇವನ ಅಳಿಯನಾದ ಹರಿಗೆಯ ಹೆಮ್ಮಾಡಿರಾಯ ಮೊದಲಾದ ನಿಷ್ಠರ ನೆರವು—

ಅವರೆಲ್ಲರಿಗಿಂತ ಹೆಚ್ಚಾಗಿ, ಬಲ್ಲಾಳರಾಯನ ಎರಡು ಬಾಹುಗಳಂತಿದ್ದ ಸೋದರರು ವಿಷ್ಣುವರ್ಧನ-ಉದಯಾದಿತ್ಯರ ಭ್ರಾತೃವಾತ್ಸಲ್ಯಪೂರ್ಣವಾದ ಪರಾಕ್ರಮ—

ಇವು ಉಕ್ಕಿನ ಕೋಟೆಯಾಗಿ ನಿಂತು, 'ಅರಸು ದುರ್ಬಲನಾದ ಮಾತ್ರಕ್ಕೆ ರಾಜ್ಯವೇ ದುರ್ಬಲವಾದಂತಲ್ಲ' ಎಂಬ ನಿಷ್ಠುರ ಸತ್ಯವನ್ನು ಹೊಯ್ಸಳರ ಆಜನ್ಮ ವೈರಿಗಳಿಗೆ ಎಂದೆಂದೂ ಮರೆಯದಂತೆ ಮನವರಿಕೆ ಮಾಡಿಕೊಟ್ಟವು.

ಆ ವಿಜಯಗಳೊಂದಿಗೆ, ವಿಜಯಶ್ರೀ, ಕೀರ್ತಿಲಕ್ಷ್ಮಿ, ಭಾಗ್ಯದೇವತೆಗಳಂತಿದ್ದ ಮರಿಯಾನೆದಂಡನಾಯಕನ ಮಕ್ಕಳಾದ ಪದ್ಮಲೆ, ಚಾಮಲೆ, ಬೊಪ್ಪಲಾದೇವಿಯರನ್ನು ಪಾಣಿಗ್ರಹಣ ಮಾಡಿ, ಬಲ್ಲಾಳರಾಯ, ಕತ್ತಲು ಕವಿದ ಹೊಯ್ಸಳ ಆಕಾಶದಲ್ಲಿ ಮತ್ತೆ ಆಶಾತಾರೆಯನ್ನು ಹೊಳೆಯಿಸಿದ.

ಎಲ್ಲರೂ ಮತ್ತೆ ಇನ್ನು ಏಳಿಗೆಯ ಕಾಲ ಆರಂಭವಾಯಿತು ಎಂಬ ತೃಪ್ತಿಯನ್ನು ತಳೆದರು.

ಆದರೆ ಅಷ್ಟು ಬೇಗ, ಅಷ್ಟು ಸುಲಭವಾಗಿ, ಆ ತೃಪ್ತಿಯನ್ನು ನೀಡುವ ಬಯಕೆ ವಿಧಿಗಿರಲಿಲ್ಲ.

ಬಲ್ಲಾಳರಾಯನ ವಿವಾಹೋತ್ಸವವಾದ ಹರ್ಷದಲ್ಲಿ, ಹೊಯ್ಸಳ ರಾಜ್ಯ ತಲ್ಲೀನವಾಗಿದ್ದ ಹೊತ್ತನ್ನೇ, ತಮ್ಮ ಮಿತ್ರದ್ರೋಹದ ಕಿರಾತ ಕಾರ್ಯಕ್ಕೆ ಆರಿಸಿಕೊಂಡಂತೆ, ಹೊಯ್ಸಳರ ರಕ್ತದಿಂದ ಪುಷ್ಟನಾದ ಚಾಲುಕ್ಯ ಚಕ್ರವರ್ತಿ ವಿಕ್ರಮಾದಿತ್ಯ ಕಾಪಾಡಿದ ಕೈಯನ್ನು ಕಡಿಯುವ ಅಳಿಯಾಸೆಯಿಂದ, ತನ್ನ ಸಾಮಂತನಾದ ಪೊಟ್ಟಪೊಂಬುರ್ಚಪುರದ ಸಾಂತರ ಅರಸು ಜಗದೇವನನ್ನು ಹೊಯ್ಸಳ ರಾಜ್ಯದ ಮೇಲೆ ಧಾಳಿಮಾಡಲು ಅಟ್ಟಿದ.

ಆ ದಿಕ್ಕಿನಿಂದ ಬಲ್ಲಾಳರಾಯನಾಗಲಿ, ಅಥವಾ ಆತನ ದಂಡನಾಯಕರಾಗಲಿ, ಯಾರೂ ಭೀತಿಯನ್ನು ನಿರೀಕ್ಷಿಸಿರಲಿಲ್ಲ. ರಕ್ಷಣೆಯನ್ನು ನಿರೀಕ್ಷಿಸಿದ ದಿಕ್ಕಿನಿಂದಲೇ, ಆಪತ್ತು ಕವಿದು ಬರುವುದೆಂದು ಕನಸುಮನಸಿನಲ್ಲೂ ಊಹಿಸದ ಹೊಯ್ಸಳರ ನಂಬಿಕೆಯನ್ನು ದುರುಪಯೋಗಪಡಿಸಿಕೊಂಡ ಜಗದೇವರಾಯನ ಸೇನೆ, ರಾಜಧಾನಿ ದ್ವಾರಸಮುದ್ರದ ಬಳಿಗೇ ಬಂದು, ಕೋಟೆಯ ಮೇಲೆ ಅಂಬಿನ ಮಳೆಗರೆಯುವವರೆಗೂ, ಯಾರಿಗೂ ಆ ದಾಳಿಯ ಸುಳಿವು ಸಿಗಲಿಲ್ಲ.

ಎಂತಲೇ ಒಂದು ಗಳಿಗೆ ಎಲ್ಲರೂ ದಿಗ್ಭ್ರಾಂತರಾದರು. ನಿಂತ ನೆಲವೇ ಕುಸಿದಂತಾದ ಆ ಗಳಿಗೆಯಲ್ಲಿ ಅಲ್ಪಕಾಲ ಕಿಂಕರ್ತವ್ಯಮೂಢನಾಗಿದ್ದ

ಬಲ್ಲಾಳರಾಯನ ಹೃದಯದಲ್ಲಿ, ಮರುಗಳಿಗೆಯೇ ಕ್ರೋಧದ ದಾವಾಗ್ನಿ ಪ್ರಜ್ವಲಿಸಿತು. ಆ 'ಮಿತ್ರದ್ರೋಹ ಮೃತ್ಯುವಿಗೆ ಆಹ್ವಾನ' ವೆಂಬ ಪಾಠವನ್ನು ಜಗದೇವರಾಯನಿಗೆ, ಅವನ ಸೋಲಿನ ಮೂಲಕ ಚಾಲುಕ್ಯ ಚಕ್ರವರ್ತಿಗೆ ಕಲಿಸುವ ನಿರ್ಧಾರದಿಂದ, ಬಲ್ಲಾಳರಾಯ ಸ್ವಯಂ ಖಡ್ಗ ಧರಿಸಿದ.

ಬಲ್ಲಾಳರಾಯ ಅಟ್ಟಿದ ವೇಗಾಯುಲರಿಂದ ಜಗದೇವರಾಯನ ದಾಳಿಯ ಸುದ್ದಿಯನ್ನರಿತ ವಿಷ್ಣುವರ್ಧನ ತೊಂಡನೂರಿನಿಂದ ಪ್ರಬಲವಾದ ಸೇನೆಯೊಂದಿಗೆ ರಾಜಧಾನಿಯ ರಕ್ಷಣೆಗೆ ಧಾವಿಸಿದ.

ಜಗದೇವರಾಯ ದ್ವಾರಸಮುದ್ರದ ಮೇಲೆ ಧಾಳಿ ಮಾಡಿದಾಗ, ಬಲ್ಲಾಳರಾಯನ ಆರೋಗ್ಯ ನೆಟ್ಟಗಿರಲಿಲ್ಲ. ಹುಟ್ಟಿದಂದಿನಿಂದಲೂ ಆತನನ್ನು ಬಳಲಿಸುತ್ತಿದ್ದ ವ್ಯಾಧಿ ಮತ್ತೆ ಮರುಕಳಿಸುವ ಸೂಚನೆಗಳನ್ನು ನೀಡಿತ್ತು. ಎಂತಲೇ ಆತನೇ ಸ್ವಯಂ ರಣರಂಗಕ್ಕೆ ಹೋಗುವುದನ್ನು ತಪ್ಪಿಸಲು, ಆತನ ಸಚಿವರು, ದಂಡನಾಯಕರು ಪ್ರಯತ್ನಿಸಿದರು. ಆದರೆ ಬಲ್ಲಾಳರಾಯ ಅವರು ಯಾರ ಮಾತಿಗೂ ಕಿವಿಕೊಡಲಿಲ್ಲ.

'ಈ ಧಾಳಿಯಿಂದ ಚಾಲುಕ್ಯ ಚಕ್ರವರ್ತಿಗಳು ನಮ್ಮ ಪೌರುಷಕ್ಕೇ ಸವಾಲು ಹಾಕಿದ್ದಾರೆ. ರೋಗಿಷ್ಟನಾದ ಇವನೇನು ನಮ್ಮ ದಾಳಿಯನ್ನು ಎದುರಿಸಿಯಾನು ಎಂಬ ನಂಬಿಕೆ ಅವರಿಗೆ ಇರುವಂತಿದೆ. ಇಲ್ಲವಾದಲ್ಲಿ ಅವರು ಈ ಹೊತ್ತನ್ನೇ ತಮ್ಮ ಮಿತ್ರದ್ರೋಹಕ್ಕೆ ಆರಿಸಿಕೊಳ್ಳುತ್ತಿರಲಿಲ್ಲ. ಎಂತಲೇ ಈ ಬಾರಿಯದು ನಮ್ಮ ಸತ್ವಪರೀಕ್ಷೆಯ ಸಮರ. ಜಾಡ್ಯ ದುರ್ಬಲವಾದರೂ, ನಮ್ಮ ತೋಳುಗಳಲ್ಲಿ ಇಂಥ ಹಿಸುಣಿ ಸೊಕ್ಕುಗಳನ್ನು ಹೊಸಗಬಲ್ಲ ಶಕ್ತಿಯಿದೆ ಎಂದೇ ತೋರಿಸಿಕೊಡಬೇಕು. ಇಲ್ಲವಾದಲ್ಲಿ ಕಿರೀಟ ಹೊತ್ತವರಿಗೆ ಕತ್ತಿ ಹಿಡಿಯುವಷ್ಟು ಶಕ್ತಿಯೂ ಇರಲಿಲ್ಲ ಎಂದು ಲೋಕ ನಾಳೆ ನಮ್ಮನ್ನು ಆಡಿಕೊಂಡು ನಕ್ಕೀತು. ಆದ್ದರಿಂದ ಯಾರೂ ನಮ್ಮನ್ನು ತಡೆಯಬೇಡಿ.'

—ಎಂದು ನಿಷ್ಠುರವಾಗಿ ಹೇಳಿದ.

'ಜಿತೇನ ಲಭ್ಯತೇ ಲಕ್ಷ್ಮೀ
ಹತೇನಾಪಿ ಸುರಾಂಗನಾ
ಕ್ಷಣೇ ವಿಧ್ವಂಸಿನೀ ಕಾಯೇ
ಕಾ ಚಿಂತಾ ಮರಣೇ ರಣೇ'

—ಎಂದು ಸ್ಪಷ್ಟವಾಗಿ ಸಾರಿ ಹೇಳಿ, ಆ ಆರ್ಯೋಕ್ತಿಯನ್ನು ಉದ್ಧರಿಸಲೇ ಜನಿಸಿದವನಂತೆ, ಸಮರವಸ್ತ್ರ ಧರಿಸಿ, ತನ್ನ ಕಾಂಭೋಜವಾಜಿಯನ್ನೇರಿ, ಒರೆಗಳೆದ ಖಡ್ಗವನ್ನು ಸಿಡಿಲಿನಂತೆ ಬೀಸುತ್ತಾ, ಜಗದೇವನ ಪಾಳಯದಲ್ಲಿ ನುಗ್ಗಿದ.

ಅಂದಿನ ಸಮರದಲ್ಲಿ ಬಲ್ಲಾಳರಾಯ ಮೆರೆದ ಬಲ್ಲಾಳ್ತನ 'ನಭೂತೋ ನಭವಿಷ್ಯತಿ' ಎನ್ನುವಂತಿತ್ತು.

ಇದಿರಾದ ಸೈನಿಕರನ್ನು ಕೊಚ್ಚಿ ಕೆಡಹುತ್ತಾ, ಕುರುಕ್ಷೇತ್ರದ ಸಮರಾಂಗಣದಲ್ಲಿ ಎಲ್ಲರನ್ನು ಬಿಟ್ಟು, ತನ್ನ ಪತ್ನಿಯ ಮಾನಭಂಗ ಮಾಡಿದ ದುಶ್ಶಾಸನನನ್ನೇ ಹುಡುಕಿಕೊಂಡು ಅಲೆದ ಭೀಮಸೇನನಂತೆ, ಬಲ್ಲಾಳರಾಯ ಗಜಾಶ್ವಪಡೆಗಳ ನಡುವೆ ಅವಿತ ಜಗದೇವರಾಯನನ್ನೇ ಹುಡುಕಿಕೊಂಡು ಹೊರಟ. ಆ ದಿನ ಆತನ ಖಡ್ಗವನ್ನು ಎದುರಿಸಬಲ್ಲ ಶಕ್ತಿ ಲೋಕದಲ್ಲಿ ಯಾರಿಗೂ ಇದ್ದಂತಿರಲಿಲ್ಲ. ಆತನ ಖಡ್ಗಜ್ವಾಲೆಯ ಪ್ರಚಂಡ ದೀಧಿತಿಯ ಇದಿರು, ಅರಿಬಲ ಮಂಜಿನ ಮೋಡದಂತೆ ಕರಗಿತು.

ಹೊಯ್ಸಳರನ್ನು ಕೆಣಕಲು ಬಂದ ಜಗದೇವರಾಯ ತನ್ನ ಜೀವಭೀತಿಯನ್ನು ಮರೆತು ಬಂದಿರಲಿಲ್ಲ. ತನ್ನ ಜೀವರಕ್ಷಣೆಗೆ ಸಾಕಷ್ಟು ಸಿದ್ಧತೆಗಳನ್ನು ಮಾಡಿಕೊಂಡಿದ್ದ. ಆನೆಯ ಮೇಲಿನ ಅಂಬಾರಿಯಲ್ಲಿ ಕುಳಿತ ಆತನನ್ನು ಗಜಾಶ್ವ ಪಥಿಕ ಬಲಗಳು ಕೋಟೆಯಂತೆ ಸುತ್ತುಗಟ್ಟಿದ್ದವು. ರಣಾಂಗಣದಲ್ಲಿ ಅವನನ್ನು ಅರಸಿಕೊಂಡು ಬಂದ ಬಲ್ಲಾಳರಾಯ, ಸುತ್ತುಗಟ್ಟಿದ ಸೇನಾ ವ್ಯೂಹವನ್ನು ಭೇದಿಸಿಕೊಂಡು, ಅವನ ಆನೆಯ ಮೇಲೇ ತನ್ನ ಕುದುರೆಯನ್ನು ಹಾಯಿಸಿ, ಮೊದಲ ಏಟಿಗೇ ಆನೆಯ ಸೊಂಡಲನ್ನು ಕತ್ತರಿಸಿ ಕೆಡವಿದ. ಬಲ್ಲಾಳರಾಯನ ಪರಾಕ್ರಮವನ್ನು ಮೂರು ಲೋಕಕ್ಕೂ ಸಾರುವಂತೆ, ಗಾಯಗೊಂಡ ದಂತಿ ಘೀಳಿಟ್ಟು, ಗಾಯದ ನೋವಿನಿಂದ ಹುಚ್ಚಾಗಿ, ಮಾವಟಿಗನ ಅಂಕುಶದ ಅಂಕೆಯನ್ನೂ ಲೆಕ್ಕಿಸದೆ ಹುಚ್ಚಾಗಿ, ಇದಿರಾದವರನ್ನು ತುಳಿದು ಓಡತೊಡಗಿತು. ತನ್ನ ಗಜಕ್ಕಾದ ಗತಿಯೇ ತನಗೂ ಆಗಬಹುದೆಂದು ಊಹಿಸಿದ ಜಗದೇವರಾಯ, ಗೆಲುವಿನ ಆಸೆಯನ್ನು ಬಿಟ್ಟು, ಜೀವ ಉಳಿದರೆ ಸಾಕು ಎಂದು ಆನೆಯಿಂದ ಧುಮುಕಿ, ಪಲಾಯನ ಮಾಡಿದ. ಗೌರವಕ್ಕಿಂತಲೂ, ಜೀವ ಭೀತಿ ಹಿರಿದೆಂದು ಭಾವಿಸಿದ ಜಗದೇವರಾಯನನ್ನು

ನೋಡಿ, ಬಲ್ಲಾಳರಾಯನಿಗೆ ಹೇಸಿಗೆ ಹುಟ್ಟಿತು.

'ಛಿ! ಪೋಪ್ಪರ್ಂದೆ! ಓಡಿಹೋಗುತ್ತೀಯಾ ಕುನ್ನಿ.'

—ಎಂದು ಮೂದಲಿಸುತ್ತಾ, ಓಡುವ ಜಗದೇವರಾಯನ ಬೆನ್ನಟ್ಟಿ ಬಳಿಸಾರಿ, ಅವನನ್ನು ಹಿಡಿಯಲು ಕತ್ತಿಗೇ ಕೈಹಾಕಿದ.

ಕೊಲ್ಲಬಂದ ಬೇಟೆಗಾರರನ್ನು ಕಂಡ ಹಂದಿಯಂತೆ, ಜೀವಭಯದಿಂದ ಚೀರುತ್ತಾ, ಜಗದೇವರಾಯ ಕುಣಿದು, ಕುಪ್ಪಳಿಸಿ ಹೊಯ್ದಾಡಿ, ಹೇಗೋ ಬಲ್ಲಾಳರಾಯನ ಕೈಯಿಂದ ತಪ್ಪಿಸಿಕೊಂಡು, ಆರೋಹಿಯಿಲ್ಲದೆ ಅಲೆಯುತ್ತಿದ್ದ ಅಶ್ವವೊಂದನ್ನು ಹತ್ತಿ ದೌಡಾಯಿಸಿದ. ಆ ಗದ್ದಲದಲ್ಲಿ ಅವನ ಕತ್ತಿನ ಪಚ್ಚೆಯ ಪದಕದ ಮೌಕ್ತಿಕ ಮಾಲೆ, ಬಲ್ಲಾಳರಾಯನ ಕೈಯಲ್ಲೇ ಉಳಿಯಿತು.

ಜಗದೇವರಾಯ ಓಡಿದುದನ್ನು ಕಂಡು, ಅವನ ಸೇನೆಯ ಅಳಿದುಳಿದ ಸೈನಿಕರೂ ಅವನು ಓಡಿದ ದಾರಿಯೇ ತಮಗೂ ಮಾರ್ಗವೆಂದರಿತು, ದ್ವಾರಸಮುದ್ರದ ಹೊಯ್ಸಳಲಕ್ಷ್ಮಿಗೆ ತಮ್ಮ ಕೀರ್ತಿಯನ್ನು ಪಾದಗಾಣಿಕೆಯಾಗಿ ಒಪ್ಪಿಸಿ ಓಡಿದರು. ಜಗದೇವರಾಯನ ಆನೆ ಕುದುರೆಗಳು, ಭಂಡಾರ, ಶಸ್ತ್ರ ಸಂಪತ್ತು ವಿಜಯಿಾ ಹೊಯ್ಸಳ ಪಡೆಯ ಕೈವಶವಾಯಿತು. ಜಗದೇವರಾಯನ ಓಟ ನಾಣ್ಣುಡಿಯಾಗಿ ನಿಂತಿತು ಜನರಲ್ಲಿ. ಬಲ್ಲಾಳರಾಯನ ಬೀರಕ್ಕೆ ಮೆಚ್ಚಿದ ಜಯಲಕ್ಷ್ಮಿ ಆತನ ಕೊರಳಿಗೆ ವಿಜಯಮಾಲೆಯನ್ನಿಕ್ಕಿದಳು.

ವಿಜಯಸ್ನಾನದಿಂದ ದುರ್ಬಲವಾದ ಬಲ್ಲಾಳರಾಯನ ಮೈಯನ್ನು ಆವರಿಸಿದ ಸಮರಾವೇಶ ಇಳಿಯಿತು. ಅದರೊಂದಿಗೆ ಮತ್ತೆ ವ್ಯಾಧಿಯೂ ಮರುಕಳಿಸಿತು.

ಮೊದಲೇ ರೋಗದಿಂದ ದುರ್ಬಲವಾದ ಬಲ್ಲಾಳರಾಯನ ಮೈ, ಯುದ್ಧದಲ್ಲಾದ ಗಾಯಗಳ ರಕ್ತಸ್ರಾವದಿಂದ ಮತ್ತಷ್ಟು ದುರ್ಬಲವಾಗಿ, ಮಲಗಿದಲ್ಲಿಂದ ಅಲುಗಾಡಲಾಗದಂತಾಗಿ ಹಾಸಿಗೆ ಹಿಡಿದ.

ಅದರಿಂದಾಗಿ ಆತನ ನೆರವಿಗೆ ಬಂದ ವಿಷ್ಣುವರ್ಧನ, ಯುದ್ಧಾನಂತರ ತೊಂಡನೂರಿಗೆ ಹಿಂದಿರುಗದೆ, ತನ್ನ ಅಗ್ರಜನ ಬಳಿಯೇ ನಿಂತ.

ದಿನದಿನಕ್ಕೆ ಮೈಯ ಗಾಯಗಳು ಮಾದಂತೆ, ಬಲ್ಲಾಳರಾಯ ಮತ್ತೆ ಚೇತರಿಸಿಕೊಳ್ಳುತ್ತಾನೆ ಎಂಬ ವಿಷ್ಣುವರ್ಧನನ ನಿರೀಕ್ಷೆ ನಿಜವಾಗದೆ, ದಿನ

ದಿನಕ್ಕೆ ಆತನ ಆರೋಗ್ಯ ಕೆಡುತ್ತಲೇ ಹೋಗಿ, ಬಲ್ಲಾಳರಾಯನಿಗೇ ತಾನಿನ್ನು ಬದುಕುವುದಿಲ್ಲ ಎಂಬುದು ಮನವರಿಕೆಯಾಯಿತು.

ಒಂದು ದಿನ ಸಂಜೆ, ಹಗಲಿನ ಬಿಸಿಲಿನೊಂದಿಗೆ ತಾನೂ ಉರಿದ ಜ್ವರದ ತಾಪ, ಕೊಂಚ ತಗ್ಗಿದಾಗ, ಬಲ್ಲಾಳರಾಯ ಜ್ವರತಾಪದಿಂದ ಬಳಲಿದ ಕಣ್ಣನ್ನು ತೆರೆದು, ಸನ್ನೆಯಿಂದ ಸುತ್ತಲಿದ್ದ ಮಡದಿಯರು, ಪರಿಚಾರಿಕೆಯರು ಎಲ್ಲರನ್ನೂ ಹೊರಗೆ ಕಳುಹಿ, ವಿಷ್ಣುವರ್ಧನನೊಬ್ಬನನ್ನೇ ತನ್ನ ಸಜ್ಜೆಯ ಬಳಿ ಉಳಿಸಿಕೊಂಡು, ಆತನನ್ನು ತನ್ನ ಹತ್ತಿರ ಬರುವಂತೆ ಕರೆದ.

'ಏನು ಅಣ್ಣಾಜಿ?'

—ಬಲ್ಲಾಳರಾಯನ ತಲೆದಿಂಬಿನ ಬಳಿ ನಿಂತು ಕೇಳಿದ ವಿಷ್ಣುವರ್ಧನ.

'ಬಿಟ್ಟೀ. . . .'

—ಎಂದು ತನ್ನ ಜ್ವರತಪ್ತ ಹಣೆಯನ್ನು ನೇವರಿಸುತ್ತಿದ್ದ ವಿಷ್ಣುವರ್ಧನನ ಕೈಯನ್ನು ತನ್ನ ಕೈಗಳಿಂದ ಹಿಡಿದು, ಆತನ ಮುಖವನ್ನೇ ದಿಟ್ಟಿಸಿ ನೋಡುತ್ತಾ—

'ನಾನಿನ್ನು ಬದುಕುವುದಿಲ್ಲ ಬಿಟ್ಟಿ.'

—ಎಂದ ಬಲ್ಲಾಳರಾಯ ಕ್ಷೀಣಸ್ವರದಲ್ಲಿ.

ಆ ಮಾತನ್ನು ಕೇಳುತ್ತಿದ್ದಹಾಗೆ ಬಿಟ್ಟಿದೇವನ ಕಣ್ಣುಗಳನ್ನು ಸಬಳದಿಂದ ಇರಿದಂತಾಗಿ, ಕಣ್ಣಿನಲ್ಲಿ ನೀರು ತುಂಬಿತು. ಆದರೆ ಕಣ್ಣಿನಲ್ಲಿ ತುಂಬಿದ ನೀರು ಕೆಳಗೆ ಧುಮುಕದಂತೆ ತಡೆದು ದುಃಖದಿಂದ ಕಂಪಿಸುವ ಧ್ವನಿಯನ್ನು ಪ್ರಯತ್ನಪೂರ್ವಕವಾಗಿ ಬಿಗಿಮಾಡಿ, ಎಲ್ಲೋ ತಲೆಮರಸಿಕೊಂಡ ನಗೆಯನ್ನು ಬಲವಂತವಾಗಿ ತುಟಿಯಮೇಲೆ ತಂದು–

'ನೀವಿಷ್ಟು ಧೈರ್ಯ ಕೆಡಬಾರದು ಅಣ್ಣಾಜಿ. ದಿನ ದಿನಕ್ಕೆ ನಿಮ್ಮ ಆರೋಗ್ಯ ಉತ್ತಮವಾಗುತ್ತಿದೆಯೆಂದು ವೈದ್ಯರು ಹೇಳುತ್ತಿದ್ದಾರೆ.'

—ಎಂದು ಬಲ್ಲಾಳರಾಯನ ಹೃದಯದಲ್ಲಿ, ತನಗೇ ಇಲ್ಲದ ಆಸೆಯನ್ನು ತುಂಬಲು ಯತ್ನಿಸಿದ ವಿಷ್ಣುವರ್ಧನ.

ವಿಷ್ಣುವರ್ಧನನ ಮಾತು ಕೇಳಿ, ಬಲ್ಲಾಳರಾಯನ ಕಾಂತಿಗುಂದಿದ ತುಟಿಗಳ ಮೇಲೆ ಮಾಸಲು ನಗೆ ಸುಳಿಯಿತು.

'ಸಾವಿನ ಭಯದಿಂದ ನಾನು ಈ ಮಾತು ಹೇಳುತ್ತಿದ್ದೇನೆ ಎಂದು

ಕೊಂಡೆಯಾ ಬಿಟ್ಟಿಯಣ್ಣ, ಊಹೂ–ನನಗಾಭೀತಿಯಿಲ್ಲ. ಎಂದಿದ್ದರೂ ಬಂದೇ ಬರುವ ಸಾವು ಇಂದೇ ಬಂದರೇನು. ಅದು ಹಾಸಿಗೆಯ ಮೇಲೆ ಬರದೆ ಸಮರಾಂಗಣದಲ್ಲೇ ಬಂದಿದ್ದರೆ ಒಳಿತಾಗಿತ್ತು. ಹೀಗೆ ಬರಬೇಕು ಎಂದು ಶಿವನಿಚ್ಛೆಯಿತ್ತು; ಹಾಗಾಗಲಿ. ನನಗೆ ಆ ಚಿಂತೆ ಇಲ್ಲ ಬಿಟ್ಟಿ, ನನಗಿರುವುದೇ ಬೇರೆ ಚಿಂತೆ?'

'ಅದೇನು ಹೇಳಿ ಅಣ್ಣಾಜಿ. ನಿಮ್ಮ ಚಿಂತೆ ಏನಿದ್ದರೂ ನಾನು ತೀರಿಸುತ್ತೇನೆ.'

'ನಿಜವೇ?'

'ಗತಿಸಿದ ಅಪ್ಪಾಜಿಯವರ ಪಾದದಾಣೆ, ಅಪ್ಪೆ ಏಚಲೆಯ ತಲೆಯಾಣೆ—ನಿಮಗೆ ಕೊಟ್ಟ ಮಾತು ತಪ್ಪುವುದಿಲ್ಲ.'

'ಮಾತು ಏನೆಂದು ಕೇಳದೇ ಭಾಷೆ ಕೊಟ್ಟೆಯಲ್ಲ ಬಿಟ್ಟಿಯಣ್ಣ. . . .'

'ಅದು ಏನಿದ್ದರೂ—ಅದು ನನಗೆ ದೈವಾಜ್ಞೆ. ಅದೇನು ಹೇಳಿ; ಆ ಚಿಂತೆಯನ್ನು ಮರೆತುಬಿಡಿ.'

'ನನಗಿರುವುದು ನನ್ನ ಚಿಂತೆಯಲ್ಲ, ಈ ರಾಜ್ಯದ ಚಿಂತೆ ಬಿಟ್ಟಿಯಣ್ಣ. ಚೋಳರೊಬ್ಬರೇ ನಮ್ಮ ವೈರಿಗಳು ಎಂದುಕೊಂಡಿದ್ದೆವು. ಚಾಲುಕ್ಯರು ನಮ್ಮ ಪ್ರಭುಗಳು, ಮಿತ್ರರು ಎಂದು ನಂಬಿಕೊಂಡಿದ್ದೆವು. ಈಗ ಆ ನಂಬಿಕೆ ಸುಳ್ಳೆಂದು ತಿಳಿಯಿತು. ಈಗ ಹೊಯ್ಸಳರಿಗೆ ಮಿತ್ರರೇ ಇಲ್ಲ ಬಿಟ್ಟಿಯಣ್ಣ. ಇತ್ತಂಡವೂ ಅಹಿತವಾದ ಈ ಹೊತ್ತಿನಲ್ಲಿ ಈ ಹೊಯ್ಸಳ ರಾಜ್ಯ ಹೇಗೆ ಉಳಿದೀತೋ ಎಂದು ನನಗೆ ಚಿಂತೆಯಾಗಿದೆ. . . .'

'ನೀವೊಬ್ಬರು ಮೈಗಟ್ಟಿಯಾಗಿ ಇದ್ದರೆ, ಚೋಳ ಚಾಲುಕ್ಯರೇನು, ಅಖಂಡ ಪೃಥ್ವೀಮಂಡಲವೇ ಮುನಿದು ಮೇಲೆ ಬಿದ್ದರೂ, ದ್ವಾರಸಮುದ್ರದ ಕೋಟೆಯ ಒಂದು ಕಲ್ಲನ್ನೂ ಅಲ್ಲಾಡಿಸಲಾರದು ಅಣ್ಣಾಜಿ. ಆ ಚಿಂತೆ ಬಿಡಿ. ಅಂಥಾ ಹೊತ್ತು ಬಂದರೆ, ನಮ್ಮ ತೋಳಿನಲ್ಲಿರುವುದು ಬೂರುಗದ ಅರಳೆಯಲ್ಲ, ಬಲಿಷ್ಠ ಮಾಂಸಖಂಡ ಎಂಬುದನ್ನು ತೋರಿಸಿಕೊಡೋಣ.'

'ನಿನ್ನ ಬಾಹುವಿನಲ್ಲಿ ಆ ಬಲವಿದೆ ಬಿಟ್ಟಿಯಣ್ಣ. ಅದಕ್ಕೇ ನಾನು ನಿನಗೇ ಹೇಳುತ್ತಿರುವುದು. ಈ ಚೋಳ, ಚಾಲುಕ್ಯರ ಕುತ್ತಿನಿಂದ ಹೊಯ್ಸಳ ರಾಜ್ಯವನ್ನು ಕಾಪಾಡುತ್ತೇನೆ ಎಂದು ನೀನು ಮಾತುಕೊಟ್ಟರೆ ಸಾಕು.'

'ಆಗಲೇ ಆ ಮಾತು ಕೊಟ್ಟೆನಲ್ಲ ಅಣ್ಣಾಜಿ. ಅಷ್ಟು ಬೇಕೆಂದರೆ ಹೇಳಿ–ಯಾರು ಬೇಕು? ಅವರ ಮೇಲೆ ದಂಡು ನಡೆಸಿ, ಅವರ ಮುಂಡೆ ಯನ್ನು ತಂದು ನಿಮ್ಮ ಅಡಿಗಳ ಮೇಲೆ ದಿಂಡುರಳು ಕೆಡಹುತ್ತೇನೆ.'

'ಅವರನ್ನು ಬರೀ ಸೋಲಿಸಿದರೆ ಸಾಲದು ಬಿಟ್ಟಿಯಣ್ಣ. ಮತ್ತೆ ಆ ಕುನ್ನಿಗಳು ಎಂದೆಂದೂ ನಮ್ಮ ರಾಜ್ಯದತ್ತ ತಲೆಯಿಕ್ಕದಂತಾಗಬೇಕು. ಅವರ ಸಾಮನ್ತರ ನೆತ್ತಿ ನಮ್ಮ ಪಾದಮುದ್ರೆ ಹೊತ್ತು ಬಾಳುವಂತಾಗ ಬೇಕು. ನೀಲಪರ್ವತದಿಂದ ಕೃಷ್ಣೆಯವರೆಗಿನ ಕನ್ನಡನಾಡು, ನಮ್ಮ ವ್ಯಾಘ್ರಲಾಂಛನದ ಆಡುಂಬೊಲವಾಗಬೇಕು. ದಿನದಿನವೂ ನಮ್ಮನ್ನು ಕಾಡುತ್ತಿರುವ ತಿಗುಳರು ನಮ್ಮ ಹಡಪ ಹೊರುವ ಊಳಿಗದಾಳುಗಳಾಗ ಬೇಕು. ಕೃತಘ್ನ ಚಾಲುಕ್ಯರು ನಮ್ಮ ಕತ್ತಿ ಹೊರುವ ತೊತ್ತುಗಳಾಗ ಬೇಕು. ಹಾಗಾದಾಗ, ನನ್ನ ಆತ್ಮಕ್ಕೆ ತೃಪ್ತಿಯಾಗುತ್ತದೆ ಬಿಟ್ಟಿಯಣ್ಣ. ಅದುವರೆಗೂ, ನನ್ನ ಪ್ರತೀಕಾರ ತೃಷೆಗೆ ತೃಪ್ತಿಯಿಲ್ಲ. ಅಷ್ಟನ್ನು ನೀನು ಮಾಡಬೇಕು.'

—ಮಾತನಾಡುವ ಆಯಾಸದಿಂದ ಎದೆ, ಒತ್ತಿದ ತಿದಿಯಂತೆ ಸುಯ್ಯುತ್ತಿದ್ದರೂ ತಡೆದುಕೊಂಡು ಹೇಳಿದ ಬಲ್ಲಾಳರಾಯ.

'ಆಗಲಿ ಅಣ್ಣಾಜಿ. ನಿಮ್ಮ ಬಯಕೆಗೆ ನನ್ನ ಬಾಳು ಮೀಸಲು. ನನ್ನನ್ನು ಹರಸುತ್ತಾ ನೀವು ಸಿಂಹಾಸನದ ಮೇಲಿರಿ. ನಿಮ್ಮ ಬಯಕೆಯನ್ನು ನಿಮ್ಮ ಕಣ್ಣೆದುರಿಗೇ ಸಾರ್ಥಕಪಡಿಸಿ ತೋರುತ್ತೇನೆ.'

—ಭರವಸೆ ತುಂಬಿದ ಧ್ವನಿಯಲ್ಲಿ ಹೇಳಿದ ವಿಷ್ಣುವರ್ಧನ.

'ಆ ಬಯಕೆ ನನಗೂ ಇಲ್ಲದೆ ಇಲ್ಲ ಬಿಟ್ಟಿಯಣ್ಣ. ಆದರೆ ನಾನು ಬಲ್ಲೆ– ನನ್ನ ಈ ಭೌತಿಕ ಚಕ್ಷುಗಳಿಗೆ ಆ ಭಾಗ್ಯವಿಲ್ಲ. ಇನ್ನು ನಾನು ಬಹಳ ದಿನ ಇರುವುದಿಲ್ಲ.'

—ನಿರಾಶೆಯ ಪಾತಾಳಕ್ಕಿಳಿದು ಹೇಳಿದ ಬಲ್ಲಾಳರಾಯ.

'ನೀವಷ್ಟು ಅಧೈರ್ಯವಾಗಬಾರದು ಅಣ್ಣಾಜಿ. ಹಿಂದಿನ ಬಾರಿ ಈ ಬಾರಿಗಿಂತಲೂ ಉಗ್ರವಾಗಿದ್ದ ವ್ಯಾಧಿ ಚಾರುಕೀರ್ತಿ ಗುರುಗಳ ಕೃಪೆ ಯಿಂದ ಗುಣವಾಗಲಿಲ್ಲವೇ? ಈ ಬಾರಿಯೂ ಅವರ ಕೈಗುಣದಿಂದ, ತಪೋಬಲದಿಂದ ನಿಮ್ಮ ಮೈ ವಜ್ರಕಾಯವಾಗಬಹುದು. ಅವರಿಗೂ

ಕೂಡಲೆ ಬರಬೇಕೆಂದು ಓಲೆ ಹೋಗಿದೆ.'

'ಸರಿ, ನಿನ್ನ ಬಯಕೆಗೆ ನಾನೇಕೆ ಅಲ್ಲ ಎಂದು ಹೇಳಲಿ ಬಿಟ್ಟಿಯಣ್ಣ, ಆದರೆ ನನ್ನೊಳಗೇ ಯಾವುದೋ ಶಕ್ತಿ ನುಡಿಯುತ್ತಿದೆ–'ಹೇಳುವುದೇನಿದ್ದರೂ ಹೇಳಿ ಮುಗಿಸಿ ಬಿಡು. ಮತ್ತೆ ಅವಕಾಶ ಸಿಗುವುದಿಲ್ಲ' ಎಂದು. ಹೇಳಿದ್ದಾಯಿತು–ನನ್ನ ಕರ್ತವ್ಯ ನಾನು ಮಾಡಿದೇನೆ. ನನಗೆ ಕೊಟ್ಟ ಮಾತು ಮರೆಯಬೇಡ. ಎಲ್ಲ ಭಾರವೂ ನಿನ್ನ ಮೇಲಿದೆ. ದುರ್ಗಾಮಾತೆ ನಿನ್ನ ತೋಳುಗಳಿಗೆ ರಕ್ಷೆಯಾಗಿರಲಿ. ಸದಾಶಿವ ನಿನಗೆ ಸದಾ ಗೆಲುವನ್ನೇ ಅನುಗ್ರಹಿಸಲಿ.'

—ಎಂದಷ್ಟು ಹೇಳಿ, ಆ ಮಾತಾಡಿದ ಆಯಾಸದಿಂದ ಭಾರವಾಗಿ ಏದುತ್ತಾ ಬಲ್ಲಾಳರಾಯ ಕಣ್ಣು ಮುಚ್ಚಿದ.

ಅಷ್ಟು ಮಾತಾಡುವ ಶಕ್ತಿಯೂ ಆತನಿಗಿರಲಿಲ್ಲವೋ ಏನೋ–ಆ ಶ್ರಮದಿಂದ ಮತ್ತೆ ಮೈಯಲ್ಲಿ ಜ್ವರ ಏರಿತು.

ಚೇಳಿನ ವಿಷದಂತೆ ಗಳಿಗೆಗಳಿಗೆಗೂ ಏರುತ್ತಾ ಹೋದ ಜ್ವರದ ಕಾವು, ಆ ಮೈಯ ಪಂಜರದಲ್ಲಿದ್ದ ಜೀವದ ಹಕ್ಕಿ ಹಾರಿ ಹೋದ ಬಳಿಕವೇ ಇಳಿದದ್ದು. ಅರಿಗಳನ್ನು ಗೆದ್ದ ಬಲ್ಲಾಳರಾಯ ಸಾವಿಗೆ ಶರಣಾಗತನಾದ. ಆತ ಇನ್ನಿಲ್ಲವೆಂಬುದನ್ನರಿತು ಅರಮನೆ ಕಣ್ಣೀರಿನ ಕಾಸಾರವಾಯಿತು. ರಾಜಧಾನಿ ದುಃಖದ ಬೀಡಾಯಿತು. ಊರೂರು, ಕೇರಿಕೇರಿಗಳಲ್ಲೂ ಕಂಬನಿ ದುಂಬಿದ ಜನ ಅನಾಥರಂತೆ ಗೋಳಿಟ್ಟು 'ಮುಂದೇನು ಗತಿ' ಎಂದು ಹಂಬಲಿಸಿದರು.

ಪುತ್ರದುಃಖದಿಂದ ಬೇಯುತ್ತಿರುವ ತಾಯಿ ಏಚಲಾದೇವಿ, ಸೌಭಾಗ್ಯ ತಿಲಕ ಶೂನ್ಯವಾಗಿ, ಕಂಬನಿಗರೆಯಲೇ ಬದುಕಿದಂತೆ ಉಳಿದ ಅತ್ತಿಗೆಯರು ಪದ್ಮಲೆ, ಚಾಮಲೆ, ಬೊಪ್ಪಲಾದೇವಿಯರು, ದುಃಖಿತರಾದವರನ್ನು ಸಂತೈಸಲು ಹೋಗಿ, ತಾವೇ ದುಃಖದ ಸುಳಿಯಲ್ಲಿ ಸಿಲುಕಿ ಕಂಗೆಟ್ಟ ಆಪ್ತೇಷ್ಟರು, ಬಲ್ಲಾಳರಾಯ ಅಪುತ್ರಕನಾಗಿ ಮೃತನಾದದ್ದರಿಂದ, ರಾಜ್ಯಕ್ಕೆ ಮುಂದಾರು ದಿಕ್ಕು ಎಂಬ ಚಿಂತೆಗೆ ಗುರಿಯಾದ ಸಚಿವ–ಸಾಮನ್ತರು–ಒಬ್ಬೊಬ್ಬರೂ, ಒಂದೊಂದು ಬಗೆಯ ದುಃಖದ ಪ್ರತಿಮೆಯಂತಿದ್ದರು.

ಆದರೆ ವಿಷ್ಣುವರ್ಧನನಿಗೆ ಮಾತ್ರ, ಎದೆಯಲ್ಲಿ ಉರಿಗೆದರುತ್ತಿರುವ

ದುಃಖವನ್ನು ನುಂಗಿದ ಕ್ರೋಧಾಗ್ನಿ ಜ್ವಲಿಸುತ್ತಿತ್ತು. ದೇಶವನ್ನು ವ್ಯಾಪಿಸಿದ ರೋಧನ ಧ್ವನಿಯನ್ನು ಮೆಟ್ಟಿ ಒಂದೇ ಮಾತು ಹಗಲಿರುಳೂ ಅವನ ಕಿವಿಯಲ್ಲಿ ಮೊಳಗುತ್ತಿತ್ತು—

'ಈ ಚಾಲುಕ್ಯರ ಶನಿ ದಾಳಿ ನಡೆಯದಿದ್ದರೆ ತನ್ನ ಅಣ್ಣ ಇನ್ನೂ ನಾಲ್ಕು ದಿನ ಬದುಕುತ್ತಿದ್ದ. ಅವರೇ ಅವನನ್ನು ಅಷ್ಟು ಬೇಗ ಸಾವಿಗೆ ದೂಡಿದವರು. ಅವರನ್ನು ತುಳಿಯಬೇಕು; ಹೆಸರುಳಿಯದಂತೆ ಹೊಸಗಬೇಕು.'

ಅದರೊಂದಿಗೆ, ಬಲ್ಲಾಳರಾಯ ಸಾಯುವಂದು, ತನ್ನಲ್ಲಿ ಭರವಸೆಯಿಟ್ಟು ಹೇಳಿದ ಮಾತು—

'ಈ ಕುನ್ನಿಗಳಿಂದೂ ಮತ್ತೆ ನಮ್ಮ ರಾಜ್ಯದತ್ತ ತಲೆಯಿಕ್ಕದಂತಾಗಬೇಕು, ಬಿಟ್ಟಿಯಣ್ಣ; ನೀಲಗಿರಿಯಿಂದ ಕೃಷ್ಣೆಯವರೆಗಿನ ನಾಡು ನಮ್ಮ ವ್ಯಾಘ್ರಲಾಂಛನದ ಆಡುಂಬೊಲವಾಗಬೇಕು.'

'ಖಂಡಿತ, ಖಂಡಿತ, ನಿನ್ನ ಮಾತನ್ನು ಸತ್ಯವಾಗಿ ಮಾಡುತ್ತೇನೆ. ನಾನು ನಿನ್ನ ಕನಸಿನ ಭಾಷೆಯಾಳು. ನೀನು ಹೇಳಿದ ರಾಜ್ಯವನ್ನು ಕಟ್ಟಿ ನಿನಗೆ ಪರೋಕ್ಷ ವಿನಯ ಸಲ್ಲಿಸುತ್ತೇನೆ.'

—ಎಂದು ಬಾರಿ ಬಾರಿಗೂ ತನಗೆ ತಾನೇ ಹೇಳಿಕೊಂಡು, ಉಕ್ಕಿ ಬರುವ ದುಃಖವನ್ನು ಸಂತೈಸಿಕೊಂಡ.

ತಾನೇ ಸಿಂಹಾಸನಾರೋಹಣ ಮಾಡಬೇಕಾಗಿ ಬಂದ ದಿನ, ರಾಜ ಮುಕುಟವನ್ನು ಧರಿಸುವಾಗಲೂ ಅದೇ ಮಾತನ್ನೇ ಸಾರಿ ಹೇಳಿದ—

'ದೇಶವನ್ನು ಕಂಬನಿಯ ಕಡಲಿನಲ್ಲಿ ಅದ್ದಿ ಶಿವಪದವಾಸಿಗಳಾದ ನಮ್ಮ ಪೂಜ್ಯ ಅಣ್ಣಾಜಿಯವರಾದ ಬಲ್ಲಾಳ ಪ್ರಭುಗಳು, ನಮ್ಮ ಹೆಗಲಿನ ಮೇಲೆ ಬಹು ದೊಡ್ಡ ಹೊರೆಯನ್ನು ಹೊರಿಸಿದ್ದಾರೆ. 'ನೀಲಗಿರಿಯಿಂದ ಕೃಷ್ಣಾ ನದಿಯವರೆಗಿನ ಕನ್ನಡನಾಡನ್ನು ಒಂದಾಗಿ ಕಟ್ಟಬೇಕು. ಅಷ್ಟು ಭೂಮಿಯೂ ಹೊಯ್ಸಳ ವ್ಯಾಘ್ರದ ಮೀಸಲು ಬನವಾಗಬೇಕು. ಹೊಯ್ಸಳರ ಹೆಸರನ್ನು ನಿರ್ಭಯವಾಗಿ ನುಡಿಯುವಷ್ಟು ಕೆಚ್ಚೂ, ನಮ್ಮ ಶತ್ರುಗಳಿಗೆ ಉಳಿಯಬಾರದು' ಎಂದು ನಮಗೆ ಮೃತ್ಯುಶಯ್ಯೆಯಿಂದ ಅಪ್ಪಣೆ ಮಾಡಿದ್ದಾರೆ. ಅಂದು ನಾವು ಅಣ್ಣಾಜಿಯವರಿಗೆ, 'ಅಂತೇ ಆಗಲಿ' ಎಂದು ಕೊಟ್ಟ ವಚನ, ನಿಮ್ಮೆಲ್ಲರ ನಿಷ್ಠೆ ವಿಶ್ವಾಸಗಳಿಂದ ಸಾರ್ಥಕವಾಗಬೇಕಾಗಿದೆ. ನಮ್ಮ ಪಾಲಿಗೆ ಈ

ಮುಕುಟಧಾರಣ, ಆ ಕರ್ತವ್ಯದ ವೀರ ಕಂಕಣಧಾರಣವಾಗಿದೆ. ಶ್ರೀ ವಾಸನ್ತಿಕಾದೇವಿಯ ಅನುಗ್ರಹದಿಂದ, ನಮ್ಮ ವಚನ, ಬದುಕು ಸಫಲವಾಗಲೆಂದು, ಹಿರಿಯರು ಹರಸಬೇಕು.'

ಮಹಾಪ್ರಚಂಡ ದಂಡನಾಯಕ ಗಂಗರಾಜರು, ಸಂಧಿ ವಿಗ್ರಹ ಸಚಿವ ದಂಡನಾಯಕ ಪುಣಿಸಮಯ್ಯ, ಪ್ರಧಾನಿ ಸುರಿಗೆಯ ನಾಗಯ್ಯ, ಪ್ರಧಾನಿಗಳೂ, ಮಾಣಿಕ್ಯ ಭಂಡಾರಿಗಳೂ ಆದ ಮರಿಯಾನೆದಂಡನಾಯಕ, ಭರತದಂಡನಾಯಕ, ಮೊದಲಾದ ಸಚಿವರು, ದಂಡನಾಯಕರು, ಉಳಿದ ಮಂಡಲೇಶ್ವರ, ಸಾಮಂತರು ಒಬ್ಬೊಬ್ಬರೂ, 'ತಮ್ಮ ಬಾಳು ದೊರೆಗಳಿತ್ತ ವಚನಕ್ಕೆ ಮೀಸಲು' ಎಂದು ತಮ್ಮ ಖಡ್ಗದಾಣೆಯಾಗಿ, ತಮ್ಮ ಕುಲದೇವತೆಗಳ ಸಾಕ್ಷಿಯಾಗಿ ಪ್ರಮಾಣ ಮಾಡಿದರು.

ವಿಷ್ಣುವರ್ಧನ ಸಿಂಹಾಸನ ಹತ್ತಿದ ಗಳಿಗೆಯಿಂದಲೂ, ಬಲ್ಲಾಳರಾಯನ ಬಯಕೆಯನ್ನು ಸಫಲಗೊಳಿಸುವ ಸಮರಕ್ಕೆ ಸಿದ್ಧತೆಗಳು ನಡೆಯತೊಡಗಿದವು.

೨

# ಗಂಗರಾಜರ ಕನಸು

'ನಿನ್ನ ಕನಸನ್ನು ನಾನು ನನಸಾಗಿ ಮಾಡಿ ತೋರಿಸುತ್ತೇನೆ' ಎಂದು ತನ್ನ ಅಗ್ರಜನಿಗೆ ಮಾತುಕೊಟ್ಟ ವಿಷ್ಣುವರ್ಧನನಿಗೆ, ಆ ವಚನವನ್ನು ಕಾರ್ಯ ರೂಪದಲ್ಲಿ ಮಾಡಿ ತೋರಿಸುವುದು ಎಷ್ಟು ಕಷ್ಟಸಾಧ್ಯವಾದುದು ಎಂಬುದರ ಅರಿವಿತ್ತು. ಆತ ಎದುರಿಸಲು ಸಿದ್ಧವಾದ ದೊರೆಗಳು ಸಾಮಾನ್ಯರಲ್ಲ. ದಕ್ಷಿಣ ದೇಶದಲ್ಲಿ ಅತ್ಯಂತ ಪ್ರಬಲರಾಗಿದ್ದ ಕಂಚಿಯ ಪಲ್ಲವರು, ಮಧುರೆಯ ಪಾಂಡ್ಯರು, ತಲವನಪುರದ ಗಂಗದೊರೆಗಳನ್ನು ಮುರಿದು, ಸಿಂಹಳದ ಅರಸ ರಿಂದಲೂ ಕಪ್ಪ ಪಡೆದು, ಕಡಲಾಚೆಯೂ ತನ್ನ ಪ್ರತಾಪದ ಪ್ರಭಾವವನ್ನು ಬೀರಿದ ಚೋಳ ಕುಲದ ಕುಲೋತ್ತುಂಗ ಚಕ್ರವರ್ತಿ, ಒಂದು ದಿಕ್ಕಿನಲ್ಲಿ ಆತನ ಪ್ರತಿಸ್ಪರ್ಧಿಯಾಗಿದ್ದ. ಮತ್ತೊಬ್ಬ ಪ್ರತಿಸ್ಪರ್ಧಿಯಾದ ಚಾಲುಕ್ಯ ವಿಕ್ರಮಾದಿತ್ಯನೂ ಅಷ್ಟೇ ಪ್ರಖ್ಯಾತ; ಆತನ ಸೇನಾಪಡೆಯೂ ಅಷ್ಟೇ ಪ್ರಬಲವಾದುದು.

ಈ ಇಬ್ಬರು ಚಕ್ರಾಧೀಶ್ವರರ ಬಲ ಎಷ್ಟು, ಏನು ಎಂಬುದು, ತನ್ನ ತಾತ ವಿನಯಾದಿತ್ಯನ ಕಾಲದಲ್ಲೇ ತೊಂಡನೂರಿನ ಮಂಡಲಾಧಿಕಾರಿ ಯಾಗಿದ್ದು, ತನ್ನ ತಂದೆ ಎರೆಯಂಗದೇವನೊಂದಿಗೆ ಹಲವಾರು ಸಮರಗಳಲ್ಲಿ ಭಾಗವಹಿಸಿ, ಕೊಂಗು ನಾಡನ್ನು ಜಯಿಸಿ, 'ಕೊಂಗು ಕೊಂಡ' ಎಂಬ ವಿಜಯ ಪ್ರಶಸ್ತಿಯನ್ನು ಧರಿಸಿದ ವಿಷ್ಣುವರ್ಧನನಿಗೆ ಚೆನ್ನಾಗಿ ತಿಳಿದಿತ್ತು.

ಈ ಪ್ರಬಲರಿಬ್ಬರಲ್ಲಿ ಯಾರೊಬ್ಬರನ್ನೇ ಆದರೂ, ದುಡುಕಿ ಎದುರಿಸಿ ದಲ್ಲಿ, ಸೋಲಷ್ಟೇ ಅಲ್ಲ, ಸರ್ವನಾಶವೇ ಕೈಗಟ್ಟಿ, ಹೊಯ್ಸಳರ ಹೆಸರೂ ಉಳಿಯದಂತಾಗಬಹುದೆಂಬ ಅರಿವು ಇದ್ದುದರಿಂದಲೇ, ಅವರ ಮೇಲೆ ದಾಳಿ ಮಾಡುವ ನಿಶ್ಚಯ ಮಾಡಿದ ವಿಷ್ಣುವರ್ಧನರಾಯ, ಆ ದಾಳಿಗೆ ಅಗತ್ಯ ವಾದಷ್ಟು ಬಲ ಸಂಗ್ರಹ ಮಾಡತೊಡಗಿದ. ಆ ಸಿದ್ಧತೆಯೂ, ದೊರೆಯ

ಪ್ರಯತ್ನಕ್ಕೆ ತಕ್ಕ ಪ್ರಮಾಣದಲ್ಲೇ ನಡೆಯಿತು.

ಹೊಯ್ಸಳ ಸೀಮೆಯ ಬಡಗಿಗಳಿಗಾಗಲಿ, ಕಮ್ಮಾರರಿಗಾಗಲಿ ಒಂದು ಗಳಿಗೆಯೂ ಬಿಡುವಿರಲಿಲ್ಲ. ದೊಡ್ಡ ಯುದ್ಧಕ್ಕೆ ಅಗತ್ಯವಾದಷ್ಟು ಪ್ರಮಾಣ ದಲ್ಲಿ ಬಗೆಬಗೆಯ ಯುದ್ಧ ರಥಗಳು, ಧನುರ್ಬಾಣಗಳು, ಕತ್ತಿ, ಶಲ್ಯ, ಕುಂತ, ಪರಶು, ತೋಮರ, ಅಡಾಯುಧ ಮೊದಲಾದ ಶಸ್ತ್ರಗಳು, ಶಿರಸ್ತ್ರಾಣಗಳು, ಲೋಹ ಕವಚಗಳು, ಕೋಟೆಗೆ ಲಗ್ಗೆ ಹಾಕಲು ಬೇಕಾದ ನಿಚ್ಚಣಿಗೆಗಳು, ನಡೆಗೋಟೆಗಳು, ಬಗೆ ಬಗೆಯ ರಕ್ಷಣಾ ಸಾಮಗ್ರಿಗಳು ಕುಶಲ ಕರ್ಮಿಗ ಳಿಂದ ನಿರ್ಮಿತವಾಗಿ ಸಂಗ್ರಹಿತವಾದವು. ಅದರೊಂದಿಗೆ ದೇಶದ ವಡ್ಡವ್ಯವ ಹಾರಿಗಳು, ನಖರರ ಮೂಲಕ, ಕಾಂಭೋಜ, ಬಾಹ್ಲಿಕ, ಅರಬಿ ಮೊದ ಲಾದ ನಾನಾ ಜಾತೀಯ ಉತ್ತಮಾಶ್ವಗಳನ್ನು, ಕೊಂಗು, ಕೇರಳದ ಗಜ ಗಳನ್ನು ತರಿಸಿ, ಗಜಾಶ್ವಪಡೆಗಳನ್ನು ಬಲಪಡಿಸಿದರು. ಒಂದು ಕಡೆ ಯುದ್ಧೋಪಯೋಗೀ ವಸ್ತುಗಳ ಸಂಗ್ರಹ ನಡೆದಂತೆ, ಮತ್ತೊಂದು ಕಡೆ ಜಲದುರ್ಗ, ವನದುರ್ಗ, ಗಿರಿದುರ್ಗ, ನೆಲದುರ್ಗ ಮೊದಲಾದ ಬಗೆ ಬಗೆಯ ಕೋಟೆಗಳ ಮೇಲೆ ದಾಳಿ ಮಾಡುವ ವಿಧಾನ, ಬಗೆ ಬಗೆಯ ಆಯುಧಗಳ ಉಪಯೋಗ, ಅಶ್ವಾರೋಹಣ, ಗಜಾರೋಹಣ, ರಥಾರೋಹಣ ಮೊದ ಲಾದ ಸಮರ ವಿದ್ಯೆಗಳಲ್ಲಿ ಹೊಸದಾಗಿ ಸೇನೆಗೆ ಸೇರಿಸಿಕೊಂಡ ಸೈನಿಕರಿಗೆ ತರಬೇತು ಕೊಡುವ ಶಿಕ್ಷಣ ಕಾರ್ಯವೂ ನಡೆಯಿತು. ಇದರೊಂದಿಗೆ ಎಂಥ ವಿಷಮ ಪರಿಸ್ಥಿತಿಯಲ್ಲೂ ದೊರೆಯನ್ನು ರಕ್ಷಿಸಬಲ್ಲ, ಸಮಯ ಬಂದಾಗ ಪ್ರಾಣದ ಪಣವಿಟ್ಟು ಯುದ್ಧ ಮಾಡಬಲ್ಲ 'ಗರುಡ' ರೆಂಬ ಲೆಂಕರ ಪಡೆ ನಿರ್ಮಾಣವಾಯಿತು.

ಹೊಯ್ಸಳ ಸೇನೆಯ ಚತುರಂಗ ಬಲ ಹೀಗೆ ಸಮರ ಸಿದ್ಧವಾಗು ತ್ತಿದ್ದಾಗ, ಗಂಗರಾಜ, ಪುಣಿಸಮಯ್ಯ ಮೊದಲಾದ ದಂಡನಾಯಕರು, ಹೊಯ್ಸಳ ಸೀಮೆಯ ಗಡಿಗಳಲ್ಲಿದ್ದ ಚೋಳ ಚಾಲುಕ್ಯ ಸಾಮನ್ತರ ನಿಷ್ಠೆ, ಅವರ ಸೇನೆಯ ಪ್ರಮಾಣ, ಅಲ್ಲಿಯ ಆರ್ಥಿಕ ಪರಿಸ್ಥಿತಿ, ಮಳೆ–ಬೆಳೆ, ಜನ ರಲ್ಲಿ ಪ್ರಭುಗಳ ವಿಷಯದಲ್ಲಿದ್ದ ವಿಶ್ವಾಸ–ಒಂದೊಂದು ವಿವರದ ಬಗ್ಗೆಯೂ ಬೇಹುಗಾರರಿಂದ ಸುದ್ದಿ ತರಿಸಿಕೊಂಡು, ಆ ಸುದ್ದಿಗಳ ಸತ್ಯಾಸತ್ಯತೆಯನ್ನು ಪರೀಕ್ಷಿಸಿ, ಆ ವಾರ್ತೆಗಳಿಂದ ತಮ್ಮ ಬಲದ ಶಕ್ತಿಯನ್ನು ತರ್ಕಿಸಿ, ತಮ್ಮ

ಬಲದಲ್ಲಿ ಎಲ್ಲೂ, ಯಾವ ಬಗೆಯ ಬಿರುಕೂ ಕಾಣದಂತೆ ಎಚ್ಚರಿಕೆ ವಹಿಸಿ, ದೊರೆ ಯಾವ ಗಳಿಗೆಯಲ್ಲಿ ಅಪ್ಪಣೆ ಮಾಡಿದರೂ ಸೇನೆಯನ್ನು ನಡೆಸಲು ಸಿದ್ಧವಾಗಿದ್ದರು.

ಈ ಸಿದ್ಧತೆಗಳು ಮುಂದುವರಿದು, ಬಲ ಸಂಗ್ರಹವಾದಂತೆ ದಿನ ದಿನಕ್ಕೂ ಸೇನೆಯ ಸಮರಾತುರವೂ ಹೆಚ್ಚುತ್ತಿತ್ತು.

ಎಲ್ಲರಿಗಿಂತಲೂ ಹೆಚ್ಚು ಉತ್ಸಾಹ ಮಹಾ ಪ್ರಚಂಡ ದಂಡನಾಯಕ ರಾದ ಗಂಗರಾಜರಿಗೆ.

ಗಂಗರಾಜರು ಹೊಯ್ಸಳರ ಸೇನಾ ಸೇವೆಯಲ್ಲೇ ಮೈ ಮುಪ್ಪಾದ ಹಿರಿಯ ದಂಡನಾಯಕರು. ಅವರ ತಂದೆ ಏಚದಂಡನಾಯಕರು, ನೃಪ ಕಾಮ ದೊರೆಯ ಬಲಗೈ ಎನಿಸಿಕೊಂಡು, ಆಪ್ತಮಿತ್ರರಾಗಿದ್ದವರು. ಆ ಕಾಲದಿಂದಲೂ ಅರಮನೆ ಸಚಿವ ಪರಿವಾರ ಎಲ್ಲರಿಗೂ ಚಿರಪರಿಚಿತರಾಗಿ, ತಮ್ಮ ಶೌರ್ಯ, ಸಾಹಸ, ನಿಷ್ಠೆಗಳಿಂದ 'ದ್ರೋಹ ಘರಟ್ಟ' ಎಂಬ ಬಿರದು ಪಡೆದು, ಎಲ್ಲರ ಪ್ರೀತಿ, ನಂಬಿಕೆಗೆ ಪಾತ್ರರಾಗಿದ್ದವರು. ವಿಷ್ಣುವರ್ಧನನಿ ಗಂತೂ ಗಂಗರಾಜರು ಎಂದರೆ ತನ್ನ ತಂದೆಯಂತೆ ಎಂಬಷ್ಟು ಗೌರವ; ಹಿರಿಯಣ್ಣನೆಂಬಷ್ಟು ವಿಶ್ವಾಸ; ತನ್ನ ವಜ್ರ ಕವಚ ಇವರು ಎಂಬ ನಂಬಿಕೆ. ಎಂತಲೇ ಅವನಿಗೆ ರಾಜ ಸನ್ನಿಧಿಯಲ್ಲಾಗಲಿ, ಸಚಿವ ಸಮಿತಿಯಲ್ಲಾಗಲಿ ನಿಸ್ಸಂಕೋಚವಾಗಿ ಮಾತನಾಡುವ ಅಧಿಕಾರವಿತ್ತು.

ಸಕಲ ಸೇನಾ ಸಂಗ್ರಹ ನಡೆದ ಬಳಿಕವೂ, ವಿಷ್ಣುವರ್ಧನ ಸಮರ ಯಾತ್ರೆಯ ದಿನ ನಿಶ್ಚಯಿಸದೆ ಇರುವುದನ್ನು ಕಂಡು, ಗಂಗರಾಜರಿಗೆ ದೊರೆಯ ಮುನ್ನೆಚ್ಚರಿಕೆಯ ಸ್ವಭಾವ ಮೆಚ್ಚಿಗೆಯಾದರೂ, ಅಸಮಾಧಾನ ಮೂಡುತ್ತಿತ್ತು.

ಒಮ್ಮೆ ಪಂಚ ಪ್ರಧಾನರ ಮಂತ್ರಾಲೋಚನ ಸಭೆಯಲ್ಲಿ ಯುದ್ಧ ವಿಷಯ ಚರ್ಚೆಗೆ ಬಂದಾಗ—

'ಪ್ರಭುಗಳು ಯುದ್ಧ ವಿಷಯದಲ್ಲಿ ದಿನ ನಿಶ್ಚಯ ಮಾಡದೆ ಮುಂದೆ ದೂಡುತ್ತಿರುವುದು ನಮಗೆ ಆಶ್ಚರ್ಯವನ್ನುಂಟುಮಾಡಿದೆ. ಉಸಿರಿನ ಏಟಿಗೇ ಸಾಯುವ ಮಶಕವನ್ನು ಹೊಸಗಿ ಹಾಕಲು ಕತ್ತಿ ಹರಿತವಾಗಿದೆಯೋ ಇಲ್ಲವೋ, ಇನ್ನೊಮ್ಮೆ ಸಾಣೆಗೆ ಹೋಗಿ ಬಂದರೆ ಮೇಲೇನೊ ಎಂದು

ಯೋಚಿಸುವುದೇಕೆ? ಯುದ್ಧಕ್ಕೆ ನಿಮ್ಮ ಮನಸ್ಸು ಸಿದ್ಧವಾಗಿದ್ದರೆ ಇಂದೇ ಅಪ್ಪಣೆ ಕೊಡಿ. 'ಶುಭಸ್ಯ ಶೀಘ್ರಂ.'

ಎಂದಾಡಿ ತಮ್ಮ ಆತುರವನ್ನು ತೋರಿದರು.

'ನಾವು ಯುದ್ಧ ಹೂಡಲಿರುವುದು, ಮಶಕ ಮಕ್ಷಿಕಗಳೊಂದಿಗಾಗಿದ್ದರೆ, ನಾವೂ ಹಿಂದೆ ಮುಂದೆ ನೋಡುತ್ತಿರಲಿಲ್ಲ. ಆದರೆ ನಮ್ಮ ಇದಿರು ನಿಂತಿರುವವರು, ಕೊಬ್ಬಿದ ಸಾಮ್ರಾಟ ಸಿಂಹಗಳು. ಸಾಮನ್ತರಾರೂ ಅವರನ್ನು ಇಂದಿನವರೆಗೂ ಕೆಣಕಲು ಹೋಗಿಲ್ಲ. ಹಾಗಾಗಿ–ನಾವು ಈಗ ಹಿಂದಾರೂ ಮಾಡದ ಸಾಹಸಕ್ಕೆ ಕೈಹಾಕಿದ್ದೇವೆ–ಇದರಲ್ಲಿ ಏನೋ ಹೆಚ್ಚು ಕಡಿಮೆಯಾಗಿ, ಪಗೆವಾಡಿಯಲ್ಲಿ ಕೆಮ್ಮನೆ ನಗಿಸಿಕೊಳ್ಳುವಂಥ ಪರಿಸ್ಥಿತಿ ಪ್ರಾಪ್ತವಾಗಬಾರದೆಂದೇ, ನಾವು ಇಷ್ಟು ಹಿಂದೆ ಮುಂದೆ ನೋಡುತ್ತಿರುವುದು. ನಮ್ಮ ಸಮರ ಘೋಷಣೆ, ವಿಜಯ ಘೋಷಣೆಯೇ ಆಗಬೇಕು.'

'ಹಾಗೇ ಆಗುತ್ತದೆ ಪ್ರಭು, ನನಗೆ ಆ ನಂಬಿಕೆಯಿದೆ.'

—ಗಂಗರಾಜರು ಅಚಲ ವಿಶ್ವಾಸದಿಂದ ಹೇಳಿದರು.

'ಅರಿಗಳ ಬಲಾಬಲ ನಿಮಗೆ ಅರಿಯದ ವಿಷಯವಲ್ಲ. ಅದನ್ನು ತಿಳಿದೂ ಈ ಮಾತು ಹೇಳುತ್ತೀರಾ ದಂಡನಾಯಕರೇ?'

'ತಿಳಿಯದೆ ಮಾತು ಗಳಹುವುದು ಈ ಜಾಯಮಾನಕ್ಕೇ ಬಂದದ್ದಲ್ಲ. ಶತ್ರುಬಲವೇನೆಂಬುದು ನಮಗೂ ಗೊತ್ತು. ಆದರೆ, ಸೇನಾ ಬಲವೊಂದೇ ಯಾವ ಸಾಮ್ರಾಜ್ಯವನ್ನು ರಕ್ಷಿಸಲಾರದು ಪ್ರಭು . . . .'

'ಮತ್ತೆ . . . .'

'ಅದಕ್ಕಿಂತ ಹೆಚ್ಚಾಗಿ ಪುಣ್ಯಬಲಬೇಕು. ವಿಶ್ವಾಸದ್ರೋಹಿಗಳಾದ ಚಾಲುಕ್ಯರಿಗಾಗಲೀ, ಧರ್ಮದ್ರೋಹಿಗಳಾದ ತಿಗುಳರಿಗಾಗಲಿ ಆ ಬಲವಿಲ್ಲ. ಆ ಬುನಾದಿಯಿಲ್ಲದ ಅವರ ಸಾಮ್ರಾಜ್ಯ ಉಸುಗಿನಲ್ಲಿ ತಟ್ಟಿದ ಮನೆ; ಕುಸಿದು ಬೀಳುವುದೇ ನಿಶ್ಚಯ. ಪುಣ್ಯ ತೀರದ ಬಳಿಕ ಆಕಾಶದಲ್ಲಿ ಸುತ್ತುವ ನಕ್ಷತ್ರವೂ ನೆಲಕ್ಕೆ ಬೀಳುವಂತೆ, ಸಾಮ್ರಾಜ್ಯಗಳೂ ಉರುಳುತ್ತವೆ. ಆದುದರಿಂದ ನಾವು ಆ ಪುಣ್ಯಹೀನರ ಬಲಾಬಲದ ಯೋಚನೆ ಮಾಡದೆ, ದಾಳಿ ನಡೆಸಲು ಅನುಮತಿ ಕೊಡಿ. ಅರ್ಹತ್ಪರಮೇಶ್ವರನ ಕೃಪೆಯಿಂದ ನಮಗೆ ಜಯ ಲಾಭವಾಗುತ್ತದೆ.

§ 2

—ಎಂದು ಹೊಯ್ಸಳರ ಗೆಲುವಿನ ವಿಷಯದಲ್ಲಿ ತಮಗಿದ್ದ ನಂಬಿಕೆಯನ್ನು ಗಂಗರಾಜರು ಆಡಿ ತೋರಿಸಿದರು.

'ನಿಮಗೆಲ್ಲಾ ಅಷ್ಟು ನಂಬಿಕೆಯಿದ್ದರೆ, ಉಳಿದ ಪ್ರಧಾನರೂ ನಿಮ್ಮ ಮಾತಿಗೆ ಒಪ್ಪಿದರೆ, ದಂಡಯಾತ್ರೆ ನಾಳೆಯೇ ನಡೆಯಲಿ. ದಿನ ನಿಶ್ಚಯವಾದಂತೆಯೇ ದಾಳಿ ಯಾವ ದಿಕ್ಕಿನತ್ತ ನಡೆಯಬೇಕೆಂಬುದೂ ನಿಶ್ಚಯವಾಗಬೇಕು.'

'ಯಾವ ದಿಕ್ಕಿನತ್ತ ಎಂಬ ವಿಷಯದಲ್ಲಂತೂ ಏನೂ ಸಂಶಯವೇ ಇಲ್ಲ. ತಲಕಾಡಿನ ತಿಗುಳರೇ ನಮ್ಮ ಮೊದಲ ತುತ್ತು. ಅಲ್ಲವೇ ಗಂಗರಾಜರೇ ?'

—ದಂಡನಾಯಕ ಪುಣಿಸಮಯ್ಯ ಹೇಳಿದರು.

'ನಿಜ, ನಿಜ. ಮೊದಲು ಅವರನ್ನು ಮುಗಿಸಿ ದೇಶವನ್ನು ತಿಗುಳ ಪೀಡೆಯಿಂದ ಮುಕ್ತಗೊಳಿಸಬೇಕು. ಈ ಘಟ ಇನ್ನೂ ಇರುವಾಗಲೇ ಅದೊಂದು ಕೆಲಸ ನಡೆದುಹೋದರೆ, ನನ್ನ ಹುಟ್ಟು ಸಾರ್ಥಕವಾಗುತ್ತದೆ.'

—ಎಂದು ಗಂಗರಾಜರು ಖಚಿತವಾಗಿಯೇ ಹೇಳಿ, ಪುಣಿಸಮಯ್ಯನ ಮಾತಿಗೆ ತಮ್ಮ ಸಮ್ಮತಿಯನ್ನು ಸೂಚಿಸಿದರು.

ಮರಿಯಾನೆದಂಡನಾಯಕ, ಭರತದಂಡನಾಯಕರೂ ಆ ಸಲಹೆಗೇ ಬೆಂಬಲ ನೀಡಿದರು.

ಗಂಗರಾಜರಂತೂ ಚೋಳರ ಹೆಸರು ಕೇಳಿದರೇ ಸಾಕು, ಆಜ್ಯಾಹುತಿಯನ್ನುಂಡ ಅಗ್ನಿಯಂತಾಗುತ್ತಿದ್ದರು. ಅವರು ಚೋಳರನ್ನು 'ತಿಗುಳ'ರೆಂದಲ್ಲದೆ ಬೇರೆ ಹೆಸರಿನಿಂದ ಕರೆಯುತ್ತಲೇ ಇರಲಿಲ್ಲ.

ಉಳಿದ ದಂಡನಾಯಕರೂ ಅಷ್ಟೆ—ಚೋಳರ ಹೆಸರು ಕೇಳಿದರೆ ಉರಿಯಾಗುತ್ತಿದ್ದರು.

ಚೋಳರ ವಿಷಯದಲ್ಲಿ ಅವರೆಲ್ಲರಿಗೂ ಅಷ್ಟೇಕೆ ಆಕ್ರೋಶವೆಂಬುದು ವಿಷ್ಣುವರ್ಧನನಿಗೂ ತಿಳಿದಿತ್ತು.

ಗಂಗರಾಜರು, ಹಿಂದೆ ಗಂಗವಾಡಿ ತೊಂಭತ್ತಾರು ಸಾವಿರದ ಸೀಮೆಯನ್ನು ಏಕಚ್ಛತ್ರಾಧಿಪತಿಗಳಾಗಿ ಯಾರೊಬ್ಬರ ಅಂಕೆಗೂ ಒಳಪಡದೆ ಮತ್ತಗಜಗಳಂತೆ ಬಾಳಿ, ಆಳಿದ ಗಂಗದೊರೆಗಳ ವಂಶಜರು. ತಮ್ಮ ಹಿರಿಯರ

ರಾಜಧಾನಿಯಲ್ಲಿ ಪರಕೀಯರ ಬಾವುಟ ಹಾರುವುದನ್ನು ನೋಡಿ, ಗಂಗರಾಜರ ಅಭಿಮಾನೀ ಜೀವ ತಳಮಳಿಸುತ್ತಿತ್ತು.

ಆದರೆ ಅದಕ್ಕಿಂತ ಹೆಚ್ಚಿನ ವ್ಯಥೆ ಮತ್ತೊಂದಿತ್ತು ಅವರಿಗೆ.

ಗಂಗದೊರೆಗಳು, ತಮ್ಮ ಕಾಲದಲ್ಲಿ ಜೈನ ಧರ್ಮಾವಲಂಬಿಗಳಾಗಿದ್ದುದೇ ಅಲ್ಲದೇ, ಆ ಮತಕ್ಕೆ ಪ್ರೋತ್ಸಾಹಕರಾಗಿದ್ದರು. ಅವರ ಕಾಲದಲ್ಲಿ ಗಂಗವಾಡಿ ಜೈನಧರ್ಮದ ತವರುಮನೆಯಾಗಿತ್ತು. ಸಮಂತಭದ್ರಬಾಹು ಮುನಿಗಳ ಪಾದಧೂಳಿಯಿಂದ ಪವಿತ್ರವಾದ ಶ್ರವಣಬೆಳುಗೊಳದಲ್ಲಿ ಲೋಕಾಶ್ಚರ್ಯ ಕರವಾದ ಭವ್ಯೋತ್ತುಂಗ ಬಾಹುಬಲಿ ಮೂರ್ತಿ ನಿರ್ಮಿತವಾದುದು ಗಂಗ ದೊರೆ ರಾಚಮಲ್ಲನ ದಂಡನಾಯಕನಾದ ಚಾಮುಂಡರಾಯನಿಂದ. ಆ ಬಾಹುಬಲಿ ಮೂರ್ತಿಯು ಪ್ರತಿಷ್ಠೆಯಾದ ಬಳಿಕ, ಶ್ರವಣಬೆಳುಗೊಳ 'ಅಭಿನವ ಪೋದನಪುರ' ವೆಂದು ಖ್ಯಾತವಾಗಿ, ಜಿನಮುನಿಗಳ ನೆಲೆವೀಡಾಗಿ, ಜೈನ ಧರ್ಮೀಯರ ಪ್ರಧಾನ ಧರ್ಮಕ್ಷೇತ್ರವಾಗಿತ್ತು.

ಶ್ರವಣಬೆಳುಗೊಳ, ಹನಸೋಗೆ, ಕಳಸವಾಡಿ ಎಂದು ಒಂದೆರಡು ಊರುಗಳನ್ನು ಹೆಸರಿಸುವುದೇನು, ಗಂಗ ಅರಸರ ಕಾಲದಲ್ಲಿ ಗ್ರಾಮ ಗ್ರಾಮವೂ ಬಸದಿಗಳಿಂದ ಅಲಂಕೃತವಾಗಿ, ಗಂಗವಾಡಿ, ಜಿನವಾಡಿಯಾಗಿತ್ತು.

ಗಂಗ ಅರಸರ ಭಾಗ್ಯ ಬದಲಾಗಿ, ಚೋಳರಾಜ ರಾಜನ ತೊತ್ತುಳದುಳಿತಕ್ಕೆ ಸಿಕ್ಕು ಗಂಗಸಿಂಹಾಸನ ಉರುಳಿದ ಬಳಿಕ, ಅವರೊಂದಿಗೆ ಪಟ್ಟವೇರಿ ರಾರಾಜಿಸಿದ ಜಿನಧರ್ಮವೂ ತನ್ನ ಪ್ರತಿಷ್ಠೆಯನ್ನು ಕಳೆದುಕೊಂಡಿತು. ಚೋಳ ದೊರೆಗಳು ಒಪ್ಪಿದ ಶೈವ, ವೈಷ್ಣವ ಧರ್ಮಗಳು ಪ್ರಬಲಿಸಿ, ದಿನ ದಿನಕ್ಕೆ ಬಸದಿಗಳು ಹಾಳಾಗುತ್ತಾ ಬಂದವು. ಜೈನ ಬಸದಿಗಳ ದೇವಾದಾಯದ ಭೂಮಿ, ಎಷ್ಟೋ ಚೋಳ ದಳಪತಿಗಳ ಭೋಗಕ್ಕೆ ಸಂದಿತು.

ತಮ್ಮ ವಂಶಕ್ಕಾದ ಹಾನಿಗಿಂತ ಹೆಚ್ಚಾಗಿ, ಧರ್ಮಕ್ಕಾದ ಹಾನಿ ಗಂಗ ರಾಜರ ಮನಸ್ಸಿಗೆ ಸಹಿಸಲಾಗದ ಕಿಚ್ಚಾಗಿತ್ತು.

'ಮನುಷ್ಯನ ಆಯುಸ್ಸು ಪರಿಮಿತವಾಗಿರುವಂತೆಯೇ, ಸಾಮ್ರಾಜ್ಯಗಳ ಆಯುಸ್ಸೂ ಪರಿಮಿತವಾದದ್ದು. ಗಾಳಿ ಬೀಸಿದಾಗ ಜಲದಲ್ಲಿ ಮೂಡಿ ಮುಳುಗುವ ಬುದ್ಬುದಗಳಂತೆ, ಇವೂ ಹುಟ್ಟಿ, ಒಂದು ಗಳಿಗೆ ಇಂದ್ರಚಾಪದ ಕಾಂತಿಯನ್ನು ಮೆರೆದು ಮರೆಯಾಗುತ್ತವೆ. ಆದ್ದರಿಂದ ಸಾಮ್ರಾಜ್ಯಹಾನಿ,

ನಿರೀಕ್ಷಿತವಾದದ್ದು. ಅದರ ಅಳಿವಿಗಾಗಿ ನಾನು ಪರಿತಪಿಸುವುದಿಲ್ಲ. ಆದರೆ ಸರ್ವರಿಂದಲೂ ಪರಿಪಾಲಿತವಾಗಿ, ಆಚಂದ್ರಾರ್ಕಸ್ಥಾಯಿಯಾಗಿ ಮೆರೆಯ ಬೇಕಾದ ದೇವಾಲಯ, ಜಿನಾಲಯಗಳಿಗಾದ ಹಾನಿಯನ್ನು ನಾನು ಸಹಿಸಲಾರೆ.'

—ಎಂದು ನುಡಿದು, ನೂರಾರು ಸಮರಗಳಲ್ಲಿ ಹರಿದ ರಕ್ತದ ಪ್ರವಾಹ ವನ್ನು ಕಣ್ಣಾರೆ ಕಂಡೂ ಕಂಗೆಡದ ಗಂಗರಾಜರು, ಮುರಿದ ಬಸದಿಯೊಂದರ ಭಗ್ನ ಶಿಲ್ಪಗಳನ್ನು ನೋಡಿ ಕಂಬನಿ ಮಿಡಿದಿದ್ದರು.

'ಯಾರಿಗೂ ಯಾವ ರೀತಿಯಲ್ಲೂ ತೊಂದರೆ ಕೊಡದೆ, ಸಕಲರ ಲ್ಲಿಯೂ, ಧರ್ಮಭಾವನೆಯನ್ನು, ಆನಂದವನ್ನು ಪ್ರೇರಿಸುವ ಈ ವಿಗ್ರಹ ಗಳನ್ನು ಒಡೆದು ತಮ್ಮ ಮತಪ್ರೇಮವನ್ನು ಮೆರೆಯಿಸಿದ ಮದಾಂಧರನ್ನು ಹುಟ್ಟಡಗಿಸುವವರೆಗೂ ನನ್ನ ಖಡ್ಗಕ್ಕೆ ವಿಶ್ರಾಂತಿಯಿಲ್ಲ'

—ಎಂದು ತಮ್ಮ ಗುರುಗಳಾದ ಶುಭಚಂದ್ರದೇವರ ಪಾದಸಾಕ್ಷಿಯಾಗಿ ಶಪಥ ಮಾಡಿದ್ದರು.

ಗಂಗವಾಡಿಯನ್ನು ಗೆಲ್ಲಬೇಕು. ಗಂಗವಾಡಿಯಲ್ಲಿ ಚೋಳರ ಧಾಳಿ ಯಿಂದ ಜೀರ್ಣವಾದ ಜಿನಮಂದಿರಗಳನ್ನೆಲ್ಲಾ ಪೊಸಯಿಸಿ, ಮತ್ತೆ ಗಂಗ ವಾಡಿಯ ಕೀರ್ತಿಯನ್ನು ಮೆರೆಸಬೇಕೆಂಬ ಬಯಕೆ ದಿನದಿನವೂ ಅವರಲ್ಲಿ ಮೂಡಿ, ಬೆಳೆದು ಅದಮ್ಯ ಆಕಾಂಕ್ಷೆಯಾಗಿತ್ತು.

ಆ ಆಕಾಂಕ್ಷೆಯೇ ಚೋಳರ ಮೇಲಿನ ದಾಳಿಗೆ ಗಂಗರಾಜರನ್ನು ಅಹರ್ನಿಶಿಯೂ ಪ್ರಚೋದಿಸುತ್ತಿದ್ದ ಶಕ್ತಿ.

ಅವರ ಅಭಿಲಾಷೆಯೇ, ಸ್ವಯಂ ಜೈನಧರ್ಮೀಯರಾದ ಪುಣಿಸ ಮಯ್ಯ, ಮರಿಯಾನೆ, ಭರತ ಮೊದಲಾದ ದಂಡನಾಯಕರಿಗೂ ಇತ್ತು.

ವಿಷ್ಣುವರ್ಧನನಿಗೂ, ತನ್ನ ದಂಡನಾಯಕರ ಈ ಅಭಿಲಾಷೆ ಅಪ್ರಿಯ ವಾಗಿರಲಿಲ್ಲ. ಆತನ ಹೃದಯದಲ್ಲೂ ಚೋಳರ ಮೇಲೆ ದಾಳಿ ಮಾಡಬೇ ಕೆಂಬ ಬಯಕೆ ಕುದಿಯುತ್ತಿತ್ತು.

ಹೀಗೆ ದೊರೆ, ದಂಡನಾಯಕರು–ಎಲ್ಲರ ಬಯಕೆಗಳೂ ಮೇಳವಿಸಿ, ಹೊಯ್ಸಳ ಸೇನೆ ತಲಕಾಡಿನ ಮೇಲೆ ದಾಳಿ ಮಾಡುವುದೆಂದು ನಿಶ್ಚಯ ವಾಯಿತು.

೩

# ದಂಡನಾಯಕ ಪಟ್ಟ

ಮಸೆದು ಮೊನೆಯಾದ ಹೊಯ್ಸಳ ಖಡ್ಗ ಕಾಳಿಗೆ, ಚೋಳ ಬಲವೇ ಪ್ರಥಮಾಹುತಿಯೆಂದು ತೀರ್ಮಾನವಾದ ಆಪ್ತ ಸಭೆಯಲ್ಲಿಯೇ, ಆ ದಂಡ ಯಾತ್ರೆಯ ಪ್ರಧಾನ ದಂಡನಾಯಕ ಪಟ್ಟ ಯಾರಿಗೆ ಕಟ್ಟುವುದೆಂಬ ಪ್ರಶ್ನೆ ಯೂ ಚರ್ಚಿತವಾಯಿತು. ವಿಷ್ಣುವರ್ಧನನ ದಂಡನಾಯಕರಲ್ಲಿ ಒಬ್ಬೊ ಬ್ಬರಿಗೂ ತಮ್ಮ ಶಕ್ತಿ, ಸಮರ ಚಾತುರ್ಯ ಪ್ರದರ್ಶನಕ್ಕೆ, ಆತನ ಕಾಲದಲ್ಲಿ ದೊರಕಿದ ಈ ಪ್ರಥಮಾವಕಾಶ ತಮಗೇ ದೊರಕಬೇಕೆಂಬ ಬಯಕೆಯಿತ್ತು.

ಆದರೆ ಸಂಧಿವಿಗ್ರಹ ಸಚಿವನಾದ ಪುಣಿಸಮಯ್ಯ ಆ ಬಗ್ಗೆ ಹೆಚ್ಚು ಚರ್ಚೆ ನಡೆಯಲು ಅವಕಾಶ ಕೊಡದೆ ಹೇಳಿದ—

'ಈ ಬಾರಿಯ ಸಮರದ ರಣವೀಳಯ ತಮಗೆ ದೊರೆಯಬೇಕೆಂಬ ಬಯಕೆ ನಮ್ಮಲ್ಲಿ ಪ್ರತಿಯೊಬ್ಬರಿಗೂ ಇದೆ. ಆ ಮನ್ನಣೆಗೆ ಅನರ್ಹರಾದ ವರು, ಈ ಓಲಗದಲ್ಲಿ ಯಾರೂ ಇಲ್ಲ. ಪ್ರಭು ಸೇವೆಯಲ್ಲಿ, ಹೊಯ್ಸಳ ಸಾಮ್ರಾಜ್ಯಲಕ್ಷ್ಮಿಯ ಆರಾಧನೆಯಲ್ಲಿ ಅರ್ಪಿತವಾಗುವ ಪ್ರಥಮ ರಕ್ತಬಿಂದು ನನ್ನದಾಗಲಿ ಎಂಬ ಉತ್ಸಾಹದಲ್ಲಿ ನಾವೆಲ್ಲರೂ ಸಮಾನಸ್ಕಂಧರಾಗಿದ್ದೇವೆ. ಆದರೆ, ಈ ಗೌರವ ವಯಸ್ಸಿನಲ್ಲಿ, ಸೇವೆಯಲ್ಲಿ, ನಿಷ್ಠೆಯಲ್ಲಿ, ಚೋಳರ ಮೂಲೋತ್ಪಾಟನದ ಬಯಕೆಯಲ್ಲಿ ನಮ್ಮೆಲ್ಲರಿಗಿಂತ ಹಿರಿಯರಾಗಿರುವ ಮಹಾ ಪ್ರಚಂಡ ದಂಡನಾಯಕ ಗಂಗರಾಜರಿಗೇ ಸಲ್ಲಬೇಕು ಎಂಬುದು ನನ್ನ ಅಭಿಲಾಷೆ; ಪ್ರಭುಗಳಲ್ಲಿ ನನ್ನ ನಮ್ರ ವಿನಂತಿಯೂ ಅದೇ ಆಗಿದೆ. ಹಿರಿಯರಾದ ಗಂಗರಾಜರಿಗೂ ನನ್ನ ಅಭಿಪ್ರಾಯ ಮಾನ್ಯವಾಗುವುದೆಂದೇ ನಂಬಿದೇನೆ.'

ಪುಣಿಸಮಯ್ಯನ ಅಭಿಪ್ರಾಯವನ್ನು ಸಾಧುವಲ್ಲ ಎನ್ನುವವರು ಆ ಸಭೆಯಲ್ಲಿ ಯಾರೂ ಇರಲಿಲ್ಲ. ಆದರೇ ಗಂಗರಾಜರೇ ಪುಣಿಸಮಯ್ಯನ

ಅಭಿಪ್ರಾಯಕ್ಕೆ ಇದಿರು ಮಾತನಾಡಿದರು. ಎಲ್ಲರೂ ಮೌನವಾಗಿ ತಮ್ಮ ಸಮ್ಮತಿಯನ್ನು ಸೂಚಿಸಿದ ಬಳಿಕ, ಪ್ರಭುಗಳು ಪುಣಿಸಮಯ್ಯನ ಸೂಚನೆಯನ್ನು ಅಂಗೀಕರಿಸುವರೆಂದೇ ನಂಬಿದ ಸಭಾಸದರಿಗೆ ಗಂಗರಾಜರು—

'ಪ್ರಭುಗಳು ಸಂಧಿವಿಗ್ರಹ ಸಚಿವರ ಸೂಚನೆಯ ಬಗ್ಗೆ ನಮ್ಮ ಅಭಿಪ್ರಾಯ ವ್ಯಕ್ತಪಡಿಸಲು ಅವಕಾಶ ಕೊಡಬೇಕು.'

—ಎಂದು ಬೇಡಿ ಎದ್ದು ನಿಂತದ್ದನ್ನು ಕಂಡು 'ಅವರು ಹೇಳಬೇಕಾದುದನ್ನು ಪುಣಿಸಮಯ್ಯನವರೇ ವ್ಯಕ್ತಪಡಿಸಿದ ಬಳಿಕ ಇವರು ಹೇಳುವುದು ಬೇರೇನು ಉಳಿದಿದೆ' ಎಂದು ಚಕಿತರಾದರು. ಎಂತಲೇ ಅವರೇನು ಹೇಳುವರೋ ಎಂದು ಅವರ ಮಾತನ್ನು ಕುತೂಹಲದಿಂದ ಆಲಿಸಿದರು.

ದೊರೆಗೆ, ಸಚಿವ ಮಂಡಲಿಗೆ, ಸಭಾಸದರಿಗೆ ವಿನಯದಿಂದ ನಮಸ್ಕರಿಸಿ, ಗಂಗರಾಜರು ನುಡಿದರು :

'ಸಂಧಿವಿಗ್ರಹ ಸಚಿವರಾದ ಪುಣಿಸಮಯ್ಯನವರು ತಮಗೆ ತೋಚಿದ ಮಾತನ್ನು ಸ್ಪಷ್ಟವಾಗಿ ಹೇಳಿದಾರೆ. ನನ್ನ ವಿಷಯದಲ್ಲಿ ಅವರು ವ್ಯಕ್ತಪಡಿಸಿದ ವಿಶ್ವಾಸ, ನಂಬಿಕೆಗಳಿಗೆ ನಾನು ಕೃತಜ್ಞನಾಗಿದ್ದೇನೆ. ಮಹಾ ಪ್ರಧಾನ ಪದವೀ ರಕ್ಷಿತನಾದ ನನ್ನ ಹೆಸರನ್ನು, ಸ್ವಯಂ ಸಂಧಿವಿಗ್ರಹ ಸಚಿವರೇ ಸೂಚಿಸಿದಾಗ ಅದಕ್ಕೆ ಇದಿರು ಹೇಳುವ ಇಚ್ಛೆ ತಮ್ಮಲ್ಲಿ ಯಾರಿಗೂ ಇರುವುದಿಲ್ಲ. ನಿಮ್ಮ ಆಯ್ಕೆಯನ್ನು ಪ್ರಭುಗಳೂ ತಳ್ಳಿಹಾಕಲಾರರು. ಎಷ್ಟೋವೇಳೆ, ಇಂಥ ಸಂದರ್ಭಗಳಲ್ಲಿ, ಉಳಿದೆಲ್ಲ ವಿಚಾರಕ್ಕಿಂತ ಮುಖ ದಾಕ್ಷಿಣ್ಯವೇ ಹೆಚ್ಚು ಪರಿಣಾಮಕಾರಿಯಾಗುತ್ತದೆ. ಆದುದರಿಂದ ಈ ಬಗೆಯ ಸನ್ನಿವೇಶದಲ್ಲಿ, ಮುಖದಾಕ್ಷಿಣ್ಯದ ಹೊನ್ನಸಂಕಲೆಯಿಂದ ಬಂಧಿತರಾಗದ ಯಾರಾದರೊಬ್ಬ ಹಿರಿಯರು, ಇಂಥ ಆಯ್ಕೆಯ ಸಾಧಕ–ಬಾಧಕಗಳನ್ನು ನಿಷ್ಪಕ್ಷಪಾತವಾಗಿ ವಿಮರ್ಶಿಸುವುದು ಅತ್ಯಗತ್ಯ. ಇಲ್ಲವಾದಲ್ಲಿ ಯಾರ ಮನದಲ್ಲಿ ಯಾದರೂ ಕಸಿದು ಉಳಿಯಬಹುದು.

'ಈ ಸಭೆ ನನ್ನನ್ನು ಹಿರಿಯ ಎಂದು ಹೇಳಿ, ನನ್ನ ವಯಸ್ಸಿಗೆ ಮರ್ಯಾದೆ ಕೊಟ್ಟಿದೆ. ಆ ಗೌರವವನ್ನು ಉಳಿಸಿಕೊಳ್ಳಬೇಕಾದುದೂ ನನ್ನ ಕರ್ತವ್ಯ.

'ಈ ಇಬ್ಬಗೆಯ ಕರ್ತವ್ಯಗಳಿಂದ ಪ್ರೇರಿತನಾಗಿ ನಾನಾಡುವ

ಮಾತನ್ನು ಅನ್ಯಥಾ ಭಾವಿಸದೆ, ಪ್ರಭುಗಳು, ಸಭೆ ಲಾಲಿಸಬೇಕು'

—ಎಂದು ತಾವು ಆಡಲಿರುವ ಮಾತಿಗೆ ಕಾರಣವನ್ನು ವಿವರಿಸಿ ಹೇಳಿದರು ಗಂಗರಾಜರು.

'ಪ್ರಧಾನ ಸಚಿವರಿಗೆ, ಮನಸ್ಸಿನ ಮಾತನ್ನು ನಿಸ್ಸಂಕೋಚವಾಗಿ ಹೇಳುವ ಅಧಿಕಾರವಿದೆ. ಹಿರಿಯರ ಮಾತು ಸಭೆಗೆ ಅಪ್ಪಣೆಯಿದ್ದಂತೆ. ಹೇಳಿ.'

—ಎಂದ ವಿಷ್ಣುವರ್ಧನ.

'ಪ್ರಭುಗಳ ಅಭಿಮಾನಕ್ಕೆ ನಾನು ಕೃತಜ್ಞ. ನನ್ನ ಬಾಳು ಆ ಅಭಿಮಾನಕ್ಕೆ ಮೀಸಲು. ಸಂಧಿವಿಗ್ರಹ ಸಚಿವರಾದ ಪುಣಿಸಮಯ್ಯನವರು, ಈ ಬಾರಿಯ ಸಮರದ ವೀಳಯ ಪಡೆಯುವ ಅರ್ಹತೆಯಿಲ್ಲದವರು ಈ ಓಲಗದಲ್ಲಿ ಒಬ್ಬರೂ ಇಲ್ಲ ಎಂದರು. ಆ ಮಾತು ನಿಜ. ಉಕ್ಕಿನ ತೋಳ ಕಡುಗಲಿಗಳೇ ಪರಿವಾರದಲ್ಲಿರುವುದು, ಈ ಸಾಮ್ರಾಜ್ಯದ ಭಾಗ್ಯ, ಅಂಥ ವೀರರ ಪರಾಕ್ರಮ, ಹುಣ್ಣಿಮೆಯ ಕಡಲಿನಂತೆ ಉಕ್ಕಬೇಕಾದರೆ, ಅದಕ್ಕೆ ಪ್ರಭು ಕೃಪೆಯ ಚಂದ್ರೋದಯವಾಗಬೇಕು; ಪುರಸ್ಕಾರದ ನೆರೆ ಬಂದು ಸೇರಬೇಕು. ಇಂದು ಒದಗಿರುವಂಥ ಸಮರ ಸಂದರ್ಭ, ಅಂಥ ಅನುಗ್ರಹ, ಪುರಸ್ಕಾರಕ್ಕೆ ಯೋಗ್ಯವಾದ ಸಂದರ್ಭ. ತಲಕಾಡಿನ ಯುದ್ಧ ಎಂದಿನಂತಹುದಲ್ಲ; ಪ್ರಭುಗಳು ತಮ್ಮ ಅಗ್ರಜರಿಗಿತ್ತ ವಾಗ್ದಾನವನ್ನು ಸಾರ್ಥಕಪಡಿಸುವ ಸಂಗ್ರಾಮ. ಎಂತಲೇ ಇಂಥ ಯುದ್ಧದಲ್ಲಿ ಗೆದ್ದು, ತಮ್ಮ 'ಚೋಳವಾಳಿ' ಯನ್ನು ಮೆರೆಸಬೇಕೆಂಬ ಉತ್ಸಾಹ ಯಾರಿಗೆ ಇರುವುದಿಲ್ಲ. ವಯಸ್ಕನಾದ ನನಗೇ ಎಷ್ಟು ಹೊತ್ತಿಗೆ ಯುದ್ಧಾರಂಭವಾದೀತೋ ಎಂದು ತೋಳು ತುರಿಸುತ್ತಿರುವಾಗ, ಇನ್ನು ವಯಸ್ಸಿನಲ್ಲಿ ಕಿರಿಯರೂ, ಸಹಜ ಉತ್ಸಾಹಶಾಲಿಗಳಾದ ಉಳಿದವರಿಗೆ ಎಷ್ಟು ಉತ್ಸಾಹವಿರಬೇಡ. ಅವರ ಪರಾಕ್ರಮ, ಉತ್ಸಾಹ, ತೃಪ್ತಿಗಳೇ ಈ ರಾಜ್ಯವನ್ನು ರಕ್ಷಿಸುವ ವಜ್ರಕೋಟೆ.

'ಎಂತಲೇ ಇಂಥ ಸಮಯದಲ್ಲಿ, ಇವರು ವಯಸ್ಸಿನಲ್ಲಿ ಹಿರಿಯರು ಎಂಬ ಕಾರಣಕ್ಕಾಗಿ ಹಿರಿಯರಿಗೆ ಅಗ್ರಮಾನ್ಯತೆ ಕೊಟ್ಟು, ಕಿರಿಯರ ಉತ್ಸಾಹಕ್ಕೆ ಭಂಗ ತರುವುದು ಉಚಿತವಾಗಲಾರದು.

'ಚೋಳರನ್ನು ಮುರಿದು, ಅವರ ಸಾಮ್ರಾಜ್ಯದ ಸಮಾಧಿಯ ಮೇಲೆ

ಹೊಯ್ಸಳರ ಕೀರ್ತಿ ಧ್ವಜವನ್ನು ಮೆರೆಸಬೇಕೆಂಬ ಉತ್ಕಟೇಚ್ಛೆ ನನಗಿರುವುದು ಸುಳ್ಳಲ್ಲ. ಆ ಕನಸನ್ನು ನನಸಾಗಿ ಕಾಣಲೆಂದೇ ಈ ವೃದ್ಧ ದೇಹ ಪಂಜರದಲ್ಲಿ ಜೀವ ಉಳಿದಿದೆ ಎಂಬುದನ್ನು ನನ್ನನ್ನು ಅರಿತವರೆಲ್ಲರೂ ಬಲ್ಲರು. ಸಂಧಿ ವಿಗ್ರಹ ಸಚಿವರು ಎಲ್ಲರಿಗಿಂತ ಮುಂದಾಗಿ ನನ್ನ ಹೆಸರನ್ನು ಸೂಚಿಸಲು ಅದೂ ಒಂದು ಕಾರಣವಿರಬೇಕು.

'ಆದರೆ ನನ್ನ ಆಸೆ, ನಾನು ಸೇನಾಧಿಪತಿಯಾಗಿಯೇ ತೀರಬೇಕೆಂದಿಲ್ಲ. ಸಾಮಾನ್ಯ ಸೈನಿಕನಾಗಿದ್ದೂ, ದಳಪತಿಯಾಗಿದ್ದೂ ತೀರಬಹುದು. ಆದುದರಿಂದ ಪ್ರಭುಗಳು ಈ ಸಂದರ್ಭದಲ್ಲಿ ಕಿರಿಯ ದಂಡನಾಯಕರನ್ನು ಮರೆಯಬಾರದು. ಹಣ್ಣು ಎಲೆಗಳು ಉದುರಿದ ಬಳಿಕ, ಮತ್ತೆ ಮರಕ್ಕೆ ಕಾಂತಿಯನ್ನು ನೀಡುವುವು ಈ ಚಿಗುರು ಎಲೆಗಳೇ. ಆದುದರಿಂದ ಪ್ರಭುಗಳು ಕಿರಿಯ ದಂಡನಾಯಕರಲ್ಲಿ ಯಾರನ್ನಾದರೂ ಈ ರಣಾಧಿಪತ್ಯಕ್ಕೆ ಆರಿಸಲಿ. ಅವರ ಸೈನಿಕನಾಗಿದ್ದೂ, ಆ ಚೋಳ ಮಂಡಲಾಧೀಶ್ವರ ಅದಿಯಮನ ತಲೆಯನ್ನು ಬೇಟೆಯಾಡಿ, ನಾನು ನನ್ನ ತೋಳ ತೀಟೆಯನ್ನು, ಹೃದಯದ ಬಯಕೆಯನ್ನು ತೀರಿಸಿಕೊಳ್ಳುತ್ತೇನೆ.'

—ಎಂದರು ಪ್ರಚಂಡ ದಂಡನಾಯಕ ಗಂಗರಾಜರು.

ಗಂಗರಾಜರ ಸಲಹೆಗೆ, 'ಬೇರೆಯವರು ಏನಾದರೂ ಹೇಳುವುದಿದೆಯೇ' ಎಂಬ ಭಾವದಿಂದ, ವಿಷ್ಣುವರ್ಧನ ಸಭೆಯಲ್ಲಿ ಕುಳಿತ ಉಳಿದ ದಂಡನಾಯಕರ ಮುಖವನ್ನು ನೋಡಿದ.

ರಾಜ್ಯದ ಹಿರಿಯರೆಲ್ಲರೂ ಕಲೆತ ಈ ಸಭೆಯಲ್ಲಿ, ಕಿರಿಯರಿಗೆ ಮಾತನಾಡುವ ಅವಕಾಶ ಉಂಟೋ ಇಲ್ಲವೋ ಎಂಬ ಸಂದೇಹದಿಂದ ಕಿರಿಯ ದಂಡನಾಯಕರಾರೂ ಮಾತನಾಡದೆ, 'ಏನು ತೀರ್ಮಾನವಿದ್ದರೂ ಹಿರಿಯರು ಮಾಡಲಿ' ಎಂದು ತುಟಿ ಬಿಗಿದು ಕುಳಿತಿದ್ದರು.

'ಈಗ ಕಿರಿಯ ದಂಡನಾಯಕರ ಸರದಿ. ಅವರು ತಮ್ಮ ಅಭಿಪ್ರಾಯ, ಆಯ್ಕೆಯನ್ನು ತಿಳಿಸಬಹುದು.'

—ಎಂದು ವಿಷ್ಣುವರ್ಧನ ಬಾಯಿ ಬಿಟ್ಟು ಹೇಳಿದ ಮೇಲೆ, ವಿಷ್ಣುವರ್ಧನರಾಯನ ಪಾಲಿತಪುತ್ರನಾದ ಕುಮಾರ ವಿಷ್ಣುದಂಡನಾಯಕ ಎದ್ದು ನಿಂತು, ಪ್ರಭು ಪೀಠಕ್ಕೆ, ಸಭೆಗೆ ವಂದಿಸಿ ಹೇಳಿದ :

'ನಾವು ಕಿರಿಯರು, ಎಲ್ಲರಿಗೂ ಮಕ್ಕಳಿದ್ದಂತೆ. ಎಂತಲೇ ನಮ್ಮ ತೊದಲ್ನುಡಿಯಲ್ಲೇನಾದರೂ ತಪ್ಪಿದ್ದರೆ, ಉದಾರತೆಯಿಂದ, ವಿಶ್ವಾಸದಿಂದ ಮನ್ನಿಸಬೇಕು. ಮಹಾಪ್ರಧಾನ, ಪ್ರಚಂಡ ದಂಡನಾಯಕ ಗಂಗರಾಜರು ಅಪ್ಪಣೆ ಕೊಡಿಸಿದ ಅಮೃತ ವಾಕ್ಯಗಳನ್ನು ತಾವೆಲ್ಲರೂ ಲಾಲಿಸಿದೀರ. ಅವರ ಮಾತು ಕೇಳಿದ ಕಿವಿ ಪುನೀತವಾಯಿತು.

'ತಂದೆ ತಾಯಿ ಇಲ್ಲದೆ ತಬ್ಬಲಿಯಾಗಿ, ಪ್ರಭುಗಳ ತೊಡೆಯ ತೊಟ್ಟಿಲಲ್ಲಿ ಬೆಳೆದ ದಿನದಿಂದಲೂ ನಾನು ಗಂಗರಾಜರನ್ನು ಬಲ್ಲೆ. ಅವರ ಪರಾಕ್ರಮದ ಸಾವಿರ ಕಥೆಯನ್ನು ಕೇಳಿಬಲ್ಲೆ. ನಮ್ಮನ್ನು ತಾಯಿಯಂತೆ ಸಾಕಿ ಸಲಹಿದ ಪಿರಿಯರಸಿ, ಪಟ್ಟಮಹಾದೇವಿ ಶಾನ್ತಲಾದೇವಿಯರು, ನನಗೆ ಬುದ್ಧಿಯ ಹಾಲೆರೆದು ಬೆಳೆಸುವಾಗ ಗಂಗರಾಜರ ಬಗ್ಗೆ ಕವಿಯೊಬ್ಬನು ಕಟ್ಟಿದ ಪದ್ಯವೊಂದನ್ನು ಹೇಳಿ ಕಲಿಸಿದ್ದರು. ಸಭೆಯಲ್ಲಿರುವವರೆಲ್ಲರೂ ಆ ಪದ್ಯವನ್ನು ಕೇಳಿರಬೇಕು.

ನುಡಿ ತೊದಳಾದೊಡಂ ಪೊಣರ್ದಂಜಿದೊಡಂತೆರಪದನ್ಯನಾರಿಯೊ
ಳ್ಪಡಿಗೆಡೆಯಾಗೆ ಮೂರು ಮರಿಸ್ತ್ರಾಕ್ತರಸೊಪ್ಪಿಸೆ ನಾಲ್ಕು ಜೀವಿದಂ।
ಪಡೆಯುವೊಡೈದು ಕೂಡಿದೆಡೆಗೊಗದೊಡಾಧಿಪಂಗೆ ತಪ್ಪಿ ಬ
ರ್ದಡಿದೇಳಿನೇಳು ನರಕಂಗಳಿಂದಪಸತ್ತೆ ಗಂಗಣಂ॥

ಎಂದು ಹೊಗಳಿಸಿಕೊಂಡು, ಸಪ್ತ ನರಕಗಳಿಗೂ ಸಿಲಕದೆ ಬದುಕಿದವರು ಗಂಗರಾಜರು. ಭೂಮಿಯಲ್ಲಿ ಮನುಷ್ಯನಾಗಿ, ದೊರೆಯಲ್ಲಿ ದಂಡನಾಯಕನಾಗಿ ಜನಿಸಿದವನು ಹಾಗೆ ಬದುಕಬೇಕು. ನೀನು ಹಾಗೆ ಬದುಕಿದರೆ ನಮಗೆ ಸಂತೋಷ' ಎಂದಿದ್ದರು ನಮ್ಮ ತಾಯಿದೇವಿ.

'ಈ ದಿನ ಮಹಾಪ್ರಧಾನರ ಮಾತು ಕೇಳಿ ಆ ಮಾತು ನಿಜ ಎಂಬುದು ಮನವರಿಕೆಯಾಯಿತು. ಅವರು ಕತ್ತಿಯಾಡಿಸುವುದನ್ನು ನೋಡಿ ಕೋಲು ತಿರುಗಿಸುವುದನ್ನು ಕಲಿತ ನನ್ನಂಥ ಕಿರಿಯರ ಬಗ್ಗೆ ಅವರು ವ್ಯಕ್ತಪಡಿಸಿದ ಅಭಿಮಾನ, ನಮ್ಮ ಪಾಲಿಗೆ ದೇವ ಹರಕೆ. ಅಂಥ ಅಭಿಮಾನ ತೋರಿ ಅವರು ತಮ್ಮ ಕೀರ್ತಿಯನ್ನು ಮತ್ತಷ್ಟು ಹೆಚ್ಚಿಸಿಕೊಂಡರು. ಆ ಕೀರ್ತಿ ಅವರಿಗಿರಲಿ. ಅದರೊಂದಿಗೆ ಅವರು ನಮ್ಮತ್ತ ಚಾಚಿದ ಸೇನಾಧಿಪತ್ಯವೂ ಅವರಿಗಿರಲಿ. ನಾವಿನ್ನೂ ಅವರ ಗರಡಿಯಲ್ಲಿ ಕಲಿಯಬೇಕಾದ ವರಸೆಗಳು

ಸಾವಿರ ಇವೆ. ಅವೆಲ್ಲವನ್ನು ಅವರಿಂದ ಕಲಿತ ಬಳಿಕ ಎಂದಾದರೊಂದು ದಿನ, ನಾವೂ ಅವರ ಕಣ್ಣೆದುರಿಗೇ ಸೇನಾಧಿಪತ್ಯ ವಹಿಸಿ, ಅವರು ಕಲಿಸದ ರಣವಿದ್ಯೆ, ಪ್ರಭುಗಳು ನಮಗಿಟ್ಟ ಅನ್ನ–ಎರಡೂ ಸಾರ್ಥಕವಾಯಿತು ಎನಿಸುತ್ತೇವೆ. ಹೊಯ್ಸಳ ವೀರಲಕ್ಷ್ಮಿಯ ವಿಜಯ ಪರಂಪರೆಗೆಂದೇ ಆರಂಭವಾದ ಪ್ರಭುಗಳ ಆಳ್ವಿಕೆಯಲ್ಲಿ ನಮಗೂ ಸರದಿ ಬರುತ್ತದೆ. ಆ ನಂಬಿಕೆ ನಮಗಿದೆ. ಅಲ್ಲದೆ, ಪ್ರಚಂಡ ದಂಡನಾಯಕರು, ತಾವೇ ಮುಖತಃ ಅಪ್ಪಣೆ ಕೊಡಿಸಿದಾರೆ–ಅದಿಯಮನ ತಲೆ ನನಗಿರಲಿ ಎಂದು. ಚೋಳರು ಅವರ ಮೀಸಲು ಎಡೆ. ದಂಡನಾಯಕರ ಮಕ್ಕಳು ಬೊಪ್ಪಣ್ಣ ನಿಂದ ಚೋಳರನ್ನು ತುಳಿಯಬೇಕೆಂಬ ಆಸೆ ದಂಡನಾಯಕರಿಗೆ ಎಷ್ಟು ಪ್ರಬಲವಾಗಿದೆ ಎಂಬುದನ್ನು ಕೇಳಿದೇನೆ. ಹಾಗಿರುವಾಗ ಅವರು ಬಯಸಿದು ದನ್ನು ಬಯಸುವ ಅಪರಾಧವಾಗಲಿ, ಅವರ ಮೀಸಲು ಎಡೆಗೆ ಕೈಚಾಚುವ ಅವಿನಯವಾಗಲಿ ಕಿರಿಯರಾದ ನಮ್ಮಿಂದ ಎಂದೂ ಆಗದು. ನಮ್ಮ ಹುಡು ಗರಿಗೆ ಈ ಸೌಜನ್ಯ ಪಾಠ ಆಗಿದೆಯೊ ಇಲ್ಲವೋ ಪರೀಕ್ಷಿಸಬೇಕೆಂದೇ ದಂಡ ನಾಯಕರು 'ಸೇನಾಧಿಪತ್ಯ ಕಿರಿಯರಿಗಾಗಲಿ' ಎಂದು ಹೇಳಿದಂತೆ ಕಾಣು ತ್ತದೆ. ಅಂಥ ಪರೀಕ್ಷೆಯಲ್ಲಿ ನಾವು ಸೋಲುವವರಲ್ಲ. ಪ್ರಭುಗಳು ಹಿರಿಯ ಗಂಗರಾಜರಿಗೇ ವೀರಾಭಿಷೇಕ ಮಾಡಿ, ಅರ್ಧಚಂದ್ರ ಲಲಾಟಪಟ್ಟದಿಂದ ಶೋಭಿಸುವ ಅವರ ಶಿರಸನ್ನೇ ಏರಿ, ಸೇನಾಧಿಪತ್ಯದ ಸಿಂಹಮುಖ ಪಟ್ಟಿಕೆಯೂ ರಾರಾಜಿಸಲಿ.'

ಕುಮಾರ ವಿಷ್ಣುದಂಡನಾಯಕ ಆಡಿದ ಮಾತಿನ ನಯ, ವಿನಯಕ್ಕೆ ಸಭೆ ಮೆಚ್ಚಿ ತಲೆದೂಗಿತು. ಆತನ ಮಾತನ್ನು ಕೇಳಿ, ಅವನನ್ನು ತನ್ನ ಧರ್ಮ ಪುತ್ರನಾಗಿ ಮಾಡಿಕೊಂಡುದು ಸಾರ್ಥಕವಾಯಿತು ಎನಿಸಿತು ವಿಷ್ಣು ವರ್ಧನನಿಗೆ. ಆ ಸಂತೋಷದಿಂದ ಮೂಡಿದ ಮಂದಹಾಸದ ಕಾಂತಿ ತುಂಬಿದ ಧ್ವನಿಯಲ್ಲಿ ಗಂಗರಾಜನತ್ತ ತಿರುಗಿ ಹೇಳಿದ—

'ಪ್ರಧಾನಿಗಳೇ ಚೋಳಮರ್ದನ ಕಾರ್ಯದ ಮುಂದಾಳುಗಳಾಗ ಬೇಕು ಎಂಬ ನಮ್ಮ ಅಭಿಪ್ರಾಯವನ್ನೇ ಸಭೆಯೂ ಸೂಚಿಸಿ, 'ಹೊಯ್ಸಳರ ಓಲಗದಲ್ಲಿ ಜನ ಹತ್ತಾದರೂ ಮನಸ್ಸು ಒಂದು' ಎಂಬ ಆಡಿಕೆಯ ಮಾತನ್ನು ಇಂದು ಸಾರ್ಥಕಪಡಿಸಿದೆ. ಹಿರಿಯರು ನಮ್ಮ ಆಯ್ಕೆಯನ್ನು ಒಪ್ಪಿಕೊಂಡು,

ಈ ಕೆಲಸವನ್ನು ನಡೆಸಿಕೊಡಬೇಕು.'

ಎಲ್ಲರೂ ಒಂದಾಗಿ 'ತಾವೇ ದಂಡನಾಯಕರಾಗಬೇಕು' ಎಂದು ಹೇಳಿದುದನ್ನು ಕೇಳಿ ಗಂಗರಾಜರ ಹೃದಯದಲ್ಲಿ ಕೃತಜ್ಞತೆ, ಪ್ರೇಮಗಳು ತುಂಬಿಬಂದು ಕಣ್ಣಿನಲ್ಲಿ ಹನಿಯಾಗಿ ಹೊರಹೊಮ್ಮಿತು. ಉತ್ತರೀಯದ ಕುಡಿಯಿಂದ ಕಣ್ಣನ್ನು ಒರಸಿಕೊಂಡು, ಗದ್ಗದಕಂಠರಾಗಿ ಹೇಳಿದರು—

'ಸಭೆಯ ಅಪ್ಪಣೆಯನ್ನು, ರಾಜಾಜ್ಞೆಯನ್ನು ಅಲ್ಲ ಎಂದು ಹೇಳಲಾರೆ. ತಮ್ಮೆಲ್ಲರ ಅಪ್ಪಣೆ ಹರಕೆಯಾಗಿ ನನ್ನ ನೆತ್ತಿಯ ಮೇಲಿರಲಿ. ಆ ಹರಕೆಯಿಂದ ನನ್ನ ವಯೋ ಜೀರ್ಣ ವೃದ್ಧ ಬಾಹುಗಳಿಗೆ, ತಮ್ಮೆಲ್ಲರ ನಂಬಿಕೆಯನ್ನು ಸಾರ್ಥಕಗೊಳಿಸುವ ಬಲ ಬರಲಿ. ಇಂದು ತಮ್ಮ ಸ್ನೇಹ, ಸೌಜನ್ಯ, ವಿಶ್ವಾಸ, ಪ್ರೇಮಗಳಿಂದ ನನಗೆ ಹಿರಿಯರಾದ ಜನ, ಲೋಕಕ್ಕೆ ಹಿರಿಯರಾಗುವಂತೆ ಜಿನ ಭಗವಂತ ಅನುಗ್ರಹಿಸಲಿ.'

—ಎಂದಷ್ಟು ಹೇಳಿ, ಗಂಟಲು ಕಟ್ಟಿಬಂದು, ಮುಂದೆ ಮಾತನಾಡಲು ಆಗದೆ, ನುಡಿ ತೊದಲಾಗಿ ಗಂಗರಾಜರು ಕುಳಿತುಕೊಂಡರು.

ಸಭೆಯ ಆಯ್ಕೆಯನ್ನು ಗಂಗರಾಜರು ಒಪ್ಪಿದ ಬಳಿಕ, ರಾಜಾಜ್ಞೆಯಂತೆ ಓಲಗದ ಪುರೋಹಿತರು, ಗಂಗರಾಜರ ತಲೆಯ ಮೇಲೆ, ಆಶೀರ್ವಾದ ಮಂತ್ರ ಪೂರ್ವಕವಾಗಿ, ಪುಣ್ಯ ನದೀಜಲವನ್ನು ಸಿಂಪಡಿಸಿ, ಅವರ ಹಣೆಗೆ ಸಿಂಹ ಮುಖವನ್ನುಳ್ಳ ಮಣಿಮಯ ಹೇಮಲಲಾಟ ಪಟ್ಟಿಕೆಯನ್ನಿರಿಸಿದರು.

ದ್ವಿಜರ ಮಂತ್ರಘೋಷದೊಂದಿಗೆ, ಪಂಚ ಮಹಾವಾದ್ಯರವವೂ ಬೆರೆದಿರಲು, ವಿಷ್ಣುವರ್ಧನ ಸ್ವಹಸ್ತದಿಂದ ಸೇನಾಧಿಪತ್ಯ ಸೂಚಕವಾದ ರತ್ನ ಖಚಿತ ಖಡ್ಗವನ್ನು ರಣವೀಳಯದೊಂದಿಗೆ ಗಂಗರಾಜರಿಗೆ ನೀಡಿದ. ಆ ಸಂದರ್ಭದ ಸಂತೋಷದಿಂದ ಸಭೆಯಲ್ಲಿ ಹಬ್ಬಿದ ಕರತಾಡನ, ಹರ್ಷ ಧ್ವನಿಗಳು ಅಡಗಿದ ಬಳಿಕ ನುಡಿದ—

'ವಯೋವೃದ್ಧರೂ, ಜ್ಞಾನವೃದ್ಧರೂ, ಸಮರ ವಿದ್ಯಾಪಾರಂಗತ ಗಾಂಗೇಯರೂ ಆದ ಮಹಾಪ್ರಚಂಡ ದಂಡನಾಯಕರು ಚೋಳರ ಮೇಲೆ ದಾಳಿ ಮಾಡಲೆಂದು ಹೊರಟ, ನಮ್ಮ ಸೇನೆಯ ಆಧಿಪತ್ಯವನ್ನು ವಹಿಸಿ, ಈ ಸಮರದಲ್ಲಿ ಗೆಲುವು ನಮ್ಮದೇ ಎಂಬ ಭರವಸೆಯನ್ನು ನಮಗೆ ನೀಡಿದಾರೆ.

'ಈ ಗಳಿಗೆಯಿಂದಲೂ, ಹೊಯ್ಸಳ ಸೇನೆಗೆ ಅವರ ಆಜ್ಞೆಯೇ ಮಹದಾಜ್ಞೆ. ಅವರ ಮಾತಿಗೆ ಇದಿರಾಡುವುದಾಗಲಿ, ಅಳುಕುವುದಾಗಲಿ ಸಂಶಯ ವ್ಯಕ್ತಪಡಿಸುವುದಾಗಲಿ ರಾಜದ್ರೋಹವಾಗುತ್ತದೆ. ಈ ಮಾತನ್ನು ಯಾರೊಬ್ಬರೂ ಮರೆಯದಿರಲಿ.

'ಮಹಾ ದಂಡನಾಯಕರು ಯಾವ ಬಗೆಯ ದಾಕ್ಷಿಣ್ಯ, ಮುಖ ಮರ್ಯಾದೆ, ಸಂಕೋಚಗಳಿಗೂ ವಶರಾಗದೆ, ಸರ್ವತಂತ್ರ ಸ್ವತಂತ್ರರಾಗಿ ತಮಗೆ ಸೂಕ್ತವೆಂದು ತೋರಿದ ರೀತಿಯಲ್ಲಿ ಯುದ್ಧಯಾತ್ರೆಯನ್ನು ನಡೆಸ ಬಹುದು. ತಮಗೆ ಬೇಕಾದ ಕೆಲಸಕ್ಕೆ ಯಾರನ್ನು ಬೇಕಾದರೂ ನೇಮಿಸಿ ಕೊಳ್ಳುವ, ಒಲ್ಲದವರನ್ನು ತೆಗೆದುಹಾಕುವ, ಸಂಶಯ ಬಂದವರನ್ನು ಶೂಲ ಕ್ಕೇರಿಸುವ ಅಧಿಕಾರವು ಇಂದಿನಿಂದ ಅವರದು. ಸಾಮಾನ್ಯ ಸೈನಿಕನಿರಲಿ, ಸೇನೆಯೊಂದಿಗೆ ಬರುವ ನಮಗೂ ಅವರ ಅಧಿಕಾರ, ಆಜ್ಞೆ ಅನ್ವಯಿಸುತ್ತದೆ. ಈ ಮಾತು ಎಲ್ಲರಿಗೂ ತಿಳಿದಿರಲಿ.

'ಮಹಾಪ್ರಧಾನರು ನಮ್ಮ ವಿಜಯ ಸೇನಾಧಿಪತ್ಯವನ್ನು ಒಪ್ಪಿಕೊಂಡು ನಮಗೆ ಗೆಲುವಿನ ಭರವಸೆ ನೀಡಿದ ಉಪಕಾರಕ್ಕಾಗಿ, ಇಂದು ನಾವು ಅವರಿಗೆ ಬಿಂಡಿಗನವಿಲೆ ಗ್ರಾಮವನ್ನು ಸರ್ವಮಾನ್ಯ ಗ್ರಾಮವಾಗಿ, ಈ ದತ್ತಿ ಆಚಂದ್ರಾರ್ಕಸ್ಥಾಯಿಯಾಗಿ ನಡೆದು ಬರುವಂತೆ ನೇಮಿಸಿ, ಅವರಿಗೆ ನೀಡಿ ದೇನೆ. ಸೇನಾಧಿಪತ್ಯವನ್ನು ಸ್ವೀಕರಿಸಿದಂತೆಯೇ, ದಂಡನಾಯಕರು, ಈ ಅಲ್ಪ ಉಡುಗೊರೆಯನ್ನೂ ಸ್ವೀಕರಿಸಬೇಕು.'

ವಿಷ್ಣುವರ್ಧನನ ಮಾತನ್ನು ಕೇಳಿದ ಸಭೆ ಮತ್ತೊಮ್ಮೆ ಕರತಾಡನ ಮಾಡಿ, 'ಉಘೇ . . .ಉಘೇ. . . .ಗಂಗರಾಜ ದಂಡನಾಯಕ ಉಘೇ' ಎಂದು ಕೂಗಿ, ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸಿತು.

ಆ ಹರ್ಷೋದ್ಗಾರದ ಸದ್ದು ಅಡಗಿದ ಬಳಿಕ, ಗಂಗರಾಜರು ಎದ್ದು ನಿಂತು—

'ಪ್ರಭುಗಳು ತಮ್ಮ ಔದಾರ್ಯದಿಂದ ನನ್ನ ಬಾಯಿ ಕಟ್ಟಿದಾರೆ. ನಾನೇನೂ ನುಡಿಯಲಾರೆ. ಆದರೆ ಇಷ್ಟು ಮಾತ್ರ ಹೇಳಲೇಬೇಕು. ಯುದ್ಧದಲ್ಲಿ ಗೆದ್ದವರಿಗೆ, ಅವರು ತೋರಿದ ಸಾಹಸಕ್ಕಾಗಿ, ಮೆಚ್ಚುಗೆಯ ಉಡುಗೊರೆಯನ್ನು ಕೊಡುವುದು, ಯುದ್ಧದಲ್ಲಿ ಮೃತರಾದವರಿಗೆ ಪರೋಕ್ಷ

ವಿನಯವಾಗಿ ದಾನ ನೀಡುವುದು ಎರಡನ್ನೂ ನಾನು ಕೇಳಿಬಲ್ಲೆ. ಆದರೆ ನನಗೆ ಆ ಇಬ್ಬಗೆಯಲ್ಲಿ ಯಾವುದೇ ರೀತಿಯಲ್ಲೂ ಉಡುಗೊರೆ ಪಡೆಯುವ ಅರ್ಹತೆ ಬಂದಿಲ್ಲ. ಆದರೂ ಪ್ರಭುಗಳು ತಮ್ಮ ಅಸೀಮ ಔದಾರ್ಯದಿಂದ ನನಗೆ ಬಿಂಡಿಗನವಿಲೆಯನ್ನು ದಾನ ನೀಡಿದಾರೆ. ಈ ವಿಷಯದಲ್ಲಿ ಪ್ರಭುಗಳು ನನ್ನಲ್ಲಿ ತೋರಿದ ನಂಬುಗೆ, ಇಂಥ ಕೋಟಿ ಉಡುಗೊರೆಗಳಿಗಿಂತಲೂ ಮಿಗಿಲಾದದ್ದು. ಆ ನಂಬಿಕೆ, ವಿಶ್ವಾಸವೊಂದು ನನ್ನಲ್ಲಿ, ನನ್ನ ಮನೆತನದವರಲ್ಲಿ ಆಚಂದ್ರಾರ್ಕಸ್ಥಾಯಿಯಾಗಿ ಉಳಿಯಲಿ. ಪ್ರಭುಗಳು ನನಗೆ ಕೊಟ್ಟ ಬಿಂಡಿಗನವಿಲೆ ಗ್ರಾಮವನ್ನು ಅವರು ನನ್ನಲ್ಲಿಟ್ಟ ನಂಬಿಕೆ ಸಾರ್ಥಕವಾಗುವಂತೆ ಅನುಗ್ರಹಿಸಲೆಂದು ಆದಿ ತೀರ್ಥಂಕರರ ದಿವ್ಯ ಅಡಿಗಳ ನಿತ್ಯಾರ್ಚನೆಗಾಗಿ ನನ್ನ ಗುರುಗಳಾದ ಶ್ರೀ ಶ್ರೀ ಶ್ರೀ ಶುಭಚಂದ್ರ ಸಿದ್ಧಾಂತ ದೇವರ ಪಾದಪಂಕಜಗಳಿಗೆ ಅರ್ಪಿಸಿದ್ದೇನೆ. ಆದರಂತೆ ಪ್ರಭುಗಳು ಶಾಸನವನ್ನು ದಯಪಾಲಿಸಬೇಕಾಗಿ ಬೇಡುತ್ತೇನೆ. ಪ್ರಭುಗಳ ರತ್ನ ಮುಕುಟಕ್ಕೆ ಅವರ ಸಿಂಹಾಸನಕ್ಕೆ ದೈವಾನುಗ್ರಹ, ಗುರು ಹರಕೆಯ ವಜ್ರ ರಕ್ಷೆಯಿರಲಿ. ಪ್ರಭುಗಳಿಗೆ ನಿತ್ಯ ವಿಜಯವಾಗಲಿ.'

—ಎಂದು ಹೇಳಿದರು.

ಅಂದಿನ ದೊರೆಯ ಓಲಗದಲ್ಲಾದ ದೊರೆಯ ಮತ್ತು ಗಂಗರಾಜರ ಔದಾರ್ಯದ ಘಟನೆ ಕಥೆಯಾಗಿ ಹೊಯ್ಸಳ ಸೀಮೆಯಲ್ಲೆಲ್ಲಾ ಹಬ್ಬಿತು.

೪

# ಗೌರಾಚಾರಿಯ ಉಡುಗೊರೆ

ಸೇನಾಧಿಪತ್ಯವನ್ನು ಪಡೆದ ಗಳಿಗೆಯಿಂದಲೂ, ಗಂಗರಾಜರು ದಂಡಯಾತ್ರೆಗೆ ಸೇನೆಯನ್ನು ಸಿದ್ಧಗೊಳಿಸುವ ಕೆಲಸವನ್ನು ಆರಂಭಿಸಿದರು. ಚೋಳರನ್ನು ಗೆಲ್ಲಬೇಕೆಂಬ ಗಂಗರಾಜರ ಬಯಕೆ, ಸೇನಾಧಿಪತ್ಯ ತಮಗೇ ಆದ ಬಳಿಕ, 'ಬರೀ ಗೆಲ್ಲುವುದೇನು, ಮತ್ತೆ ಕಾವೇರಿಯ ಆಚೆ ಎಲ್ಲೂ ಚೋಳರ ಸೊಲ್ಲು ಕೇಳದಂತೆ ಮಾಡಬೇಕು' ಎಂಬ ಶಪಥವಾಗಿ ಮಾರ್ಪಟ್ಟಿತ್ತು.

ಆ ಶಪಥ ಸಾಧನೆಗಾಗಿ, ಚೋಳರ ಒಳಗುಟ್ಟನ್ನರಿತ ಬೇಹುಗಾರರು ತಂದಿತ್ತ ವಾರ್ತೆಗಳನ್ನು ಸಂಗ್ರಹಿಸಿ, ಅದರ ಆಧಾರದ ಮೇಲೆ, ಸಮರ ತಂತ್ರಜ್ಞರೊಂದಿಗೆ ವಿಚಾರ ವಿನಿಮಯ ನಡೆಸಿ, ಚೋಳ ಸೀಮೆಗೆ ಹೇಗೆ ಮುತ್ತಿಗೆ ಹಾಕುವುದೆಂದು ನಿಶ್ಚಯಿಸಿದರು. ಮಾಂಸದ ಒಳಗೆ ಹುದುಗಿದ ಮುಳ್ಳನ್ನು ಇಕ್ಕಳದಿಂದ ಕೀಳುವಂತೆ, ತಲಕಾಡಿನ ಕೋಟೆಯೊಳಗೆ ಅವಿತ ಚೋಳ ದಳಪತಿಯನ್ನು ಇಬ್ಬದಿಯಿಂದ ಬಳಸಿ, ಸುತ್ತುಗಟ್ಟಿ ನಾಶಮಾಡುವುದೆಂದು ತೀರ್ಮಾನಿಸಿದರು.

ಆ ತಂತ್ರಕ್ಕೆ ಅನುಸಾರವಾಗಿ, ತಲಕಾಡಿನ ದಂಡಯಾತ್ರೆಗೆಂದು ಗೊತ್ತಾದ ಹೊಯ್ಸಳ ದಳವನ್ನು ಇಬ್ಭಾಗವಾಗಿ ವಿಭಾಗಿಸಿ, ಒಂದು ಸೀಳು ತೊಂಡನೂರು, ಶ್ರೀರಂಗಪಟ್ಟಣ, ಬನ್ನೂರು, ಜನನಾಥಪುರಗಳ ಮಾರ್ಗವಾಗಿ ತಲಕಾಡಿನತ್ತ ನಡೆಯಬೇಕೆಂದೂ, ಮತ್ತೊಂದು ಸೀಳು, ಶ್ರೀಮುದನಾದಿ ನಾರಸಿಂಹ ಚತುರ್ವೇದಿ ಮಂಗಲ (ಮದ್ದೂರು) ಮಳವಳ್ಳಿಯ ಮಾರ್ಗವಾಗಿ ದಾಳಿ ಮಾಡಬೇಕೆಂದೂ ಗೊತ್ತು ಮಾಡಿದರು.

ಹಾಗೇ ತಲಕಾಡಿನ ಮೇಲೆ ಹೊಯ್ಸಳರ ದಾಳಿ ನಡೆದ ಸಂದರ್ಭದಲ್ಲಿ, ನಿಗರಿಲಿ ಶೋಳ ಮಂಡಲದ ಚೋಳ ಸಾಮನ್ತರಾಗಲಿ, ನೀಲಗಿರಿ, ಕೊಂಗು

ಸೀಮೆಯ ಚೋಳ ಮಾಂಡಲಿಕರಾಗಲಿ, ತಲಕಾಡಿನವರ ನೆರವಿಗೆ ಬರಲಾಗ ದಂತೆ, ಅವರ ಮೇಲೂ ಅದೇ ಕಾಲಕ್ಕೆ ದಾಳಿ ನಡೆಸಬೇಕೆಂದು ನಿಶ್ಚಯ ವಾಯಿತು.

ದಂಡಯಾತ್ರೆಯನ್ನು ಹೇಗೆ ನಡೆಸಬೇಕೆಂದು ನಿಶ್ಚಯವಾದಂತೆಯೇ, ದಂಡಯಾತ್ರೆ ತೆರಳುವ ಸೇನೆಗೆ ಆ ಕಾಲದಲ್ಲಿ ಯಾವ ಕೊರತೆಯೂ ಉಂಟಾಗದಂತೆ, ಯಾವುದರ ಅಭಾವದಿಂದಲೂ ಸೇನೆ ಕೊರಗದಂತೆ, ಪ್ರತಿ ಯೊಂದು ಪರಿಕರವೂ ಸಾಕಷ್ಟು ಪ್ರಮಾಣದಲ್ಲಿ ಸಂಗ್ರಹವಾಗಿದೆಯೇ ಇಲ್ಲವೇ ಎಂಬುದನ್ನು ಸವಿವರವಾಗಿ ವಿಚಾರಿಸಿ ಎಲ್ಲವೂ ತೃಪ್ತಿಕರವಾಗಿದೆ ಎಂದು ಮನಸ್ಸಿಗೆ ನೆಮ್ಮದಿಮಾಡಿಕೊಂಡರು–ಗಂಗರಾಜರು.

ಎಲ್ಲವೂ ಗಂಗರಾಜರ ಮನಸ್ಸು ಒಪ್ಪುವಂತೆ ಸಿದ್ಧವಾದರೂ, ಅಳು ಕೊಂದು ಗಂಗರಾಜರ ಮನಸ್ಸಿನಲ್ಲಿ ಇರಿಯುತ್ತಲೇ ಇತ್ತು. ಅದಕ್ಕೆ ಕಾರಣ –ವಿಷ್ಣುವರ್ಧನ ತಾನೇ ನೇರವಾಗಿ ತಲಕಾಡಿನ ಯುದ್ಧದಲ್ಲಿ ಭಾಗವಹಿಸು ತ್ತೇನೆ ಎಂದು ನಿಶ್ಚಯಿಸಿದ್ದು.

ಗಂಗರಾಜನಿಗೆ ಸೇನಾಧಿಪತ್ಯವಾದ ಓಲಗದಲ್ಲೇ ವಿಷ್ಣುವರ್ಧನ—

'ಇವರ ಆಜ್ಞೆ, ಸೇನೆಯ ಮೇಲೇ ಅಲ್ಲದೆ ಸೇನೆಯೊಂದಿಗೆ ಬರುವ ನಮ್ಮ ಮೇಲೂ ನಡೆಯುತ್ತದೆ'

—ಎಂದು ಹೇಳಿ, ತನ್ನ ಅಭಿಲಾಷೆಯನ್ನು ಸೂಕ್ಷ್ಮವಾಗಿ ತಿಳುಹಿದ್ದ.

ಸುತ್ತಲವರು ಆಡುವ ಒಂದೊಂದು ಮಾತನ್ನೂ,-ಅದು ಮುಖ್ಯವೋ ಅಮುಖ್ಯವೋ-ಗಮನವಿಟ್ಟು ಕೇಳಿ, ಬಳಿಕ ಆ ಮಾತಿನ ಹಿಂದೆ ಬೇರೇನಾದರೂ ಅಡಿಗಿದೆಯೋ ಎಂದು ಚಿಂತಿಸುವುದು ಮಹಾಪ್ರಧಾನರಾದ ಗಂಗರಾಜರಿಗೆ ಅಭ್ಯಾಸದಿಂದ ಬಂದ ಗುಣವಾಗಿತ್ತು. ಎಂತಲೇ ವಿಷ್ಣುವರ್ಧನ ಪ್ರಾಸಂಗಿಕ ವಾಗಿ ಆಡಿದ ಆ ಮಾತು, ಅವರ ಕಿವಿಯನ್ನು ಪ್ರವೇಶಿಸಿ ಹೃದಯವನ್ನು ಮುಟ್ಟಿತ್ತು. ಆ ಮಾತು ಕೇಳಿದ ಗಳಿಗೆಯಿಂದಲೂ ದೊರೆಯೊಂದಿಗೆ ಆ ವಿಷಯದಲ್ಲಿ ಪ್ರಸ್ತಾಪಮಾಡಿ, ಆತನ ಮನೋಗತವೇನೆಂಬುದನ್ನು ತಿಳಿದು ಕೊಳ್ಳಬೇಕೆಂದು ಚಡಪಡಿಸುತ್ತಿದ್ದರು.

ದಿನ ದಿನವೂ ಅವರು ದೊರೆಯನ್ನು ಕಂಡು, ಯುದ್ಧಸಿದ್ಧತೆಯ ವಿಚಾರ ಚರ್ಚಿಸುತ್ತಿದ್ದರೂ, ದಿನವೂ ಅವರು ವಿಷ್ಣುವರ್ಧನನನ್ನು 'ಕೇಳಬೇಕು.

ಕೇಳಿ ಮನಸ್ಸಿನ ಸಂದೇಹ ನಿವಾರಣೆ ಮಾಡಿಕೊಳ್ಳಬೇಕು' ಎಂದು ಕೊಳ್ಳು ತ್ತಿದ್ದ ಪ್ರಶ್ನೆಯನ್ನು ಮಾತ್ರ ಕೇಳಲಾಗುತ್ತಿರಲಿಲ್ಲ. ವಿಷ್ಣುವರ್ಧನನೇ ಹೇಗೊ ಆ ಮಾತು ಚರ್ಚೆಗೆ ಬರದಂತೆ, ಸಂಭಾಷಣೆಯನ್ನು ಕುಶಲವಾಗಿ ನಡೆಸುತ್ತಿರು ವಂತೆ ಅವರಿಗೆ ಬೋಧೆಯಾಗುತ್ತಿತ್ತು.

ಒಮ್ಮೊಮ್ಮೆ, ದೊರೆ ಆ ಮಾತು ತಪ್ಪಿಸುವುದನ್ನು ಕಂಡು ತಾವೇ ನೇರವಾಗಿ ಕೇಳಿ ಮನಸಿನ ತವಕವನ್ನು ನಿವಾರಣೆ ಮಾಡಿಕೊಳ್ಳಬೇಕು ಎನಿಸುತ್ತಿತ್ತು. ಆದರೆ 'ಒಂದು ವೇಳೆ ದೊರೆಗಳು ಏನೋ ಆ ಹೊತ್ತಿನಲ್ಲಿ ತೋಚಿತೆಂದು ಆಡಿ, ಬಳಿಕ ಮರೆತಿದ್ದರೆ, ನಾನಾಗಿಯೇ ಆ ಮಾತನ್ನು ನೆನಪಿಸುವುದೇಕೆ?' ಎಂದು ಹಿಂಜರಿದು ತಾವೂ ಕೇಳದೆ ಸುಮ್ಮನಾಗು ತ್ತಿದ್ದರು.

ಅಂತೂ ತಮ್ಮ ಮುಂದಿಲ್ಲವಾದರೆ ಹೋಗಲಿ, ಬೇರೆ ಯಾರ ಮುಂದಾದರೂ ವಿಷ್ಣುವರ್ಧನ ಆ ವಿಷಯದಲ್ಲಿ ಪ್ರಸ್ತಾಪಮಾಡಿದ್ದರೆ, ಅವರಿಂದಲಾದರೂ ಆ ವಿಷಯವನ್ನು ಖಚಿತವಾಗಿ ಹೀಗೇ ಎಂದು ತಿಳಿಯ ಬೇಕೆಂದು ಯೋಚಿಸುತ್ತಿದ್ದರು.

ಹೀಗಿರುವಾಗಲೇ ಒಂದು ದಿನ ಹಗಲು ಬೋಕಿಮಯ್ಯ, ಅರಸನ ಆಣತಿ ಯಂತೆ, ಏನೋ ಸುದ್ದಿ ತಿಳಿಸಲು ಗಂಗರಾಜರ ಮನೆಗೆ ಬಂದ.

ಬೋಕಿಮಯ್ಯ ವಿಷ್ಣುವರ್ಧನ ದೇವನ ಹಡವಳ, ಅದಕ್ಕಿಂತ ಹೆಚ್ಚಾಗಿ ಆತನ 'ಗರುಡ'. ದೊರೆ ಎಲ್ಲಿದ್ದರೆ ಆತನು ಅಲ್ಲಿರಬೇಕು; ದೊರೆ ಎಲ್ಲಿ ನಡೆದರೆ ಆತನಿಗಿಂತ ಒಂದು ಹೆಜ್ಜೆ ಮುಂದೆ ಈತ ಇರಬೇಕು. ಅಂತಃಪುರ ದಲ್ಲಿ ಒಂದೆಡೆಯಲ್ಲಿ ಉಳಿದು, ಬೇರೆಲ್ಲ ದೊರೆಯ ಕಣ್ಣು ಏನು ನೋಡಿದರೂ, ಕಿವಿ ಏನು ಕೇಳಿದರೂ, ನಾಲಿಗೆ ಏನು ನುಡಿದರೂ ಅದು ಬೋಕಿಮಯ್ಯನಿಗೆ ತಿಳಿದಿರಲೇಬೇಕು. ಎಂತಲೇ ಬೋಕಿಮಯ್ಯ ಯಾವುದಾದರೂ ವಿಷಯ ದಲ್ಲಿ 'ಅದು ಹಾಗೆ, ಇದು ಹೀಗೆ' ಎಂದು ಹೇಳಿದರೆ, ಅದು ಆತನದಲ್ಲ ದೊರೆಯದೇ ಅಭಿಪ್ರಾಯ ಎಂದೇ ಹೇಳಬಹುದಾಗಿತ್ತು. ಬೋಕಿಮಯ್ಯನ ವಿಷಯದಲ್ಲಿ ಆ ನಂಬಿಕೆ ಇದ್ದುದರಿಂದಲೇ, 'ಯುದ್ಧಕ್ಕೆ ತೆರಳುವ ವಿಷಯದಲ್ಲಿ ದೊರೆಯ ಅಭಿಪ್ರಾಯ ಹೇಗೊ' ಎಂಬುದನ್ನು ಅರಿಯುವ ಕಾತರದಿಂದ ಕುದಿಯುವ ಗಂಗರಾಜರಿಗೆ, ಬೋಕಿಮಯ್ಯ ತಾನಾಗಿಯೇ ಮನೆ ಬಾಗಿಲಿಗೆ

ಬಂದದ್ದನ್ನು ಕಂಡು ಸಂತೋಷವಾಯಿತು.

'ಬನ್ನಿ ಬೋಕಿಮಯ್ಯ. ಕುಳಿತುಕೊಳ್ಳಿ. ಬಹಳದೂರ ಮನೆ ಬಾಗಿಲಿಗೇ ದಯಮಾಡಿಸಿದಿರಿ'

—ಎಂದು ಅವನನ್ನು ವಿಶ್ವಾಸದಿಂದ ಕರೆದು, ಕೂಡಲು ಆಸನವನ್ನು ತೋರಿಸಿ, ಬಳಿಯಲ್ಲಿದ್ದ ಪರಿಚಾರಕನಿಗೆ, ಬೋಕಿಮಯ್ಯನಿಗೆ ಹಾಲು ಹಣ್ಣುಗಳನ್ನು ತಂದುಕೊಡಲು ಹೇಳಿ—

'ಏನು ವಿಶೇಷ?'

—ಎಂದು ಕೇಳಿದರು.

'ಪ್ರಭುಗಳೇ ನಿಮ್ಮ ಬಳಿಗೆ ಕಳಿಸಿದರು.'

'ಅಪ್ಪಣೆಯಾಗಿದ್ದರೆ, ನಾನೇ ಅರಮನೆಗೆ ಬರುತ್ತಿದ್ದೆ. ಆಯಿತು. ಪ್ರಭುಗಳು ಏನು ಅಪ್ಪಣೆ ಮಾಡಿದರು?'

'ಬಳ್ಳಿಗಾಪೆಯಿಂದ, ದೊರೆಗಳ ಮಾವಂದಿರಾದ ಪೆರ್ಗ್ಗಡೆ ಮಾರಸಿಂಗಮಯ್ಯನವರು, ಒಬ್ಬ ಕುಶಲ ಲೋಹಕರ್ಮಿಯನ್ನು ಕಳಿಸಿಕೊಟ್ಟಿದ್ದಾರೆ. 'ಬಹಳ ನಿಪುಣನಾದ ಆತ ಏನೋ ಕೆಲವು ಹೊಸ ಸಂಶೋಧನೆಗಳನ್ನು ಮಾಡಿದಾನೆ. ಆತನ ಸಂಶೋಧನೆಗಳಿಂದ ಸೇನೆಗೆ, ಯುದ್ಧದಲ್ಲಿ ತುಂಬಾ ಸಹಾಯವಾಗಬಹುದು. ಆತ ತಮ್ಮ ಆಸ್ಥಾನದಲ್ಲಿರಲು ಅರ್ಹನಾದ ವ್ಯಕ್ತಿ' ಎಂದು ಹೇಳಿ ಕಳಿಸಿದಾರೆ ಮಾರಸಿಂಗಮಯ್ಯನವರು.'

'ತಮ್ಮ ಅಳಿಯಂದಿರ ವಿಷಯದಲ್ಲಿ ಮಾರಸಿಂಗಮಯ್ಯನವರಿಗೆ ಇರುವ ಅಭಿಮಾನ ಅಭಿನಂದನಾರ್ಹವಾದದ್ದು. ನಾರೀಜನ ರತ್ನವಾದ ತಮ್ಮ ಅಣುಗಿಯನ್ನು ಪ್ರಭುಗಳಿಗೆ ಮರವಳಿಗೆಯಾಗಿ ನೀಡಿ, ಅವರ ಅಭ್ಯುದಯಕ್ಕೆ ದೋಹದ ಮಾಡಿದುದೇ ಅಲ್ಲದೆ, ತಮ್ಮ ಕಣ್ಣಿಗೆ ಏನು ಅತಿಶಯವಾದದ್ದು ಕಂಡರೂ, ಅದು ತಮ್ಮ ಅಳಿಯನ ಆಸ್ಥಾನಕ್ಕೆ ಅಲಂಕಾರವಾಗಲಿ ಎಂದು ಬಯಸುವ ಅವರ ಅಭಿಮಾನ ಅತಿಶಯವಾದದ್ದು. ಅಂಥ ಮಾವಂದಿರು ಸಿಗುವುದು ಪೂರ್ವಪುಣ್ಯ. ಇರಲಿ–ಅವರು ಕಳಿಸಿರುವ ಲೋಹ ಕರ್ಮಿ ಈಗ ಎಲ್ಲಿದ್ದಾನೆ?'

'ತಮಗೆ ಒಪ್ಪಿಸಬೇಕು ಎಂದು ಹೇಳಿ ನನ್ನೊಂದಿಗೆ ದೊರೆಗಳು ಕಳಿಸಿದರು. ನಿಮ್ಮ ಸಮಯ ಹೇಗೋ ಏನೋ ತಿಳಿಯಬೇಕೆಂದು ಹೊರಗೆ

ಇರುವಂತೆ ತಿಳಿಸಿ ಬಂದೆ.'

'ಆತನ ಪ್ರತಿಭಾ ವಿಶೇಷವೇನಂತೆ ?'

'ನನಗೂ ಕುತೂಹಲ ತಡೆಯದೆ, ದಾರಿಯಲ್ಲೇ ಅದು ಏನು, ಎಂಥದು, ಮಾದರಿ ಏನಾದರೂ ತಂದಿದ್ದೀರಾ ಎಂದು ವಿಚಾರಿಸಿದೆ. ಆತ ಏನೇನೋ ವಿವರಿಸಿದ. ಆದರೆ, ನನ್ನ ತಲೆಗೆ ಅದಾವುದೂ ಹಿಡಿಯಲಿಲ್ಲ. ದೊರೆಗಳು ಆತನನ್ನು ವಿಚಾರಿಸಿ ತಿಳಿದುಕೊಂಡು 'ಈತ ಹೇಳುವುದು ನಿಜವಾದರೆ, ಅದರಿಂದ ನಮಗೆ ಅತ್ಯಂತ ಹೆಚ್ಚಿನ ಉಪಕಾರವಾಗುತ್ತದೆ' ಎಂದರು. ಪ್ರಭುಗಳು, ನೀವು–ನಿಮ್ಮಿಬ್ಬರಿಗೆ ನೀಡಿದ ಕುಶಾಗ್ರ ಮತಿಯನ್ನು ವಿಧಾತ ನಮಗೆ ಕರುಣಿಸಲಿಲ್ಲ. ಆದರೆ ಒರಟು ಒರಟಾಗಿ ಇಷ್ಟು ತಿಳಿಯಿತು. . . . . . . .'

'ಅದೇನು ಹೇಳಿ ?'

'ನಮ್ಮ ರಥಗಳು ಏರು ಇಳಿವಿನ ಮೇಲೆ, ಕಲ್ಲು ಜಾಡಿನಲ್ಲಿ ಚಲಿಸುವಾಗ, ಆಗುವ ಕುಲಕಾಟದಿಂದ ತುಂಬ ತೊಂದರೆಯಾಗುತ್ತದೆಯಲ್ಲವೇ ? ಆ ತೊಂದರೆಯನ್ನು ನಿವಾರಿಸುವ ಏನೋ ಒಂದು ಲೋಹ ರಜ್ಜು ವಿಶೇಷವನ್ನು ಆತ ಕಂಡುಹಿಡಿದಿದಾನಂತೆ. ಅದೇನು ಎಂದು ಕೇಳಿದುದಕ್ಕೆ ಎಂಥದೋ ಒಂದು ಕಬ್ಬಿಣದ ಸರಪಳಿ ತೋರಿಸಿದ. ಅದನ್ನು ಬೇಕಾದರೆ ಇದ್ದರೂ ಇರಬಹುದು ಎಂದು ನಂಬಬಹುದು. ಆದರೆ ಆತ ಹೇಳಿದ ಇನ್ನೊಂದು ವಿಷಯ ಮಾತ್ರ ಸುತರಾಂ ನಂಬುವುದಕ್ಕೆ ಆಗದು. ಆತ ಆ ವಿಷಯ ಹೇಳಿದಾಗ, ಏನೋ ಯೋಚಿಸಿ, ಯೋಚಿಸಿ, ಆತನ ಮಿದುಳು ಕೆಟ್ಟಿರಬೇಕು ಎಂದೇ ನನಗೆ ತೋರಿತು. 'ಅತಿ ಸರ್ವತ್ರ ವರ್ಜಯೇತ್' ಎಂದು ಹಿರಿಯರು ಹೇಳಿದುದು ಸುಳ್ಳಲ್ಲ.'

—ಎಂದ ಬೋಕಿಮಯ್ಯ ನಗುತ್ತಾ.

ಆತ ಹೇಳಿದುದನ್ನು ಕೇಳಿ ಗಂಗರಾಜರಿಗೆ ಮಾತ್ರ ನಗು ಬರಲಿಲ್ಲ. ಅದಕ್ಕೆ ಪ್ರತಿಯಾಗಿ ಅವರ ಆಸಕ್ತಿ ಕೆರಳಿತು.

'ನೀವು ಹೇಳುವುದೂ ಸುಳ್ಳಲ್ಲ ಬೋಕಿಮಯ್ಯ. 'ಓದಿ ಓದಿ ಮರುಳಾದ ಕೂಚಿಭಟ್ಟ' ಎನ್ನುವ ಗಾದೆಯೂ ಸುಳ್ಳಲ್ಲ. ಹಾಗೇ ನಮ್ಮ ಕಣ್ಣು ಕಂಡದ್ದೇ ನಿಜ, ನಮ್ಮ ಕಿವಿ ಕೇಳಿದ್ದೇ ಸತ್ಯ, ನಮ್ಮ ಬುದ್ಧಿ ಊಹಿಸಿದ್ದೇ ಸಿದ್ಧಾಂತ ಎನ್ನುವ ಚಪಲವೂ ಅಹಂಕಾರ ಬಂಧಿತರಾದ ಮಾನವರಲ್ಲಿರು

ವುದು ಸುಳ್ಳಲ್ಲ. ನೆಲದಲ್ಲಿ ನಿಂತು ನೋಡಿದವನು, ಬೆಟ್ಟದ ಮೇಲೆ ನಿಂತು ನೋಡಿದವನು ಹೇಳಿದುದನ್ನು ನಂಬದೆ ಹೋದಮಾತ್ರಕ್ಕೆ, ಅದು, ಕೆಳಗೆ ನಿಂತವನ ದೃಷ್ಟಿ ಪರಿಮಿತಿಗೆ ಪ್ರಮಾಣವಾಗುವುದೇ ಹೊರತು, ಮೇಲೆ ನಿಂತು ಹೇಳಿದವನ ಮಾತು ಸುಳ್ಳು ಎನ್ನುವುದಕ್ಕೆ ಸಾಕ್ಷಿಯಾಗುವುದಿಲ್ಲ.'

—ಎಂದರು ಬೋಕಿಮಯ್ಯನ ವಾದವನ್ನು ಗಂಭೀರವಾಗಿ ಖಂಡಿಸಿ.

ಅವರ ಮಾತನ್ನು ಕೇಳಿ, ಬೋಕಿಮಯ್ಯನ ಮುಖದ ಮೇಲಿದ್ದ ನಗು ಹಾಗೇ ಕಮರಿ ಹೋಗಿ, ಪೆಚ್ಚಾದ.

'ಏನೋ ಅಷ್ಟೆಲ್ಲಾ ಸೂಕ್ಷ್ಮ ನನಗೆ ತಿಳಿಯುವುದಿಲ್ಲವೆಂದು ಮೊದಲೇ ನಾನು ಹೇಳಲಿಲ್ಲವೇ? ತಲೆ ತೆಗೆದುಕೊಳ್ಳುವುದು, ತಲೆ ಕೊಡುವುದು –ಇವೆರಡೇ ನಮಗೆ ಗೊತ್ತಿರುವ ವಿದ್ಯೆ. ಈ ಇಂದ್ರಜಾಲ ಮಹೇಂದ್ರ ಜಾಲವೆಲ್ಲಾ ನನಗೆ ಅರ್ಥವಾಗುವುದಿಲ್ಲ.'

—ಎಂದ ಒಣಗಿದ ಧ್ವನಿಯಲ್ಲಿ.

'ಕ್ಷಮಿಸಿ ಬೋಕಿಮಯ್ಯ, ನಿಮ್ಮ ಮನಸ್ಸು ನೋಯಿಸಬೇಕು ಎಂದು ನಾನು ಆ ಮಾತು ಆಡಲಿಲ್ಲ.'

'ಶಿವ ಶಿವಾ! ನಿಮ್ಮ ವಿಷಯದಲ್ಲಿ ನನಗೆ ಎಂದೂ ಅಂಥ ಭಾವನೆಯಿಲ್ಲ.'

'ನನ್ನ ವಿಷಯದಲ್ಲಿ ತಮಗೆ ಆ ನಂಬಿಗೆ ಇರುವುದು ನನ್ನ ಭಾಗ್ಯ. ನಾನು ಆ ಮಾತು ಹೇಳಿದುದಕ್ಕೆ ಕಾರಣವಿಷ್ಟೇ—ನಮ್ಮ ಜನರ, ಯಾವುದನ್ನೂ ಪ್ರಮಾಣಿಸಿ ನೋಡದೆ ನಗುವ ಬುದ್ಧಿಯಿಂದಾಗಿ, ಎಷ್ಟೋ ಸಂಶೋಧನೆಗಳು ಮಾನ್ಯತೆ ಸಿಗದೆ ಸತ್ತು ಹೋಗಿವೆ. ಆರ್ಷೇಯವಾಗಿ ಬಂದ ಎಷ್ಟೋ ವಿದ್ಯೆಗಳೂ ಕೈ ತಪ್ಪಿ ಹೋಗಿವೆ. ಆದುದರಿಂದ ಯಾರಾದರೂ ತಮ್ಮ ಪ್ರತಿಭೆಗೆ ಗೋಚರವಾದ ವಿಷಯವನ್ನು ಹೇಳಿದಾಗ ಅದನ್ನು ಕೇಳಿ ನಗದೆ, ಪ್ರಮಾಣಿಸಿ ನೋಡಿ ಬಳಿಕ ಅದು ಸುಳ್ಳೋ ನಿಜವೋ ಎಂದು ಹೇಳು ಎಂಬುದಾಗಿ ನನ್ನ ಗುರುಗಳು ಶುಭಚಂದ್ರ ಸಿದ್ಧಾಂತ ದೇವರು ಅಪ್ಪಣೆ ಕೊಡಿಸಿದ್ದರು—ಅವರು ನನಗೆ ಹೇಳಿದುದನ್ನು ನಾನು ನಿಮಗೆ ಹೇಳಿದೆ; ಅಷ್ಟೆ'

—ಎಂದರು ಗಂಗರಾಜರು.

'ಅದು ನ್ಯಾಯವೇ. ಅದಕ್ಕೇ ಅವರನ್ನು ನಿಮ್ಮ ಬಳಿಗೆ ಕರೆ

ತಂದದ್ದು.'

'ಸರಿಯೆ. ಅವರು ಮತ್ತೇನೋ ನಂಬಲಾಗದಂಥ ವಿಶೇಷವನ್ನು ಕಂಡುಹಿಡಿದಿದ್ದಾರೆಂದಿರಲ್ಲಾ-ಅದೇನು?'

'ಅದೇನೋ-ದೂರದಲ್ಲಿರುವುದೂ ಹತ್ತಿರ ಇರುವಂತೆ ಕಾಣುವ ವಸ್ತು. ನನಗೂ ಅದನ್ನು ಆತ ತೋರಿಸಿದ. ಆ ಕೊಳವೆಯ ಮೂಲಕ ನೋಡಿದಾಗ, ಭೈರವ ದೇವರ ಬೆಟ್ಟ ಅಂಗೈಯ ಮೇಲೆ ಇರುವಂತೆ, ಅಷ್ಟು ಹತ್ತಿರ ಕಾಣಿಸಿತು. ಅದೆಲ್ಲಿಯಾದರೂ ಸಾಧ್ಯವೇ? ಅದಕ್ಕೇ ಅದೇನೋ ಕಣ್ಣು ಕಟ್ಟು, ಮಾಟ ಇರಬೇಕು ಎಂದೇ ಅಂದುಕೊಂಡೆ.'

—ತಾತ್ಸಾರವಾಗಿ ಹೇಳಿದ ಬೋಕಿಮಯ್ಯ.

ಆತ ನಿರ್ಲಕ್ಷ್ಯವಾಗಿ ಹೇಳಿದ ಆ ಮಾತನ್ನುಕೇಳಿ ಗಂಗರಾಜರು ತಟಕ್ಕನೆ ಆಸಕ್ತಿ ಕೆರಳಿ, ಸೆಟೆದು ಕುಳಿತು ಕೇಳಿದರು—

'ಏನಂದಿರಿ? ಆತ ಕೊಟ್ಟ ಕೊಳವೆಯ ಮೂಲಕ ನೋಡಿದಾಗ, ದೂರದ ಭೈರವ ದೇವರ ಗುಡ್ಡ ಅಂಗೈಯ ಮೇಲಿರುವಂತೆ ಕಾಣಿಸಿತೆ? ಅದು ನಿಜವಾದರೆ ಅದು ಬಹು ಅಮೂಲ್ಯವಾದ ಸಂಶೋಧನೆ ಮೊದಲು ಆತನನ್ನು ಒಳಗೆ ಕರೆದು ತನ್ನಿ, ಅದೇನೋ ನೋಡಬೇಕು. ಅದು ಕಣ್ಣುಕಟ್ಟೋ ಇಂದ್ರಜಾಲವೋ-ಏನಾದರಾಗಲಿ. ದೂರದಲ್ಲಿದ್ದುದನ್ನು ಹತ್ತಿರ ಇರುವಂತೆ ಕಾಣುವುದು ಸಾಧ್ಯವಾದರೆ, ನಮ್ಮ ತೋಳಿಗೆ ಬ್ರಹ್ಮಾಸ್ತ್ರದ ಬಲ ಬರುತ್ತದೆ. ಆತನನ್ನು ಕರೆದು ತನ್ನಿ-ಬೋಕಿಮಯ್ಯ'

—ಎಂದು ಬೋಕಿಮಯ್ಯನನ್ನು ತಮ್ಮ ಉತ್ಸಾಹದ ಚಾವಟಿಯಿಂದ ಜಡಿದು, ಬಳ್ಳಿಗಾವೆಯ ಕುಶಲ ಕರ್ಮಿಯನ್ನು ಕರೆತರಲು ಅಟ್ಟಿದರು. ಹೊರಗೆ ಹೋದ ಬೋಕಿಮಯ್ಯ ಆತನನ್ನು ಒಳಗೆ ಕರೆತರುವವರೆಗೂ, ಕುಳಿತುಕೊಳ್ಳುವಷ್ಟು ತಾಳ್ಮೆಯೂ ಇರಲಿಲ್ಲ-ಸ್ವಾಭಾವಿಕವಾಗಿ ಸಂಯಮಿಗಳಾದ ಗಂಗರಾಜರಿಗೆ. ಕುಳಿತಲ್ಲಿಂದ ಎದ್ದು ಹೋಗಿ, ಅವರು ಬರುವುದನ್ನೇ ಕಾಯುತ್ತಾ ಬಾಗಿಲ ಬಳಿ ನಿಂತರು.

ಬಳ್ಳಿಗಾವೆಯ ನಿಪುಣ, ಬೀದಿಯನ್ನು ದಾಟಿ, ಮನೆಯ ಮುಂದಿನ ಅಂಗಳದ ಬಾಗಿಲನ್ನು ಪ್ರವೇಶಿಸುತ್ತಿದ್ದ ಹಾಗೇ ಹದ್ದಿನ ಕಣ್ಣಿನಿಂದ ಆತನನ್ನು ನೋಡಿದರು-ಗಂಗರಾಜರು.

ಆತನನ್ನು ನೋಡಿ, ಮುಗಿಲಿಗೆ ಏರಿದ್ದ ಅವರ ಉತ್ಸಾಹದ ಕಾವು ಆರಿ, ನೆಲಕ್ಕಿಳಿಯಿತು.

ಬೋಕಿಮಯ್ಯ ಹೇಳಿದುದನ್ನು ಕೇಳಿ, ಗಂಗರಾಜರು, ಆ ನಿಪುಣ ಹಾಗಿರಬೇಕು, ಹೀಗಿರಬೇಕು ಎಂದೇನೇನೋ ನೂರು ಊಹಿಸಿಕೊಂಡಿದ್ದರು. ಆದರೆ ಕಣ್ಣೆದುರಿಗೆ ಬಂದ ನಿಪುಣ ಆ ಊಹೆಗಳಿಗೆ ತದ್ವಿರುದ್ಧವಾಗಿದ್ದ.

ಆಳು ನೋಡವುದಕ್ಕೂ ಎದ್ದು ಕಾಣುವಂತಿರಲಿಲ್ಲ—ಮನುಷ್ಯ ಕುಳ್ಳ, ತಲೆಯ ಮೇಲೆ ಹೊರವಾಗಿ ಬೆಳೆದ ಕೂದಲು, ಎಣ್ಣೆ ನೀರು ಕಾಣದೆ ಜಟೆಗಟ್ಟಿ, ಮುಖದ ಮೇಲೆ ಬೆಳೆದು, ಎದೆಯ ಮೇಲೆ ಹಬ್ಬಿದ ನೆರೆತ ಗಡ್ಡದೊಂದಿಗೆ ಹರಡಿಕೊಂಡು, ಗಂಗರಾಜರು ಚಿಕ್ಕಂದಿನಲ್ಲಿ ಕಥೆಯಾಗಿ ಕೇಳಿದ ಜಡೆಮುನಿಯ ಹಾಗಿದ್ದ. ದಪ್ಪನಾಗಿ ಧೂಳು ತುಂಬಿದ ಆ ಕೂದಲಿನಲ್ಲಿ ಆತನ ಮುಖ ಕಾಣದಹಾಗೆ ಎಲ್ಲೋ ಅವಿತುಕೊಂಡಿತ್ತು. ಆತನ ಮೈಯೂ ಅಷ್ಟೆ—ಕೃಶವಾಗಿ, ದೊಡ್ಡಗಾಳಿಗೆ ಹಾರಿ ಹೋಗುವಷ್ಟು ಬಡಕಲಾಗಿತ್ತು. ಅದರ ಮೇಲೆ, ಮೊಣಕಾಲುವರೆಗೆ ಮುಚ್ಚುವ ಒಂದು ತುಂಡು ಪಂಚೆ, ಮೈ ಮುಚ್ಚುವ ಒಂದು ಹಚ್ಚಡ, ಅವು—ಅವುಗಳ ಬಣ್ಣ ಮೂಲತಃ ಎಂಥಾದಿತ್ತು ಎಂದು ಹೇಳುವುದಕ್ಕೆ ಆಗದಷ್ಟು ಹೊಲಸಾಗಿದ್ದವು.

'ಹೊಟ್ಟೆಗೆ ಬಡತನವಾದರೆ, ದೇವರು ಕೊಟ್ಟ ನೀರು, ಕಾಡಿನಲ್ಲಿ ಯಥೇಚ್ಛವಾಗಿ ದೊರಕುವ ಅಂಟುವಾಳದ ಕಾಯಿಗೂ ಬಡತನವೇ? ಶುದ್ಧ ಶ್ವಪಚ'—ಎಂದುಕೊಂಡರು ಗಂಗರಾಜರು ಆತನನ್ನು ನೋಡಿ.

ಮೊದಲ ನೋಟದಿಂದ ಆದ ಪರಿಣಾಮದಿಂದ, ಅವರಲ್ಲಿ ಬೋಕಿಮಯ್ಯನ ಮಾತುಕೇಳಿ ಮೂಡಿದ ಉತ್ಸಾಹ ಉಡುಗಿಹೋಗಿ, ಬೋಕಿಮಯ್ಯನ ಸಂದೇಹವೇ ನಿಜವೇನೋ ಎನಿಸಿತು.

ಹೊಟ್ಟೆಯ ಆತುರ ಕಳೆದುಕೊಳ್ಳಲು, ಕಷ್ಟಪಟ್ಟು ಕೆಲಸ ಮಾಡಲು ಇಚ್ಛೆಯಿಲ್ಲದೆ 'ನಾನು ಆ ವಿದ್ಯೆ ಬಲ್ಲೆ ಈ ವಿದ್ಯೆ ಬಲ್ಲೆ. ಬಂಡೆ ಬಂಗಾರ ಮಾಡುತ್ತೇನೆ. ನೀರಿನ ಮೇಲೆ ಕಲ್ಲು ತೇಲಿಸುತ್ತೇನೆ' ಎಂದುಕೊಂಡು, ಜನರ ಲೋಭ ಬುದ್ಧಿಯನ್ನು ಕೆರಳಿಸಿ, ಅವರ ನಂಬಿಕೆಯನ್ನು ದುರುಪಯೋಗ ಪಡಿಸಿಕೊಂಡು, ತಮ್ಮ ಹೊಟ್ಟೆ ಹೊರೆದುಕೊಳ್ಳುವ ಅಲ್ಪರು ಎಷ್ಟೋ ಜನರನ್ನು ಗಂಗರಾಜರೂ ಕಂಡಿದ್ದರು. 'ಇವನೂ ಅಂಥವನೇಯೇ?'

ಎನಿಸಿತು ಅವರಿಗೆ.

'ಮಾರಸಿಂಗಮಯ್ಯನವರು ಅಂಥವರನ್ನು ನಂಬಿ ದೊರೆಯ ಬಳಿ ಕಳಿಸುವಷ್ಟು ಮೂರ್ಖರಲ್ಲ' ಎಂಬ ವಿಶ್ವಾಸದಿಂದ, ಬೋಕಿಮಯ್ಯ ಒಳಗೆ ಕರೆದು ತಂದಾತನಿಗೆ ನಮಸ್ಕರಿಸಿ 'ಕುಳಿತುಕೊಳ್ಳಿ' ಎಂದು ಗೌರವವಾಗಿ ಹೇಳಿ, ಆತ ಕೂಡಲು ಆಸನ ತೋರಿಸಿದರು.

ಆದರೆ ಆತ ಅವರು ತೋರಿಸಿದ ಆಸನದಮೇಲೆ ಕುಳಿತುಕೊಳ್ಳಲಿಲ್ಲ.

'ನನ್ನ ಯೋಗ್ಯತೆ ನಂಬಿಕೆಯಾದಮೇಲೆ, ಆ ಮರ್ಯಾದೆಯನ್ನೆಲ್ಲಾ ಮಾಡಿ.'

ಎಂದು ಗಡುಸಾಗಿ ಹೇಳಿ, ನೆಲದಮೇಲೆಯೇ, ಕಂಭಕ್ಕೆ ಒರಗಿಕೊಂಡು, ತನ್ನನ್ನು ನೋಡುವ ಗಂಗರಾಜರ ಮುಖವನ್ನೇ ದಿಟ್ಟಿಸಿ ನೋಡುತ್ತಾ ಕುಳಿತುಕೊಂಡ.

ದೂರದಲ್ಲಿ ಕಾಣದಿದ್ದ ಆತನ ಮುಖ, ಹತ್ತಿರ ಬಂದು ಕುಳಿತಾಗ ಗಂಗರಾಜನಿಗೆ ಕಂಡಿತು. ನರೆತು ಧೂಳು ಕಟ್ಟಿ ಹೊಲಸಾದ ಕೂದಲು ತುಂಬಿದ ಆತನ ಮುಖದಲ್ಲಿ ಕಾಣುತ್ತಿದ್ದುದು ಆತನ ಕಣ್ಣು, ಮೂಗು ಎರಡೇ. ತೆಳುವಾದ, ದೀರ್ಘವಾದ ಆತನ ನಾಸಿಕ, ತುದಿಯಲ್ಲಿ ವ್ಯಾಘ್ರನಖದಂತೆ ಬಾಗಿತ್ತು. ಆತನ ಕಣ್ಣುಗಳಲ್ಲಿ, ನೀರಿನಲ್ಲಿ ಬಿಂಬಿಸಿದ ಪ್ರಖರಣದ ಬೆಳಕಿನಂತೆ ಏನೋ ಬೆಳಕು ಹೊಳೆಯುತ್ತಾ, ನೋಡುವವರಿಗೆ ಭಯವನ್ನೂ, ಹಾಗೇ 'ಆತ ಯಾರೋ ವಿಲಕ್ಷಣ ವ್ಯಕ್ತಿ' ಎಂಬ ಭಾವನೆಯನ್ನು ಮೂಡಿಸುವ ಕಾಂತಿ ತುಂಬಿತ್ತು. ಆತನನ್ನು ನೋಡಿದ ಗಂಗರಾಜರಲ್ಲೂ ಅದೇ ಭಯ–ಗೌರವ ಸಮಿಶ್ರವಾದ ಭಾವನೆ ಮೂಡಿತು.

ತಾನು ಬಂದ ಬಳಿಕ 'ನಮಸ್ಕಾರ, ಕುಳಿತುಕೊಳ್ಳಿ' ಎಂದಷ್ಟೇ ಹೇಳಿ, ತನ್ನನ್ನೇ ನೋಡುತ್ತಾ ಕುಳಿತ ಗಂಗರಾಜರನ್ನು ನೋಡಿ, ಆತ—

'ಬಂದ ದಾರಿಗೆ ಸುಂಕ ಉಂಟೋ ಇಲ್ಲವೋ ಹೇಳಿಬಿಡಿ. ನಿಮ್ಮ ವೇಳೆ ವ್ಯರ್ಥಮಾಡದೆ ಹೊರಟು ಹೋಗುತ್ತೇನೆ.'

—ಎಂದ ಬಹು ಒರಟಾಗಿ.

ಹೊಯ್ಸಳ ಸಾಮ್ರಾಜ್ಯದ ಮಹಾ ಪ್ರಧಾನರನ್ನು ಆತ ಅಷ್ಟು ಒರಟಾಗಿ ಮಾತನಾಡಿಸುವುದನ್ನು ಕಂಡು ಬೋಕಿಮಯ್ಯನಿಗೆ ಸಿಟ್ಟು ಬಂದಿತು.

ಆತನ ಮುಖಲಕ್ಷಣದಿಂದಲೇ ಅದನ್ನರಿತ ಗಂಗರಾಜರು, ಬೋಕಿಮಯ್ಯ ಮಾತಾಡದಂತೆ, ಕಣ್ಣ ಸನ್ನೆ ಮಾಡಿ—

'ಕ್ಷಮಿಸಬೇಕು. ನಮ್ಮ ವೇಳೆಯಷ್ಟೇ ತಮ್ಮದೂ ಅಮೂಲ್ಯ. ಮನೆಗೆ ಅತಿಥಿಗಳಾಗಿ ಬಂದ ತಮ್ಮ ಯೋಗಕ್ಷೇಮವನ್ನೂ ವಿಚಾರಿಸದೆ, ಮುಖವನ್ನೇ ನೋಡುತ್ತಾ ಕುಳಿತುದು ನಮ್ಮ ಅವಿನಯವಾಯಿತು. ಬೋಕಿಮಯ್ಯನವರು ತಮ್ಮ ಪ್ರತಿಭೆಯ ವಿಷಯ ಏನೇನೋ ಹೇಳಿದರು. ಆ ಮಾತು ಕೇಳಿಯಾದ ಆಶ್ಚರ್ಯದಲ್ಲಿ ಈ ಅನುಚಿತ ಕಾರ್ಯ ನಮ್ಮಿಂದ ಘಟಿಸಿತು. ಮತ್ತೊಮ್ಮೆ ಕೇಳಿಕೊಳ್ಳುತ್ತೇನೆ—ಕ್ಷಮಿಸಬೇಕು. ತಮ್ಮನ್ನು ನಾನು ಕೆಲವು ಪ್ರಶ್ನೆ ಕೇಳಬಹುದೇ ?'

—ಎಂದು ವಿನಯ ತುಂಬಿದ ಧ್ವನಿಯಲ್ಲಿ ಕೇಳಿದರು.

'ಅಗತ್ಯವಾಗಿ. ಕೇಳಿದ ಪ್ರಶ್ನೆಗಳಿಗೆಲ್ಲಾ ಉತ್ತರ ಹೇಳುವುದಕ್ಕೇ ಹುಟ್ಟಿದವನು ನಾನು.'

—ಕಹಿಯಾದ ಧ್ವನಿಯಲ್ಲಿ ಹೇಳಿದ ಆತ.

'ತಮ್ಮ ಹೆಸರೇನು ?'

—ಆತನ ಮಾತಿನ ಕಹಿ ಮನವರಿಕೆಯಾಗಿಯೂ, ಆಗದಂತೆ ಕೇಳಿದರು ಗಂಗರಾಜರು.

'ಗೌರಾಚಾರಿ. ಹುಟ್ಟಿ ಬೆಳೆದದ್ದು ಬನವಾಸಿ ಸೀಮೆಯ ಬಳ್ಳಿಗಾಮೆಯಲ್ಲಿ. ಮಣ್ಣಾಗುವುದಕ್ಕೆ ಸ್ಥಳವನ್ನು ಬ್ರಹ್ಮ ಎಲ್ಲಿ ಸೃಷ್ಟಿಸಿದಾನೆಯೋ ತಿಳಿಯದು. ವಯಸ್ಸು ನಲವತ್ತಾಯಿತು—ಹೂ—ನಾಲ್ಕು ಕತ್ತೆಗಳಿಗಾಗುವಷ್ಟು. ಆದರೆ ಬುದ್ಧಿ ಮಾತ್ರ ಬಂದಿಲ್ಲ. ಮನೆಮಠ ಹೆಂಡಿರು ಮಕ್ಕಳು—ಯಾರೂ ಇಲ್ಲ. ಇನ್ನೇನಾದರೂ ಪ್ರಶ್ನೆ ಕೇಳುವುದು ಇದೆಯೇ ?'

—ಎಂದು ಆತ ಒಂದೇ ಉಸಿರಿನಲ್ಲಿ, ಗಂಗರಾಜರು ಕೇಳಿದ ಪ್ರಶ್ನೆ, ಕೇಳಬಹುದಾದ ಪ್ರಶ್ನೆಗಳೆಲ್ಲಕ್ಕೂ ಉತ್ತರಕೊಟ್ಟು ಹೇಳಿದ.

ಆತನ ಉತ್ತರದ ರೀತಿಯಲ್ಲಿದ್ದ ಅವಿನಯದ ಧೋರಣೆಯನ್ನು ಕಂಡು ಬೋಕಿಮಯ್ಯನಿಗೆ ಸೈರಿಸುವುದಾಗದೆ—

'ನೀವು ಮಾತಾಡುತ್ತಿರುವುದು ಮಹಾಪ್ರಧಾನರ ಇದುರಿನಲ್ಲಿ, ನೆನಪಿರಲಿ !

—ಎಂದು ಎಚ್ಚರಿಸಿದ.

'ತಪ್ಪಾಯಿತು. ಅವರೂ ಮನುಷ್ಯರೇ ಎಂದು ತಿಳಿದಿದ್ದೆ'

—ಎಂದ ಗೌರಾಚಾರಿ, ಬೋಕಿಮಯ್ಯನ ಬೆದರಿಕೆಯ ನುಡಿಗೆ ತಲೆಬಾಗದೆ.

'ನೀವು ಸ್ವಲ್ಪ ಶಾಂತವಾಗಿರಿ ಬೋಕಿಮಯ್ಯ. ನನ್ನಂಥ ಮೂರ್ಖರ ಸಾವಿರ ಪ್ರಶ್ನೆಗಳಿಗೆ ಉತ್ತರ ಕೊಟ್ಟು ಕೊಟ್ಟು ಆಚಾರ್ಯರಿಗೆ ಬೇಸರವಾಗಿರಬೇಕು. ಅವರು ಹೇಳಿದುದೂ ಸರಿಯೆ. ಅವರ ಊರು, ಕುಲ, ಗೋತ್ರಗಳೂ ಇಂದಿನ ಸಂದರ್ಭದಲ್ಲಿ ಅಮುಖ್ಯ . . . . .'

'ಅಷ್ಟೇ ಅಲ್ಲ . . . . .'

—ಗಂಗರಾಜರು ತಮ್ಮ ಮಾತು ಮುಗಿಸುವುದಕ್ಕೂ ಅವಕಾಶ ಕೊಡದೆ, ಗೌರಾಚಾರಿ ಹೇಳಿದ—

'ಅಷ್ಟೇ ಅಲ್ಲ. ಈ 'ಗಿಲಿ ಗಿಲಿ ಕಂಬದಾಟ' ಎಲ್ಲಿ ಮುಗಿಯುತ್ತದೆ ಎಂದೂ ಅಪ್ಪಣೆ ಕೊಡಿಸಿ.'

'ಅಂದರೆ . . . . .'

—ಗೌರಾಚಾರಿಯ ಮಾತು ಅರ್ಥವಾಗದೆ ಕೇಳಿದರು ಗಂಗರಾಜರು.

'ಮಾರಸಿಂಗಮಯ್ಯನವರು ನನ್ನನ್ನು ದೊರೆಗಳ ಬಳಿಗಟ್ಟಿದರು. ಅವರು ನನ್ನನ್ನು ನಿಮ್ಮ ಬಳಿ ಕಳುಹಿಸಿದರು. ನೀವೂ ನನ್ನ ಮುಖ ನೋಡಿದ್ದಾಯಿತು; ಹೆಸರು ದೆಸೆ ವಿಚಾರಿಸಿದ್ದೂ ಆಯಿತು. ಮುಂದೆ ತಾವೆಲ್ಲಿಗೆ, ಯಾರ ಹತ್ತಿರ ಕಳುಸುತ್ತೀರೊ—ಅದೂ ಹೇಳಿಬಿಡಿ. ಈ ಕಂಭದ ಸಾಲಿಗೆ ಕೊನೆಯಾವುದು ಎಂದು ಹೇಳಿದರೆ, ಅಲ್ಲಿಗೆ ಹೋಗಿ ಸುತ್ತು ಹಾಕಿ ನಿಲ್ಲುತ್ತೇನೆ.'

ಆತನ ಆ ಮಾತಿನಿಂದಲೇ ಆತನಿಗೆ ಪ್ರಭುಗಳ ಭೇಟಿಯಾಗಿಲ್ಲವೆಂಬುದನ್ನು ಅರ್ಥ ಮಾಡಿಕೊಂಡ ಗಂಗರಾಜರು, ಆತನ ಒರಟು ಮಾತಿನ ಹಿಂದಿನ ಅಸಮಾಧಾನಕ್ಕೂ ಕಾರಣವನ್ನು ಅರಿತುಕೊಂಡು—

'ಪ್ರಭುಗಳು ಈಗ ಯಾವುದೋ ವಿಶೇಷ ಕಾರ್ಯದ ಗಡಿಬಿಡಿಯಲ್ಲಿದ್ದಾರೆ. ಅವರೇ ನಿಮ್ಮನ್ನು ಕಾಣಲಿಲ್ಲ ಎಂದು ಅಸಮಾಧಾನ ಪಟ್ಟುಕೊಳ್ಳಬಾರದು . . . . .'

'ಆ ವಿಶೇಷ ಕಾರ್ಯವೇನೆಂಬುದನ್ನು ನಾನು ಬಲ್ಲೆ. ಅದನ್ನು ಹೇಳಿ,

ಆದಕ್ಕಾಗಿಯೇ ಮಾರಸಿಂಗಮಯ್ಯನವರು ನನ್ನನ್ನು ಕಳುಹಿಸಿದರು. ಹೋಗಲಿ —ನಿಮಗಾದರೂ ವ್ಯವಧಾನವಿದೆಯೋ ಇಲ್ಲವೋ?'

'ವ್ಯವಧಾನವಿಲ್ಲದೆ ಏನು—ನನ್ನ ಹೊತ್ತು ತಪ್ಪುದು. ತಾವು ಕಂಡು ಹಿಡಿದಿರುವ ಅದ್ಭುತ ವಿಶೇಷವನ್ನು, ನನ್ನ ಮಂದಬುದ್ಧಿಗೆ ಅರಿವಾಗುವಂತೆ ವಿವರಿಸಬೇಕು.'

—ಎಂದು ಬೇಡಿದರು ಗಂಗರಾಜರು.

ಗಂಗರಾಜರ ಆ ಮಾತನ್ನು ಕೇಳಿ, ಆ ಮಾತಿನಲ್ಲಿ ಕುಹಕದ ಕಸಿವಿಲ್ಲ ವೆಂಬುದು ಮನವರಿಕೆಯಾಗಿ, ಗೌರಾಚಾರಿಯ ಕಣ್ಣುಗಳಲ್ಲಿ ಅದುವರೆಗೂ ಹೊಳೆಯುತ್ತಿದ್ದ ಕಠೋರತೆ ಕರಗಿ ಮೃದುವಾಯಿತು.

'ನಾನೇ ಸರ್ವಜ್ಞ ಎಂದುಕೊಳ್ಳದವರು ಒಬ್ಬರನ್ನಾದರೂ ಕಂಡದ್ದು ನನ್ನ ಪುಣ್ಯ.'

—ಎಂದು ಹೇಳಿ, ಗೌರಾಚಾರಿ, ಅದುವರೆಗೂ ಹೊರಗೆ ತೆಗೆಯದೆ, ಎದೆಯಮೇಲಿನ ಹಚ್ಚಡದ ಮರೆಯಲ್ಲಿ ಇಟ್ಟುಕೊಂಡಿದ್ದ ಒಂದು ಬಟ್ಟೆಯ ಗಂಟನ್ನು ಹೊರತೆಗೆದ.

ಗಂಗರಾಜರು, ಬೋಕಿಮಯ್ಯ ಇಬ್ಬರೂ ಆ ಬಟ್ಟೆಯ ಗಂಟನ್ನು, ಅದರೊಳಗೆ ಏನು ಪವಾಡ ಅಡಗಿದೆಯೋ ಎಂಬಂತೆ ಕುತೂಹಲದಿಂದ ನೋಡಿದರು.

ಗೌರಾಚಾರಿ, ಆ ಬಟ್ಟೆಯ ಗಂಟನ್ನು ನಿಧಾನವಾಗಿ ಹೂವನ್ನು ಬಿಡಿ ಸುವವನಂತೆ ಮೃದುವಾಗಿ ಬಿಚ್ಚಿ, ಅದರೊಳಗೆ ಇದ್ದುದನ್ನು ಹೊರ ತೆಗೆದು ಗಂಗರಾಜರ ಮುಂದೆ ಇರಿಸಿದ.

ಆತ ಹೊರತೆಗೆದು ಇರಿಸಿದುದು ಒಂದು ಲೋಹ ನಿರ್ಮಿತವಾದ ರಥದ ಮಾದರಿ. ಅಂಗೈಯ ಮೇಲೆ ನಿಲ್ಲಿಸಿಕೊಳ್ಳುವಷ್ಟು ಪುಟ್ಟದಾದ ಆ ರಥದ ನಾನಾ ಭಾಗಗಳೂ, ಕುದುರೆಗಳೂ, ಆ ಪ್ರಮಾಣಕ್ಕೆ ಅನುಗುಣವಾಗಿಯೇ ನಿರ್ಮಿತವಾಗಿದ್ದವು. ಆದರೆ ಆ ರಥಕ್ಕೆ ಸಾಮಾನ್ಯ ರಥಗಳಿಗಿರುವಂತೆ ಎರಡು ಗಾಲಿ ಇರದೆ, ನಾಲ್ಕು ಗಾಲಿಗಳು ಇದ್ದು, ಹಿಂಭಾಗದ ಎರಡು ಮುಂಭಾಗದ ಕ್ಕಿಂತ ಕಿರಿಯದಾಗಿದ್ದವು. ಆ ರಥದಲ್ಲಿದ್ದ ವಿಶೇಷವೆಲ್ಲಾ ಆ ಚಕ್ರಗಳಲ್ಲಿ ಮತ್ತು ಆ ಚಕ್ರಗಳನ್ನು ಸೇರಿಸಿದ ಸರಪಳಿಗಳಲ್ಲಿತ್ತು.

ಆ ಚಕ್ರಗಳು ವಾಡಿಕೆಯ ಚಕ್ರದಂತೆ ವೃತ್ತಾಕಾರವಾಗಿರದೆ, ಆ ವೃತ್ತವನ್ನು ಮಧ್ಯೆ ಮಧ್ಯೆ ಸಮಪ್ರಮಾಣವಾಗಿ, ಹಲ್ಲುಗಳಾಗಿ ಕೊರೆದು, ಆ ಹಲ್ಲುಗಳ ಮೇಲೆ, ಅದನ್ನು ಹಿಡಿದುಕೊಂಡು, ಚಕ್ರಸುತ್ತಿದಂತೆಯೇ ಸುತ್ತಾದ, ತಳಭಾಗಕ್ಕೆ ನಯವಾದ ಲೋಹದ ಸರಪಳಿಯನ್ನು ಹಾಕಿತ್ತು.

ಆ ಭಾಗಗಳನ್ನು ಬಿಡಿಸಿ, ಗಂಗರಾಜರಿಗೆ ತೋರಿಸಿ ಗೌರಾಚಾರಿ ಹೇಳಿದ:

'ನೋಡಿ—ಸ್ವಾಮಿ ನಾನು ಕಂಡುಹಿಡಿದಿರುವ ಪವಾಡವೆಲ್ಲಾ ಇಷ್ಟೆ. ಜನ ಆಡಿಕೊಳ್ಳುವಂತೆ ನಾನು ಮನವಿಕಳನೂ ಅಲ್ಲ, ಮಾಂತ್ರಿಕನೂ ಅಲ್ಲ. ಇದನ್ನು ಹೀಗೆ ನಿರ್ಮಿಸುವ ಯೋಚನೆ ನನಗೆ ಬಂದ ಸಂದರ್ಭ ಹೀಗೆ—

'ಬಳ್ಳಿಗಾಮೆ ನನ್ನ ಹುಟ್ಟೂರು ಎಂದು ನಾನು ಹೇಳಲಿಲ್ಲವೇ? ಅದು ನನ್ನ ಹುಟ್ಟೂರು ಅಷ್ಟೇ ಅಲ್ಲ—ನನ್ನನ್ನು ಹಾಳುಮಾಡಿದ ಊರೂ ಅದೇ. ಆ ಊರಿನಲ್ಲಿ ನನಗಿರುವ ಆಪ್ತರು ಎಂದರೆ-ಹೆಗ್ಗಡೆ ಮಾರಸಿಂಗಮಯ್ಯನವರು ಒಬ್ಬರೇ. ಅವರು ನನ್ನಲ್ಲಿ ವಿಶ್ವಾಸವಾಗಿರುವುದರಿಂದ, ಎರಡು ಹೊತ್ತಿನ ಅನ್ನ ಕಂಡು, ಈ ಘಟ ಜೀವಂತವಾಗಿ ಉಳಿದಿದೆ. ಇಲ್ಲವಾದಲ್ಲಿ ಎಂದೋ ಉಪವಾಸ ಸಾಯಬೇಕಾಗಿತ್ತು.

'ನನಗೆ ಚಿಕ್ಕವನಾಗಿದ್ದಾಗಲಿಂದಲೂ ಒಂದು ಕೆಟ್ಟಬುದ್ಧಿ-ಯಾವುದನ್ನು ನೋಡಿದರೂ ಅದು ಹೀಗೇಕೆ? ಅದನ್ನು ಹೀಗೆ ಬದಲಾಯಿಸಿದರೆ ಏನಾಗುತ್ತದೆ ಎಂದು ಹುಡುಕಿ ನೋಡುವುದು. ಆ ಬುದ್ಧಿಗೆ ಬಿದ್ದೇ ತಲೆತಲಾಂತರದಿಂದ ನಮ್ಮ ಮನೆತನಕ್ಕೆ ಬಂದ ಚಿನ್ನದ ಕೆಲಸ ಮಾಡುವುದನ್ನು ಬಿಟ್ಟು ಈ ಕಬ್ಬಿಣದ ಕೆಲಸಕ್ಕೆ ಬಿದ್ದು, ಹೊಟ್ಟೆಗೆ ಹಿಟ್ಟಿಲ್ಲದಹಾಗೆ ಮಾಡಿಕೊಂಡೆ.

'ನಮ್ಮ ಅಯ್ಯ ಇದ್ದಷ್ಟು ದಿನವೂ ಗಿಳಿಗೆ ಹೇಳಿದ ಹಾಗೆ ಹೇಳಿದ 'ಚಿನ್ನ ಮುಟ್ಟಿದ ಕೈ ಕಬ್ಬಿಣ ಮುಟ್ಟಬಾರದೋ. ಅದು ನಮಗೆ ಬಂದದ್ದಲ್ಲ-ಕಮ್ಮಾರನ ಕೆಲಸ. ಈ ಅಡ್ಡದಾರಿ ಹಿಡಿಯುವ ಬುದ್ಧಿ ಬೇಡ' ಅಂತ. ನಾನು ಆತನ ಮಾತು ಕೇಳಲಿಲ್ಲ. ಏನೋ ಮಾಡುವುದಕ್ಕೆ ಹೋಗಿ, ಹಿಡಿ ಕಬ್ಬಿಣ ಕೆಟ್ಟರೆ, ಹೋಗಲಿ ಅಂತ ಬೆಂಕಿಯಲ್ಲಿ ಎಸೆಯಬಹುದು. ನಮ್ಮಂಥ ಬಡವರು ಚಿನ್ನ ಹಾಗೆ ಕೆಡಿಸೋಕೆ ಆದೀತಾ. 'ನನಗೆ ಇದೇ ಇರಲಿ' ಅಂತ ಅಂದೆ. ಅದೇನೋ ಹೆಗ್ಗಡೆಯವರಿಗೆ ನನ್ನನ್ನು ಕಂಡರೆ

ತುಂಬಾ ವಿಶ್ವಾಸ. 'ದೇವರು ನಿನಗೆ ಏನು ಕೆಲಸ ಮಾಡುವ ಬುದ್ಧಿಕೊಟ್ಟರೆ ಅದು ಮಾಡು. ನಿನ್ನ ಹೊಟ್ಟೆಗೆ ಅರಕೆಯಾದರೆ ನನಗೆ ಹೇಳು' ಅಂತ ಹೇಳಿ, ನನ್ನ ಕೈ ಹಿಡಿದು ಕಾಪಾಡಿದರು. ಅಷ್ಟೇ ಅಲ್ಲ-ನಾನು ಬೇಗ ಹದವಾಗದ ಕಬ್ಬಿಣ ಕುಟ್ಟಿ ಮೈ ನೋವುಮಾಡಿಕೊಳ್ಳುವುದನ್ನು ನೋಡ ಲಾಗದೆ-'ಗೌರಾಚಾರಿ, ನೀನು ಹೀಗೇ ಕಬ್ಬಿಣ ಕುಟ್ಟಿ ಕುಟ್ಟಿ ಸತ್ತು ಹೋಗ್ತೀಯಾ? ಅದರ ಬದಲು ಅಷ್ಟು ಹೊನ್ನು ಕೊಡ್ತೀನಿ. ಅದರಲ್ಲಿ ಸಣ್ಣ ದಾಗಿ ನಿನಗೇನುಬೇಕೋ ಮಾಡಿಕೊ. ಅದು ಸರಿಹೋದರೆ ಆಮೇಲೆ ಕಬ್ಬಿಣ ದಲ್ಲೆ ಮಾಡಿಕೊಳ್ಳಬಹುದು. ಶ್ರಮ ಕಡಿಮೆಯಾಗುತ್ತೆ' ಅಂತ ಹೇಳಿ, ಇಪ್ಪತ್ತುಗದ್ಯಾಣ ತೂಕದ ಹೊನ್ನು ಕೊಟ್ಟಿದ್ದರು. ಅಂಥ ಧಣಿ ಅವರು.

'ಒಂದು ದಿನ, ಹೆಗ್ಗಡೆಯವರನ್ನು ನೋಡಬೇಕು ಎಂದು ಅವರ ಬಿಡಾರಕ್ಕೆ ಹೋದಾಗ, ಅಯ್ಯನವರು ಮೇಲಕ್ಕೆ ಏಳಲಾಗದ ಹಾಗೆ ಮಲಗಿ ಬಿಟ್ಟಿದ್ದರು. 'ಮೈಯಲ್ಲಿ ಏನು ಜಡ್ಡು? ಜ್ವರಾನಾ? ಮದ್ದು ತರಲೇ?' ಅಂತ ಕೇಳಿದೆ. ಅದಕ್ಕೆ ಅಯ್ಯನವರು ಉತ್ತರ ಕೊಡುವುದಕ್ಕೂ ಆಗದೆ ನರಳಿದರು. ಅವರು ನರಳಿದ್ದನ್ನು ನೋಡಿ, ನನಗೆ ಕರುಳಿಗೆ ಸೂಜಿ ಚುಚ್ಚಿದ ಹಾಗಾಗಿ ಕಣ್ಣಿನಲ್ಲಿ ನೀರು ಬಂತು. ಅಯ್ಯನವರ ಪಕ್ಕದಲ್ಲೇ ಕೂತು, ಅವರಿಗೆ ಉಪ್ಪು ಬಿಸಿನೀರಿನ ಕಾವು ಕೊಡುತ್ತಿದ್ದ ಮಾಚಿಕಬ್ಬೆಯವರನ್ನು- 'ಅವ್ವಾ, ಅಯ್ಯನೋರು ಯಾಕೆ ಹೀಗೆ ನರಳ್ತಾರೆ?' ಅಂತ ಕೇಳಿದೆ. ಅದಕ್ಕೆ ಆ ಅವ್ವ, ಕಣ್ಣುತುಂಬ ನೀರಿಟ್ಟುಕೊಂಡು-'ನಾನೇನು ಹೇಳ್ಲಿ ಆಚಾರಿ. ಈ ಲೋಕದಲ್ಲಿ ಎಂತೆಂಥ ಪುಣ್ಯಾತ್ಮರೋ ಆಗಿಹೋದರು. ಆದರೆ ಈ ಹಾಳು ರಥದ ಕುಲುಕಾಟ ತಪ್ಪಿಸೋ ಅಂಥ ಪುಣ್ಯಾತ್ಮ ಹುಟ್ಟಲಿಲ್ಲ. ಕಲ್ಲುದಾರೀಲಿ, ಒಂದು ಹರಿದಾರಿ ದೂರ ರಥದಲ್ಲಿ ಹೋಗಿ ಬಂದರೆ ಸಾಕು- ತಂದೆ ತಾಯಿ ಇಟ್ಟ ಬಜೆ ಬೆಣ್ಣೆ ಎಲ್ಲಾ ಕರಗಿಹೋಗಿ, ಮೈ ಎಲುಬು ಪುಡಿ ಪುಡಿಯಾಗುತ್ತೆ. ಎಷ್ಟು ಮಜ್ಜನ ಮಾಡಿದರೂ ಇಲ್ಲ, ನಾರಾಯಣ ತೈಲ ದಲ್ಲಿ ಮೈ ಮುಳುಗಿಸಿದರೂ ಇಲ್ಲ-ಒಂದು ಸಲ ಪ್ರಯಾಣ ಮಾಡಿದ ಮೈ ಕೈ ನೋವು ಹೋಗಬೇಕೆಂದರೆ, ಮೂರು ಮಾಸ ಬೇಕು. ಒಂದು ಸಲ ಹೋದವರಿಗೆ ಇನ್ನು ಸಾಕಪ್ಪಾ ಈ ರಥ ಪ್ರಯಾಣ ಅನ್ನಿಸುತ್ತೆ. ಹಾಗಿರೋ ವಾಗ ಇನ್ನು 'ಅಲ್ಲಿ ಆ ಯುದ್ಧ, ಇಲ್ಲಿ ಈ ತುರುಗಾಳಗ' ಅಂತ ಹಗಲಿರುಳೂ

ರಥದಲ್ಲಿ ಕೂತು ಊರೂರು ಸುತ್ತೋರ ಪಾಡೇನು ಹೇಳ್ತೀಯ? ನೀನು ಅದೂ ಇದೂ ಅಂತ ನೂರೆಂಟು ಏನೇನೊ ಕೆಲಸಕ್ಕೆ ಬಾರದ್ದು ಮಾಡ್ತೀಯ. ಅಂಥ ಸಾವಿರದ ಬದಲು ಇಂಥದು ಒಂದೇನಾದರೂ ಕಂಡುಹಿಡೀಬಾರದೆ. ಕೋಟಿ ಜನ ತಾಯಂದಿರು, ನನ್ನಂಥ ಹೆಂಗಸರು ಹರಸ್ತಾರೆ'–ಅಂದರು.

'ಅಪ್ಪೆಯವರು ಹೇಳಿದ ಮಾತನ್ನು ಕೇಳಿ, ಅಯ್ಯನವರು ನರಳುತ್ತಲೇ ನಕ್ಕು–'ಒಳ್ಳೇ ಮಾತು ಹೇಳಿದೆ ಮಾಚಿ. ರಥದ ಗಾಲಿ ಮುರದ್ದಾಗಿರೊವರೆಗೂ, ಮಾರ್ಗದಲ್ಲಿ ಕಲ್ಲು, ತಗ್ಗು, ದಿಣ್ಣೆ ಇರೋವರೆಗೂ, ಯುದ್ಧ ಕರ್ಮವನ್ನು ಗಂಟುಹಾಕಿಕೊಂಡ ನಮ್ಮಂಥವರಿಗೆ ಮೈ ನೋವು ತಪ್ಪಿದ್ದಲ್ಲ. ಅದಕ್ಕೆ ಗೌರಾಚಾರಿ ಏನು ಮಾಡಬೇಕು? ಯುದ್ಧಕ್ಕೆ ರಥದಲ್ಲಿ ಕುಳಿತುಕೊಂಡು ಹೋಗಲಾರದ ಈ ಗೋಳಿಗಾಗಿಯೇ ವಿಷ್ಣು ಗರುಡನನ್ನು, ಶಿವ ನಂದಿಯನ್ನು ವಾಹನಮಾಡಿಕೊಂಡನೆಂದು ಕಾಣುತ್ತೆ! ದೇವತೆಗಳ ಪಾಡೇ ಹಾಗಾದ ಮೇಲೆ ಇನ್ನು ನಮ್ಮಂಥ ನರಮನುಷ್ಯರ ಪಾಡೇನು. ಮಯ, ವಿಶ್ವಕರ್ಮರೇ ಮಾಡಲಾಗದ್ದನ್ನು ನಮ್ಮ ಗೌರಾಚಾರಿ ಮಾಡುವುದು ಸಾಧ್ಯವೇ?' ಎಂದರು. ಮಾತನಾಡಿದರೂ ಅಯ್ಯನವರಿಗೆ ಮೈ ಎತ್ತಿ ಕುಕ್ಕಿದ ಹಾಗಾಗುತ್ತಿತ್ತೇನೋ. ಮಾತನಾಡುತ್ತಾ ನರಳಿದರು.

'ಅಯ್ಯನೋರು ಹೇಳಿದ್ದು ಕೇಳಿ ನನಗೇಕೊ ಕರುಳು ಕಿವಿಚಿದ ಹಾಗಾಯಿತು. 'ಉಂಟೇ ಬುದ್ಧಿ. ರಥ ಬರೋದಾರೀಲಿ ಇರಬಾರದು ಅನ್ನೋ ಬುದ್ಧಿ ತಗ್ಗು ದಿಣ್ಣೆಗಿಲ್ಲ. ಅದರ ಮೇಲೆ ಓಡಬಾರದು ಅನ್ನೋ ಬುದ್ಧಿ ಮರದ ಗಾಲಿಗೆ, ಅದನ್ನು ಎಳೆಯೋ ಪಶುವಿಗಿಲ್ಲ ಅಂತ ನಾವೂ ಬಾಯಿ ಮುಚ್ಚಿಕೊಂಡು ಅನುಭವಿಸೋದಕ್ಕೇನಾ ದೇವರು ನಮಗೆ ಬುದ್ಧಿ ಕೊಟ್ಟಿರೋದು? ಹೆಂಗಂದ್ರೆ ಆಗದು. ಎಲ್ಲಾ ವ್ಯಾಧೀಗೂ ಮದ್ದು ಮಾಡಿದ ಹಾಗೆ, ಇದಕ್ಕೂ ಏನಾರ ಒಂದು ಮದ್ದು ಹುಡುಕಲೇ ಬೇಕು' ಎಂದೆ ನಾನು. ಆದಕ್ಕೆ ಅಯ್ಯನೋರು 'ನರವೈದ್ಯ, ಅಶ್ವವೈದ್ಯ, ಗಜವೈದ್ಯವೆಲ್ಲಾ ಆಯಿತು. ಇನ್ನು ಉಳಿದದ್ದು–ಈ ರಥವೈದ್ಯವೊಂದು. ಅದೇನು ಮಾಡುತ್ತೀಯೊ ಮಾಡು. ನೀನು ಕೇಳಿದ್ದು ಕೊಟ್ಟೇನು' ಎಂದರು. 'ಆಗ್ಲಿ ಬುದ್ಧಿ. ಅಂಥಾದ್ದೇನಾದರೂ ಕಂಡುಹಿಡಿಯದೆ ಹೋದರೆ ಮತ್ತೆ ನಿಮಗೆ ಸೋಲುಮೊಕ ತೋರಲಿಕ್ಕಿಲ್ಲ' ಎಂದು ಶಪಥ ಮಾಡಿಕೊಂಡು ಬಂದೆ.

'ಆ ಹೊತ್ತಿನಿಂದ ನನ್ನ ಬುದ್ಧಿಗೆ ಇದೇ ಹುಚ್ಚಾಗಿ ಹೋಯಿತು. ಈ ಜೀವಕ್ಕೆ ಊಟ, ತಿಂಡಿ, ನಿದ್ದೆ, ನೀರಡಿಕೆ ಯಾವುದೂ ಬೇಕಾಗಲಿಲ್ಲ. ಅವತ್ತಿನವರಿಗೆ ನಾನು ರಥವನ್ನೇ ಸರಿಯಾಗಿ ನೋಡಿರಲಿಲ್ಲ. ಎಲ್ಲೋ ಒಂದೆರಡು ಸಲ ರಥದಲ್ಲಿ ಕುಳಿತದ್ದೇ ವಿನಾ, ಅದರ ವಿಚಾರ ಏನೂ ನನಗೆ ತಿಳಿದಿರಲಿಲ್ಲ. ಹಂಗಾಗಿ, ನನ್ನ ವಿಷಯ ನೀರೇ ನೋಡದೋನು ಈಜು ಕಲಿಯುವುದಕ್ಕೆ ಹೋದ ಹಾಗಿತ್ತು. ಹಟ ಅಂತೂ ತೊಟ್ಟಿದ್ದಾಗಿತ್ತು. ಇನ್ನೇನು ಮಾಡೋದು–ಓನಾಮದಿಂದ ಆ ವಿದ್ಯೆ ಕಲಿಯೋಕೆ ಆರಂಭಿಸಿದೆ. ರಥ ಕೆಲಸಮಾಡೊ ಬಡಗಿಗಳು, ಕಮ್ಮಾರರ ಹತ್ತಿರ ಹೋಗಿ, ಅವರು ರಥಕ್ಕೆ ಗಾಲಿ ಹೇಗೆ ಜೋಡಿಸುತ್ತಾರೆ. ಅದು ತಿರುಗುವಂತೆ ಕೀಲು ಹೇಗೆ ಕೂಡಿಸುತ್ತಾರೆ ಎನ್ನುವುದನ್ನೆಲ್ಲಾ ನೋಡಿಕೊಂಡೆ. ಅವರು ರಥ ಮಾಡು ವಾಗ ಅಲ್ಲೇ ಕುಳಿತು ನೋಡುತ್ತಾ ಇದ್ದೆ. ನಾನು ಹಾಗೆ ಮಾಡುವುದು ಅವರಿಗೆಲ್ಲಾ ಹಾಸ್ಯಕ್ಕೆ ಕಾರಣವಾಯಿತು. 'ಏನು ಆಚಾರಿ, ಚಿನ್ನದ ಕೆಲಸ ಬಿಟ್ಟು, ರಥದ ಕೆಲಸ ಕಲಿಯೋಕೆ ಬಂದೆಯಾ?' ಎಂದು ಕೇಳಿ ನಗುತ್ತಿದ್ದರು. ನಾನು ಅವರಿಗೆ ರಥದ ಕೆಲಸ ತಿಳಿದುಕೊಳ್ಳುತ್ತಿರುವುದಕ್ಕೆ ಕಾರಣ ಹೇಳಿದಾಗ, ನನ್ನ ಮಾತು ಕೇಳಿ ಬಿದ್ದು ಬಿದ್ದು ನಕ್ಕರು ಒಬ್ಬೊ ಬ್ಬರು ಒಂದೊಂದು ರೀತಿ ಮಾತನಾಡಿದರು. ಒಬ್ಬರು 'ಆಚಾರಿ, ನಿಮ್ಮ ಹೆಗ್ಗಡೆಯವರಿಗೆ ಹೇಳಿ, ಅದು ಬಹಳ ವೆಚ್ಚದ ಕೆಲಸ. ಆಗೋದಿಲ್ಲ ಹೋಗೋದಿಲ್ಲ. ಅದು ಬೇಡ. ತಗ್ಗು ದಿಣ್ಣೆ ಇರದ ಹಾಗೆ ಮೆತ್ತಗಿರುವ ಬೂರುಗದ ಹತ್ತಿ ಹರಡಿಸಿಬಿಟ್ಟರೂ ಸಾಕು—ನಿಮ್ಮ ಹೆಗ್ಗಡೆಯವರಿಗೆ ಏನೂ ಆಯಾಸವಿಲ್ಲ. ಬೂರುಗದ ಹತ್ತಿಗೇನು ಬರ–ಕಾಡು ಶೋಧಿಸಿದರೆ ಬೇಕಾ ದಷ್ಟು ಸಿಗುತ್ತದೆ' ಎಂದರು. ಹೀಗೇ ಒಬ್ಬೊಬ್ಬರೂ, ನನ್ನ ಪ್ರಯತ್ನವನ್ನು ಆಡಿಕೊಂಡು ನಕ್ಕರೇ ವಿನಾ ಹೀಗಲ್ಲ ಹೀಗೆ ಮಾಡಬಹುದು ಎಂದು ಹೇಳುವ ಪುಣ್ಯಾತ್ಮರೊಬ್ಬರೂ ಕಾಣಲಿಲ್ಲ.

'ಒಬ್ಬೊಬ್ಬರೇನೋ 'ರಥದ ಭಾರ ಹೆಚ್ಚಾಗಿದ್ದರೆ ಕುಲುಕಾಟ ಅಷ್ಟು ಕಾಣುವುದಿಲ್ಲ' ಎಂದು ಹೇಳಿದರೂ ಆ ಅನುಭವದ ಮಾತಿನಿಂದ ನನಗೇನೂ ಉಪಯೋಗ ಕಾಣಲಿಲ್ಲ. ಸಾಮಾನು ಹೊರುವ ಬಂಡಿಯಾದರೆ ಭಾರವಾಗಿ ರುತ್ತೆ. ಜನ, ಒಬ್ಬೊಬ್ಬರೇ ಕುಳಿತು ಹೋಗುವ ರಥ ಭಾರವಾಗುವುದು

ಹೇಗೆ ಸಾಧ್ಯ? ಭಾರವಾಗಿರಬೇಕು ಎಂದು ಕಬ್ಬಿಣದಲ್ಲಿ ರಥ ಮಾಡಿದರೆ, ಅದನ್ನು ಎಳೆಯುವ ಕುದುರೆಗಳನ್ನು ಎಲ್ಲಿಂದ ತರುವುದು? ಇದೆಲ್ಲಾ ಯೋಚನೆಮಾಡಿ, ಆ ಮಾತನ್ನು ಕೈಬಿಟ್ಟೆ.

'ಆದರೂ ಆ ಯೋಚನೆ ನನಗೆ ತಪ್ಪಲಿಲ್ಲ. ತಾಮ್ರದಲ್ಲಿ ನಿಜವಾದ ರಥದಂತೆಯೇ ಅಚ್ಚು ಕೀಲುಗಳುಳ್ಳ ಒಂದು ರಥವನ್ನು ಮಾಡಿಕೊಂಡು ಮನೆಯ ಅಂಗಳದಲ್ಲೇ ಅದನ್ನು ಎಳೆಯುತ್ತಾ, ಏರಿಳಿವಿನ ಮೇಲೆ ಓಟದ ಪರಿಣಾಮ, ಅದರ ಒಂದೊಂದು ಭಾಗದ ಮೇಲೂ ಹೇಗಾಗುವುದೆಂದು ಲೆಕ್ಕ ಹಾಕತೊಡಗಿದೆ. ನನ್ನ ಯೋಚನೆಯಲ್ಲಿ ನನಗೆ ಯಾರೂ, ಯಾವ ವಿಧದಲ್ಲಿಯೂ ನೆರವಾಗದೆ ಹೋದರೂ, ನನ್ನ ಗೀಳನ್ನು ಅಣಕಿಸುವವರಿಗೇನೂ ಕಡಮೆಯಿರಲಿಲ್ಲ. ಕಡೆಗೆ 'ರಥವೈದ್ಯ' ಎಂದು ನಾಮಕರಣವನ್ನು ಮಾಡಿದರು.

'ಅವರಿವರು ಅನ್ನುವುದೇನು, ಹೆಗ್ಗಡೆಯವರೇ 'ಇದೆಲ್ಲಿಯ ಹುಚ್ಚು ಹಚ್ಚಿಸಿಕೊಂಡೆ ಬಿಡು, ಗೌರಾಚಾರಿ' ಎಂದರು. ಆದರೆ ನಾನು ಯಾರ ಬುದ್ಧಿವಾದಕ್ಕೂ, ಅಣಕಕ್ಕೂ ಜಗ್ಗುವ ಸ್ಥಿತಿಯಲ್ಲಿರಲಿಲ್ಲ.

ಒಂದು ದಿನ ಹೀಗೇ ಯೋಚಿಸುತ್ತಾ ಊರಮುಂದಿನ ತಾವರೆಕೆರೆಯ ಬಳಿಯ ತೋಪಿನಲ್ಲಿ ಕುಳಿತಿರುವಾಗ ಎಳನೀರು ಕದಿಯಲು ತೆಂಗಿನ ಮರವನ್ನು ಹತ್ತಿದ ವಾನರವೊಂದನ್ನು ನೋಡಿದೆ. ಅದು ಕೈಯಿಂದ ಗರಿಯನ್ನು ಹಿಡಿದು, ಮತ್ತೊಂದು ಕೈಯಿಂದ ಕಾಯನ್ನು ಬಗೆಯುತ್ತಿತ್ತು. ಅದನ್ನು ನೋಡಿದಾಗ, ಆಕಸ್ಮಿಕವಾಗಿ ಕೈ ಜಾರಿ ಕೆಳಗೆ ಬಿದ್ದರೆ ಏನು ಗತಿ ಎಂದು ಯೋಚನೆ ಯಾಯಿತು. ಅದನ್ನೇ ನೋಡುತ್ತಾ ಕುಳಿತೆ—ಸ್ವಲ್ಪ ಹೊತ್ತಿಗೆ ಎಳನೀರಿನ ಕಾಯನ್ನು ತಿಂದ ಕಪಿ, ಆ ಎತ್ತರದಿಂದ ಕೆಳಗೆ ಧುಮುಕಿತು. ಅದರ ಕಾಲು ಮುರಿಯುವುದು ಖಂಡಿತ ಎಂದುಕೊಂಡೆ ನಾನು. ಆದರೆ ಕಪಿಗೆ ಮಾತ್ರ ಏನೂ ಆಗಲಿಲ್ಲ. ಧುಮುಕಿದ ನೋವೇ ಇಲ್ಲದಂತೆ ಮತ್ತೊಂದು ಮರಕ್ಕೆ ಹಾರಿಹೋಯಿತು. ನಮಗೆ ದಾರಿಯಲ್ಲಿ ನಡೆಯುವಾಗ ಜಾರಿದರೂ ಕಾಲು ಮುರಿಯುತ್ತದೆ. ಹಾಗಿರುವಾಗ ಭೇರುಂಡ ಸ್ತಂಭದ ಮಾನದಲ್ಲಿ ಎರಡು ಮೂರು ಕಂಭ ಉದ್ದವಿದ್ದ ತೆಂಗಿನ ಮರದಿಂದ ಧುಮುಕಿದರೂ ಅದರ ಕಾಲೇಕೆ ಮುರಿಯಲಿಲ್ಲ ಎಂಬ ವಿಚಾರಕ್ಕೆ ಬಿದ್ದೆ. ಅಂದಿನಿಂದ ಅದರ ಸತ್ಯವನ್ನು

ಪರೀಕ್ಷಿಸಲು ಪ್ರತಿದಿನವೂ ಕಪಿಗಳು ಮೇಲಿನಿಂದ ಧುಮುಕುವುದನ್ನು ಕಣ್ಣಿನಲ್ಲಿ ಕಣ್ಣಿಟ್ಟು ನೋಡತೊಡಗಿದೆ. ಹಾಗೆ ನಾಲ್ಕಾರು ದಿನ ನೋಡಿದ ಬಳಿಕ ಒಂದು ದಿನ ಕಪಿಯ ಯುಕ್ತಿ ಅರಿವಾಯಿತು. ಕಪಿ ಎತ್ತರದಿಂದ ಧುಮುಕಿದಾಗ ಅದು ನಮ್ಮಂತೆ ಕಾಲನ್ನು ನೆಲಕ್ಕೆ ಊರಲು ಯತ್ನಿಸುವುದಿಲ್ಲ. ಹಾಗಾಗಿದ್ದರೆ ಅದರ ಕಾಲು ನಮ್ಮ ಕಾಲಿನಂತೆಯೇ ಮುರಿಯುತ್ತಿತ್ತು. ಅದು ನೆಲಕ್ಕೆ ಧುಮುಕಿದಾಗ ನೆಲಕ್ಕೆ ಬಿದ್ದ ಚೆಂಡಿನಂತೆ ಮತ್ತೆ ಪುಟ ಏಳುವುದರಿಂದ ಅದು ಅಪಾಯವನ್ನು ತಪ್ಪಿಸಿಕೊಳ್ಳುತ್ತದೆ. ಅದನ್ನು ನೋಡಿದ ಬಳಿಕ ನನಗೆ ರಥಚಕ್ರ ಇಳುವಿಗೆ ಬೀಳುವಾಗ, ಕಲ್ಲಿನಮೇಲೆ ಕುಪ್ಪಳಿಸುವಾಗ ಹೀಗೆ ಅದು ಪುಟವೆದ್ದು ಮತ್ತೆ ನೆಲದ ಮೇಲೆ ಓಡುವಂತಾದರೆ, ಆ ಕುಲುಕಾಟದ ಪೆಟ್ಟು ರಥದಲ್ಲಿ ಕುಳಿತವರಿಗೆ ತಗಲದೆ ಹೋಗಬಹುದು ಎನಿಸಿತು. ಆ ಅನಿಸಿಕೆ ನನ್ನ ಮನದಲ್ಲಿ ಮೂಡಿದ ಗಳಿಗೆಯಲ್ಲಿ ನೀವು ನನ್ನನ್ನು ನೋಡಬೇಕಾಗಿತ್ತು. ಏನೋ ದೊಡ್ಡ ನಿಧಿ ಸಿಕ್ಕಷ್ಟು ಹರ್ಷವಾಯಿತು.

'ತೋಪಿನಿಂದ ಮನೆಗೆ ಹಿಂತಿರುಗಿದವನೇ, ಅಂಥ ಉಪಕರಣವೊಂದನ್ನು ರಚಿಸುವ ಯೋಚನೆಗೆ ಆರಂಭಿಸಿದೆ. ಎಷ್ಟೋ ದಿನ ಯೋಚಿಸಿದ ಬಳಿಕ, ಏನೇನೋ ನೂರೆಂಟು ಪ್ರಯತ್ನ ಮಾಡಿದ ಬಳಿಕ, ಸೇನೆಯಲ್ಲಿ ಬಳಸುವ ಬಿಲ್ಲು ನನಗೆ ದಾರಿ ತೋರಿಸಿತು. ಬಿಲ್ಲಿನ ಬೆನ್ನನ್ನು ಬಾಗಿಸಿರುವುದು, ಸೆಳೆದು ಬಿಟ್ಟ ನಾರಿಯ ಆಘಾತ, ಬಾಣಗಾರನ ಕೈಗೆ ತಾಗದಿರಲಿ ಎಂದಲ್ಲವೇ ? ಅಂದರೆ ಒಂದು ಹದಕ್ಕೆ ಬಾಗಿಸಿದ ಲೋಹದ ಪಟ್ಟಿಗೆ, ಹೀಗೆ ಆಘಾತವನ್ನು ತಡೆಯುವ ಶಕ್ತಿಯಿದೆ ಎಂದಾಯಿತು. ಹಾಗಾದರೆ, ರಥ ಚಕ್ರ ಕುಪ್ಪಳಿಸಿದಾಗ, ಅದರ ಪೆಟ್ಟನ್ನು ತಡೆಯಲು, ಚಕ್ರದ ಅಚ್ಚಿಗೂ, ರಥದ ಆಸನ ಭಾಗದ ಅಡಿಗೂ ಮಧ್ಯೆ ಅಂಥ ಲೋಹದ ಬಿಲ್ಲನ್ನು ನಿಲ್ಲಿಸಿದರೆ, ಅದರಿಂದ ಕುಳಿತವರ ಮೈಗೆ ಆ ಆಘಾತ ಅಷ್ಟಾಗದಂತೆ ತಡೆಯಬಹುದೆಂದು ತೋಚಿತು. ಆ ಯೋಚನೆಯ ಪರಿಣಾಮವಾಗಿ ಇದನ್ನು ಸಿದ್ಧಗೊಳಿಸಿದೆ.'

—ಎಂದು ಹೇಳಿ, ಗೌರಾಚಾರಿ, ಬಟ್ಟೆಯ ಗಂಟಿನಲ್ಲಿದ್ದ, ಬಿಲ್ಲಿನಂತೆ ಬಾಗಿದ ಲೋಹಪಟ್ಟಿಕೆಯ ಮಾದರಿಯನ್ನು ತೋರಿಸಿದ. ತನ್ನ ಕೈಯಲ್ಲಿದ್ದ ರಥದಿಂದ, ಅದನ್ನು ರಥಕ್ಕೆ ಹೊಂದಿಸುವ ರೀತಿಯನ್ನೂ ತೋರಿಸಿದ.

ಅದುವರೆಗೂ ಗೌರಾಚಾರಿ ಹೇಳಿದ ದೀರ್ಘವಾದ ಕಥೆಯನ್ನು ನಡುವೆ

ಒಂದು ಮಾತಾಡದೆ ಕೇಳಿದ ಗಂಗರಾಜರು, ಆಗ ರಥಚಕ್ರಗಳನ್ನು ಬಂಧಿಸಿದ ರಜ್ಜು ವಿಶೇಷವನ್ನು ತೋರಿಸಿ, ' ಇದೇನು ? ' ಎಂದು ಕೇಳಿದರು.

' ಇದು ರಥ ತಗ್ಗು ದಿಣ್ಣೆಗಳ ಮೇಲೆ, ಯಾವ ಬಗೆಯ ಅಪಘಾತಕ್ಕೂ ಅವಕಾಶವಿಲ್ಲದಂತೆ ಚಲಿಸಲು ಮಾಡಿದ ಉಪಾಯ. ಈ ಉಪಾಯದ ಯೋಚನೆ ನನಗೆ ಬಂದದ್ದು, ಒಮ್ಮೆ ಹಾವು ಹರಿಯುವುದನ್ನು ನೋಡಿದಾಗ. ಹಾವು ಎಂಥ ಏರಿಳಿವಿನಲ್ಲಿ ಹರಿಯುವಾಗಲೂ, ಅದರ ಮೈಯ ಎಲುಬಿನ ಕೊಂಡಿಗಳು ಆ ಏರಿಳಿತದ ವಕ್ರತೆಗೇ ಹೊಂದಿಕೊಳ್ಳುವ ಅವಕಾಶವಿರುವುದರಿಂದ, ಎಂಥ ಒರಟು ನೆಲದ ಮೇಲಾದರೂ, ಮುಗ್ಗರಿಸದೆ, ಬೀಳದೆ ವೇಗವಾಗಿ ಚಲಿಸುವುದು ಸಾಧ್ಯವಾಗಿದೆ. ರಥ ಚಕ್ರಗಳಿಗೂ ಅಂಥ ಉಪಕರಣವನ್ನು ಜೋಡಿಸಿದರೆ, ಹಾವಿನ ಹಾಗೇ ರಥಗಳೂ ಎಂಥ ನೆಲದ ಮೇಲಾದರೂ ವೇಗವಾಗಿ ಓಡುವುದು ಸಾಧ್ಯವಾಗುವುದು ಎನಿಸಿ, ಇದನ್ನು ಸರ್ಪದ ದೇಹ ರಚನೆಯಂತೇ ರಚಿಸಿದೆ. ಈ ಸರಪಳಿಯ ಒಂದೊಂದು ಕೊಂಡಿಯೂ ಪ್ರತ್ಯೇಕವಾಗಿರುವುದರಿಂದ, ಇದನ್ನು ಸೇರಿಸುವ ತಂತಿಯ ಹಗ್ಗ ಹೇಗೆಂದರೆ ಹಾಗೆ ಬಳುಕುವುದರಿಂದ, ಇದು ನೆಲದ ಏರಿಳಿವಿನ ಆಕಾರವನ್ನೇ ಧರಿಸಿ ಚಲಿಸಲು ಅನುಕೂಲವಾಗಿದೆ. ತಳಭಾಗ ನಯವಾಗಿರುವುದರಿಂದ ರಥದ ಓಟಕ್ಕೆ ತಡೆಯಾಗುವುದಿಲ್ಲ. ಈ ಸರಪಳಿಯನ್ನು ಹಿಡಿಯಲೆಂದೇ ಚಕ್ರಗಳ ಮೇಲೆ ಹಲ್ಲುಗಳನ್ನು ಮಾಡಿರುವುದು. ಮುಂಭಾಗದ ಚಕ್ರಗಳನ್ನು ದೊಡ್ಡದು ಮಾಡಿ, ಹಿಂಭಾಗವನ್ನು ಕಿರಿದಾಗಿ ಮಾಡಿರುವುದೂ ಸುಲಭ ಚಲನೆಯ ಉದ್ದೇಶದಿಂದಲೇ. ಹಾವನ್ನು ನೋಡಿ ನಾನಿದನ್ನು ಮಾಡುವುದನ್ನು ಕಲಿತದ್ದರಿಂದಲೇ ಇದಕ್ಕೆ ' ಸರ್ಪರಜ್ಜು ' ಎಂದು ಹೆಸರಿಟ್ಟಿದ್ದೇನೆ '

—ಎಂದು ಆ ಉಪಕರಣದ ರಚನಾವಿಧಾನ, ಉಪಯೋಗಗಳನ್ನು ವಿವರಿಸಿದ ಗೌರಾಚಾರಿ.

ಅದನ್ನು ವಿವರಿಸಿದ್ದೇ ಅಲ್ಲದೆ, ಆ ಮಾದರಿಗಳನ್ನು ನೆಲದ ಮೇಲೆ ನಡೆಸಿ, ಕಿವಿ ಕೇಳಿದ ಮಾತು ಕಣ್ಣಿಗೂ ನಂಬಿಕೆಯಾಗುವಂತೆ ತೋರಿಸಿದ.

ಗೌರಾಚಾರಿ ರಚಿಸಿದ ವಿಶೇಷ ಉಪಕರಣಗಳಿಂದಳವಟ್ಟ ರಥಗಳಿಂದ ತಮ್ಮ ದಂಡಯಾತ್ರೆಯ ಕಾರ್ಯಕ್ಕೆ ಎಷ್ಟು ಅನುಕೂಲವಾಗುವುದೆಂದು ಮನವರಿಕೆಯಾದ ಗಂಗರಾಜರಿಗೆ ಹಿಡಿಸಲಾಗದಷ್ಟು ಸಂತೋಷವಾಯಿತು. ಆ

ಸಂತೋಷದಲ್ಲಿ ಗೌರಾಚಾರಿಯ ಧೂಳು ತುಂಬಿದ ಮೈ, ಹೊಲಸು ಬಟ್ಟೆ ಎಲ್ಲಾ ಮರೆತು ಹೋಗಿ, ಆತನನ್ನು ಬಿಗಿದು ಆಲಂಗಿಸಿ—

'ನಮ್ಮ ಪಾಲಿಗೆ ನಿಮ್ಮ ಪ್ರತಿಭೆ ಕಾಮಧೇನುವಾಯಿತು. ಇದಕ್ಕೆ ನಿಮಗೇನು ಮೆಚ್ಚುಬೇಕು–ಕೇಳಿ. ಏನು ಬೇಡಿದರೂ ಅದು ನಿಮ್ಮದು.'

—ಎಂದರು.

ಗಂಗರಾಜರ ಉತ್ಸಾಹ, ಮೆಚ್ಚುಗೆಯನ್ನು ಕಂಡು ಗೌರಾಚಾರಿಯ ಕಣ್ಣಿನಲ್ಲೂ ನೀರು ಹರಿಯಿತು. ಕಣ್ಣನ್ನು ಒರಸಿಕೊಂಡು ಹೇಳಿದ—

'ನಾನು ಮಾಡಿದುದನ್ನು ಮೆಚ್ಚುವ ಒಬ್ಬರನ್ನಾದರೂ ಕಂಡುದು ನನ್ನ ಭಾಗ್ಯ. ಆ ಮೆಚ್ಚುಗೆಯೇ ನನಗೆ ನೂರು ಗ್ರಾಮದ ಉಡುಗೊರೆ–ನಿಮ್ಮ ಅಭಿಮಾನವೊಂದು ಶಾಶ್ವತವಾಗಿರಲಿ. ಆದರೂ–ನನಗೆ ಮೆಚ್ಚಿಗೆ ಕೊಡುವ ಮನಸ್ಸಿದ್ದರೆ, ಈ ಉಪಕರಣಗಳನ್ನು ನಿಮ್ಮ ರಥಗಳಿಗೆ ಅಳವಡಿಸಿ, ಮಾದರಿಯಲ್ಲಿ ಸರಿಹೋದುದು ವ್ಯಾವಹಾರಿಕವಾಗಿಯೂ ಸತ್ಯ ಎಂದು ಮನವರಿಕೆ ಮಾಡಿಕೊಳ್ಳಲು ಅವಕಾಶ ಕಲ್ಪಿಸಿಕೊಡಿ, ಅಷ್ಟು ಸಾಕು.'

'ಅಂದರೆ–ಇದನ್ನು ಯಾವ ರಥಕ್ಕೂ ಇನ್ನೂ ಅಳವಡಿಸಿ ಪರೀಕ್ಷಿಸೀಯೇ ಇಲ್ಲವೇ ?'

'ಊಹೂ. ಅದಕ್ಕೆ ಅವಕಾಶವೆಲ್ಲಿಯದು ? ನಮ್ಮ ಊರಿನ ಜನಕ್ಕೆ ನನ್ನನ್ನು ನೋಡಿ ನಗುವುದಕ್ಕೇ ಹೊತ್ತು ಸಾಲಲಿಲ್ಲ. ಇನ್ನು ಪರೀಕ್ಷೆಗೆಲ್ಲಿ ವ್ಯವಧಾನ ತಂದಾರು ? ಹೆಗ್ಗಡೆಯವರೊಬ್ಬರಿಗೆ ನನ್ನ ಮಾತು ನಂಬಿಕೆಯಾಯಿತು. ಅದಕ್ಕೇ 'ಇಲ್ಲಿ ಈ ವಿಷಯ ಯಾರೊಂದಿಗೂ ಹೇಳಹೋಗಬೇಡ. ನನ್ನ ಅಳಿಯಂದಿರು ಯುದ್ಧ ಸಿದ್ಧತೆಯಲ್ಲಿದ್ದಾರೆ. ಮೊದಲು ಅಲ್ಲಿಗೆ ಹೋಗಿ ತೋರಿಸು. ನಿನ್ನ ಪ್ರತಿಭೆಯಿಂದ ಅವರಿಗೆ ಉಪಕಾರವಾಗಲಿ' ಎಂದು ಇಲ್ಲಿಗೆ ಕಳಿಸಿದರು. 'ಅಯ್ಯ ನಿಮ್ಮ ರಥಕ್ಕಾದರೂ ಇದನ್ನು ಜೋಡಿಸುತ್ತೇನೆ' ಎಂದುದಕ್ಕೆ 'ಇಲ್ಲಿನವರು ಯಾರ ಕಣ್ಣಿಗೂ ಇದು ಬೀಳುವುದು ಬೇಡ' ಎಂದು ಕಟ್ಟುಮಾಡಿ, ಯಾರಿಗೂ ನಾನು ಈ ಮಾದರಿಯನ್ನು ತೋರಿಸುವುದಕ್ಕೆ ಬಿಡದೆ, ಇಲ್ಲಿಗೆ ಅಟ್ಟಿದರು. 'ಗೌರಾಚಾರಿ ನಿನ್ನನ್ನು ನಾನು ಮಗ ಎಂದೇ ತಿಳಿದುಕೊಂಡಿದ್ದೇನೆ. ಆ ಭಾವನೆಯಿಂದಲೇ ನಿನ್ನನ್ನು ನಾನು ನನ್ನ ಅಳಿಯಂದಿರಿಗೆ ಬಳುವಳಿ ಎಂದು ಕಳಿಸಿ ಕೊಡುತ್ತೇನೆ.

ಅಳಿಯಂದಿರಿಗೂ ನಿನ್ನ ವಿಷಯ ತಿಳಿಸುತ್ತೇನೆ. ಇನ್ನುಮೇಲೆ ದ್ವಾರಸಮುದ್ರವೇ ನಿನಗೆ ಊರು, ಅವರ ಆಸ್ಥಾನವೇ ಮನೆ. ನಿನ್ನ ಸೇವೆ ಅವರಿಗೆ ಮೀಸಲು' ಎಂದು ಹೆಗ್ಗಡೆಯವರು ನನಗೆ ಅಪ್ಪಣೆ ಮಾಡಿದಾರೆ.'

ಗೌರಾಚಾರಿ ಹೇಳಿದುದನ್ನು ಕೇಳಿ ಗಂಗರಾಜರಿಗೆ, ಹೆಗ್ಗಡೆ ಮಾರಸಿಂಗಮಯ್ಯನವರು, ಆತನಿಗೆ ಆ ರೀತಿ ಕಟ್ಟುಮಾಡಿ ಕಳಿಸಿದುದರ ಕಾರಣವನ್ನು ಅರಿತುಕೊಂಡರು. ಹೊಯ್ಸಳರ ಶತ್ರುಗಳಾರಿಗೂ ಗೌರಾಚಾರಿಯ ಯುದ್ಧೋಪಯೋಗೀ ಸಂಶೋಧನೆಗಳ ಲಾಭ ಸಿಗಬಾರದೆಂದು ಮಾರಸಿಂಗಮಯ್ಯನವರು ಮಾಡಿದ ಉಪಾಯ, ಅವರ ಅಭಿಮಾನ ಮನವರಿಕೆಯಾಗಿ, ಅವರನ್ನು 'ಭಲೆ' ಎಂದು ಮನಸ್ಸಿನಲ್ಲಿಯೇ ಹೊಗಳಿದರು.

'ಹೆಗ್ಗಡೆಯವರು ಹೇಳಿದುದು ಸರಿ. ಆಚಾರ್ಯರೇ, ನೀವಿನ್ನು ದ್ವಾರಸಮುದ್ರದಲ್ಲೇ ಇರಿ. ಪ್ರಭುಗಳ ಆಸ್ಥಾನ ನಿಮ್ಮಂಥ ಪ್ರತಿಭಾಶಾಲಿಗಳಿಗೆ ತವರು ಮನೆ. ಇಲ್ಲಿ—ನಿಮ್ಮ ಕೆಲಸಕ್ಕೆ ಏನೇನು ಸಾಮಾನು ಸರಂಜಾಮು ಬೇಕೋ, ಏನು ಉಪಕರಣಗಳ ಅಗತ್ಯವೋ, ಎಷ್ಟು ಜನ-ಧನ ಸಹಾಯ ಬೇಕೋ ಹೇಳಿ. ಯಾವುದಕ್ಕೂ ಕೊರತೆಯಿಲ್ಲದಂತೆ ಒದಗಿಸಿ ಕೊಡುತ್ತೇವೆ. ಈ ದಿನವೇ ಅದಕ್ಕೆ ಬೇಕಾದ ಅಪ್ಪಣೆ ಕೊಡುತ್ತೇವೆ. ನೀವು ನಿಶ್ಚಿಂತರಾಗಿ ಕಾರ್ಯನಿರತರಾಗಿ.'

'ಇದೆಲ್ಲಾ ಆಯಿತು, ಆಚಾರ್ಯರೆ. ಆದರೆ ಪ್ರಧಾನರಿಗೆ, ದೂರದಲ್ಲಿದ್ದುದನ್ನು ಹತ್ತಿರದಲ್ಲಿರುವಂತೆ ತೋರಿಸುವ ಕೊಳವಿಯನ್ನು ತೋರಿಸಲೇ ಇಲ್ಲವಲ್ಲ'

—ಎಂದ ಅದುವರೆಗೂ ಸುಮ್ಮನಿದ್ದ ಬೋಕಿಮಯ್ಯ.

'ನಿಜ. ನಿಜ. ನನಗೂ ಅದು ಮರೆತು ಹೋಗಿತ್ತು'

—ಎಂದು ಗಂಗರಾಜರೂ ಜ್ಞಾಪಿಸಿಕೊಂಡು ಕೇಳಿದರು.

'ಅದನ್ನು ನೀವು ಮರೆತಿದ್ದೇ ಮೇಲಾಯಿತು.'

—ಎಂದ ಗೌರಾಚಾರಿ.

'ಏಕೆ?'

'ಇಲ್ಲವಾದರೆ, ನೀವೂ ಬನವಾಸಿಯ ಜನದ ಹಾಗೆ 'ಇವನು ಯಾವುದೋ ಭೂತ ವಶಪಡಿಸಿಕೊಂಡಿದಾನೆ'-ಎಂದು ಹೇಳಿ, ಶೂಲಕ್ಕೇರಿ

ಸಲು ಅಪ್ಪಣೆಮಾಡುತ್ತಿದ್ದಿರಿ.'

'ಛೆ. ಛೆ. ನನ್ನಿಂದ ಎಂದೂ ಅಂಥ ಅಕೃತ್ಯವಾಗದು. ಅದೇನು ತೋರಿಸಿ.'

'ನೋಡಿ ಸ್ವಾಮಿ. ನಿಮ್ಮ ಈ ಮಿತ್ರರು ಹೇಳಿದ ಹಾಗೆ ಇದು ಕಣ್ಣುಕಟ್ಟೂ ಅಲ್ಲ, ಮಾಟವೂ ಅಲ್ಲ. ಇಂದ್ರಜಾಲ ಮಹೇಂದ್ರಜಾಲ ಎಳ್ಳಷ್ಟೂ ಇದರಲ್ಲಿಲ್ಲ. ನಮ್ಮ ತಾತ ಸೋಮೇಶ್ವರಾಚಾರಿ, ಯಾವುದೋ ಹಳೆಯ ಕಾಲದ ಓಲೇಗರಿಯ ಗ್ರಂಥದಲ್ಲಿ, 'ಗರ್ಭ, ರೇಖೆ, ಮಚ್ಚೆ ಯಾವುದೂ ಇಲ್ಲದ ಸ್ಫಟಿಕ ಶಿಲೆಯನ್ನು ತೆಳುವಾದ ಹಲಗೆಯಾಗಿ ಕತ್ತರಿಸಿದರೆ, ಅದಕ್ಕೆ ದೂರದರ್ಶಕ ಗುಣ ಬರುತ್ತದೆ' ಎಂದು ಬರೆದಿದ್ದುದನ್ನು ಓದಿದ್ದ ರಂತೆ. ಯಾವುದಾದರೂ ಹೊಸದನ್ನು ಹುಡುಕಬೇಕು ಎನ್ನುವ ನನ್ನ ಹುಚ್ಚನ್ನು ತಿಳಿದುಕೊಂಡ ಅವರು 'ಗೌರಾ, ಅಂಥ ಸ್ಫಟಿಕ ಕನ್ನಡಿ ಮಾಡಿ ಕೊಂಡರೆ, ಅದರ ಮೂಲಕ ನೋಡಿದಾಗ ಆಕಾಶದಲ್ಲಿರೋ ದೇವ ದೇವತೆ ಗಳೆಲ್ಲಾ ಕಾಣಿಸ್ತಾರಂತೆ. ಅದನ್ನು ಸಾಧಿಸಿದವನಿಗೆ ಅಂಥ ದಿವ್ಯ ಚಕ್ಷುಸ್ಸು ಬರುತ್ತದಂತೆ. ಸುಮ್ಮನೆ ಅದೂ ಇದೂ ಹುಡುಕಿಕೊಂಡು ಜೀವನ ಯಾಕೆ ಹಾಳು ಮಾಡಿಕೋತೀಯಾ? ಇಂಥ ವಿದ್ಯೆನಾದರೂ ಬಂದರೆ, ಸ್ವಾಮಿ ಪಾದಾನ ನೋಡಿ, ಬದುಕು ಸಾರ್ಥಕ ಮಾಡಿಕೋಬಹುದು' ಅಂತ ಹೇಳ್ತಾ ಇದ್ದ. ನನಗೂ 'ಅದು ಯಾಕೆ ಆಗಬಾರದು?' ಅನ್ನಿಸಿತು. 'ಏನು ಮಾಡಿದರೆ ಆ ವಿದ್ಯೆ ಬರುತ್ತೆ?' ಅಂತ ಕೇಳಿದೆ. 'ಸೂರ್ಯನಾರಾಯಣನ ಆರಾಧನೆ ಮಾಡು. ಆತ ಆಕಾಶಕ್ಕೆ ಸ್ವಾಮಿ, ಆತನ ಅನುಗ್ರಹವಾದರೆ, ಈ ವಿದ್ಯೆ ಹಸ್ತಗತವಾಗುತ್ತೆ' ಅಂತ ಹೇಳಿದ ನಮ್ಮ ತಾತ. 'ಆಯಿತು.' ಅಂದು ಆ ಪೂಜೆ ಪುರಸ್ಕಾರ ಮಾಡಿ, 'ಆಕಾಶದರ್ಶಿ' ವಿದ್ಯೆ ಹುಡುಕಿ ಕೊಂಡು ಹೊರಟೆ. ಪೂಜೆ, ಪುನಸ್ಕಾರ ಮಾಡೋದು ನನ್ನ ಕೈಲಾದದ್ದು. ಆದರೆ ಸ್ಫಟಿಕ ಶಿಲೆ ಎಲ್ಲಿಂದ ತರೋದು ಅನ್ತಾ ಯೋಚನೆ ಮಾಡ್ತಾ ಇರೋ ವಾಗ, ಕೇದಾರೇಶ್ವರ ಮಠದ ಸ್ವಾಮಿಗಳು ನಮ್ಮ ಅಪ್ಪಯ್ಯನಿಗೆ, ಶಿವಲಿಂಗ ವನ್ನು ಮಾಡುವುದಕ್ಕೆಂದು ಒಂದು ದೊಡ್ಡ ಸ್ಫಟಿಕವನ್ನು ಕಳಿಸಿಕೊಟ್ಟರು. ಅಷ್ಟು ದೊಡ್ಡ ಸ್ಫಟಿಕವನ್ನೇ ನಾನು ನೋಡಿರಲಿಲ್ಲ. ಅದು ನನ್ನದಾದರೆ, ಅನುಕೂಲ ಎನ್ನಿಸಿತು. ಆ ಗಳಿಗೆಯಲ್ಲಿ, ನ್ಯಾಯ–ಅನ್ಯಾಯ, ಪಾಪ–

ಪುಣ್ಯ ಎಲ್ಲಾ ಮರೆತುಹೋಗಿ, 'ದೇವರೇ, ನನ್ನ ತಪ್ಪು ಕ್ಷಮಿಸು' ಎಂದು ಬೇಡಿ, ಆ ಸ್ಫಟಿಕ ಶಿಲೆಯನ್ನು ಕದ್ದುಕೊಂಡು, ಊರು ಬಿಟ್ಟೆ. ನನ್ನ ಹೆಸರು, ದೆಸೆ ತಿಳಿಯದ ಊರಿಗೆ ಹೋಗಿ, ಅಲ್ಲಿ ಆರು ಮಾಸ ಕಷ್ಟಪಟ್ಟೆ. ದಿನಾ ಬೆಳಗ್ಗೆ ಎದ್ದು ತಣ್ಣೀರಿನಲ್ಲಿ ಸ್ನಾನಮಾಡಿ, ಸೂರ್ಯಸಹಸ್ರನಾಮ ಹೇಳುತ್ತಾ ಆ ಸ್ಫಟಿಕ ಶಿಲೆಯನ್ನು ತೆಯ್ದೆ. ಅದು ತೆಳುವೇನೋ ಆಯಿತು—ಆದರೆ ನಾನು ಅರಿತುಕೊಂಡ ಹಾಗೆ ಹಲಗೆಯಾಗಲಿಲ್ಲ. ಅದು ಎರಡಾಗಿ ಸೀಳಿ ಒಂದರ ಮಧ್ಯದಲ್ಲಿ ಹಳ್ಳ, ಇನ್ನೊಂದರ ಮಧ್ಯದಲ್ಲಿ ಉಬ್ಬು ಉಳಿದು ಹೋಯಿತು. 'ಇದೇನು ನನ್ನ ಶ್ರಮ ವ್ಯರ್ಥವಾಯಿತಲ್ಲಾ' ಎಂದು ಕೊಂಡಾಗ, ಆ ರಾತ್ರಿ ಸೂರ್ಯನಾರಾಯಣಸ್ವಾಮಿ ಕನಸಿನಲ್ಲಿ ಬಂದು 'ನಾನು ನಿನಗೆ ಪ್ರಸನ್ನನಾಗಿದೇನೆ. ನೀನು ಮಾಡಿದುದು ಸರಿ' ಎಂದು ಅಪ್ಪಣೆ ಕೊಡಿಸಿದ ಹಾಗಾಯಿತು.

'ಆದರಿಂದ ನನ್ನ ಮನಸ್ಸಿಗೂ ನೆಮ್ಮದಿಯಾಗಿ, ಮಾರನೆಯ ದಿನ ಅಂಗೈಯಮೇಲೆ ಆ ಸ್ಫಟಿಕವನ್ನಿಟ್ಟುಕೊಂಡು ನೋಡಿದಾಗ, ಅಂಗೈ ರೇಖೆಗಳು ಬಹು ಸ್ಪಷ್ಟವಾಗಿ, ಇದ್ದುದರ ಹತ್ತರಷ್ಟು ದೊಡ್ಡದಾಗಿ ಕಾಣಿಸಿದವು. ಕಣ್ಣಿಗಿಟ್ಟುಕೊಂಡು ನೋಡಿದೆ. ಮೊದಲು ಏನೂ ಸರಿಯಾಗಿ ಕಾಣಲಿಲ್ಲ; ಮಂಕು ಮಂಕಾಗಿತ್ತು. ಅಷ್ಟು ದೂರ ಎರಡನ್ನೂ ಒಂದರ ಮುಂದೆ ಮತ್ತೊಂದನ್ನು ಹಿಡಿದು ನೋಡಿದಾಗ, ದೂರದಲ್ಲಿದ್ದುದು ಹತ್ತಿರ ಕಾಣಿಸಿತು. ಸರಿ ಎಂದು, ಅಷ್ಟು ಉದ್ದದ ಒಂದು ಬಿದಿರು ಕೊಳವಿಗೆ ಆ ಸ್ಫಟಿಕ ದರ್ಪಣ ವನ್ನಿಟ್ಟು ನೋಡಿದೆ. ಆಗ ಸರಿಯೋಯಿತು.

'ಗೆದ್ದೆ ಎಂದುಕೊಂಡು, ಇದನ್ನು ಕೇದಾರೇಶ್ವರ ಸ್ವಾಮಿಗೇ ಅರ್ಪಿಸಿ, ಸ್ಫಟಿಕ ಕದ್ದ ಪಾಪ ಕಳೆದುಕೊಳ್ಳೋಣ ಎಂದು ಬಳ್ಳಿಗಾವೆಗೆ ಬಂದೆ. ಆದರೆ ಊರಿನವರ ಪಾಲಿಗೆ, ಮಠದ ವಸ್ತು ಕದ್ದ ನಾನು ಅಂತ್ಯಜನಿಗಿಂತ ಕಡೆಯಾಗಿದ್ದೆ. ಮಾರಸಿಂಗಮಯ್ಯನವರು ನನ್ನ ರಕ್ಷಣೆಗೆ ಬರದೆ ಹೋಗಿದ್ದರೆ, ನನ್ನನ್ನು ಶೂಲಕ್ಕೆ ಏರಿಸಿಬಿಡುತ್ತಿದ್ದರು. ಎಷ್ಟೋದಿನ ಆದಮೇಲೆ, ಸ್ವಾಮಿ ಗಳಿಗೆ ಈ 'ಆಕಾಶದರ್ಶಿ' ತೋರಿಸಿದೆ. ಅವರಿದನ್ನು ಕೈಯಲ್ಲಿ ಕೂಡ ಮುಟ್ಟಲಿಲ್ಲ. ನನ್ನ ಬಲವಂತಕ್ಕೆ ಇದನ್ನು ಪರೀಕ್ಷಿಸಿದರೂ, 'ಆಚಾರಿ ಏನೋ ಅಭಿಚಾರ ಮಾಡಿ, ಈ ಕೊಳವಿಯೊಳಗೆ ಎಂಥದೋ ಭೂತಾನ

ದಿಗ್ಬಂಧನ ಮಾಡಿ ಕೂಡಿಸಿದ್ದಾನೆ. ಇಲ್ಲವಾದರೆ ಅಷ್ಟುದೂರಾ ಇರೋದು, ಹತ್ತಿರ ಇರೋಹಾಗೆ ಕಾಣೋದು ಮನುಷ್ಯನ ಕಣ್ಣಿಗೆ ಸಾಧ್ಯವೇ? ಈ ಆಚಾರಿ, ಅವನ ಭೂತಯಂತ್ರ ಎರಡನ್ನು ಕಾಳಿಕಾದೇವಿಗೆ ಬಲಿ ಕೊಡಬೇಕು' ಎಂದೇ ಆಡಿಕೊಂಡರು. ನಾನು ಜೀವ ಭೀತಿಯಿಂದ ಇದನ್ನು ಅಡಗಿಸಿಟ್ಟುಬಿಟ್ಟೆ'

—ಎಂದು ಗೌರಾಚಾರಿ, ತಾನು ಕಂಡುಹಿಡಿದ 'ಆಕಾಶದರ್ಶಿ'ಯ ಕಥೆ ಹೇಳಿದ.

ಆ ಕಥೆಯನ್ನು ಕೇಳಿದ ಬಳಿಕ ತಮ್ಮ ಕುತೂಹಲವನ್ನು ಅಡಗಿಸಿಕೊಳ್ಳಲಾಗದೆ, ಗಂಗರಾಜರು, ತಮ್ಮ ಮುಂದಿದ್ದ ಆಕಾಶದರ್ಶಿಯನ್ನು ಕೈಗೆ ತೆಗೆದುಕೊಂಡು ನೋಡಿದರು.

ಪಂಚಲೋಹದ ಕೊಳವಿಯ ಸುತ್ತಲೂ ನವಗ್ರಹಗಳ ಚಿತ್ರಗಳನ್ನು ಕೊರೆಯಲ್ಪಟ್ಟದ್ದುದಲ್ಲದೆ, ಕೊಳವಿಯ ಎರಡು ಕಡೆಯ ಬಾಯಿಗೂ ಎರಡು ಸ್ಫಟಿಕದರ್ಪಣಗಳು ಜೋಡಿಸಲ್ಪಟ್ಟದ್ದವು.

ಅದನ್ನು ಗಂಗರಾಜರು ತಮ್ಮ ಕಣ್ಣಿಗೆ ಇಟ್ಟುಕೊಂಡು ನೋಡಿದರು, ಏನೋ ಎಲ್ಲವೂ ಮುಬ್ಬು ಮಸಕಾಗಿ ಕಾಣಿಸಿತು. ಆಗ ಗೌರಾಚಾರಿ—

'ಎಲ್ಲರ ದೃಷ್ಟಿ ಶಕ್ತಿಯೂ ಒಂದೇ ಆಗಿರೋದಿಲ್ಲ. ಅದಕ್ಕೇ ಆ ಎರಡು ಕನ್ನಡೀನ ಎರಡು ಕೊಳವೆಗೆ ಜೋಡಿಸಿ, ಒಂದನ್ನು ಮತ್ತೊಂದರಲ್ಲಿ ಸೇರಿಸಿದೇನೆ. ಆ ಕೊಳವಿಗಳನ್ನು ಹಿಂದೆ ಮುಂದೆ ಸರಿಸಿ ನೋಡಿ, ಸರಿಯಾಗಿ ಕಾಣುತ್ತದೆ'

—ಎಂದು 'ಆಕಾಶದರ್ಶಿ'ಯ ಮೂಲಕ ನೋಡುವ ಕ್ರಮವನ್ನು ವಿವರಿಸಿದ.

ಗೌರಾಚಾರಿಯು ಸಲಹೆಯಂತೆ, ಕೊಳವಿಯ ಉದ್ದವನ್ನು, ಹಿಂದು ಮುಂದು ಮಾಡಿ, ಸರಿಪಡಿಸಿಕೊಂಡು ನೋಡಿದಾಗ, ಗಂಗರಾಜರಿಗೆ ಅರಮನೆಯ ಮಹಾದ್ವಾರದ ಮೇಲಿನ ಗೋಪುರದ ಪಂಚಕಲಶ ಕಂಡವಲ್ಲದೆ, ಆ ಪಂಚಕಲಶಗಳ ಮೇಲೆ, ಶಿಲ್ಪಿ ರೇಖಿಸಿದ ಪದ್ಮದದಳಗಳೂ ಕಾಣಿಸಿ, ಅವರ ಮೈ ಪವಾಡವನ್ನು ಕಂಡಂತೆ ರೋಮಾಂಚವಾಯಿತು.

ಹಾಗೇ ಕೊಳವಿಯನ್ನು ಬೇರೆ ಬೇರೆ ದಿಕ್ಕಿಗೆ ತಿರುಗಿಸಿ, ಪುಷ್ಪಗಿರಿಯ

ಬೆಟ್ಟವನ್ನು ನೋಡಿದರು. ಬೆಟ್ಟದ ಬಂಡೆಗಳು ಹತ್ತಿರ ಕಂಡದ್ದೇ ಅಲ್ಲದೆ, ಆ ಶಿಲೆಗಳ ಮೇಲಿನ ಉಬ್ಬು, ತಗ್ಗು, ಪಾಚಿ, ಪದರ ಎಲ್ಲವೂ ಕಂಡವು.

ಅದನ್ನು ನೋಡಿದ ಸಂತೋಷದಲ್ಲಿ ಅವರಿಗೆ, ಬಯಸಿದ ವಸ್ತು ಸಿಕ್ಕ ಸಣ್ಣ ಮಗುವಿನ ಹಾಗೆ ಕುಪ್ಪಳಿಸಿ ಕುಣಿಯುವಂತಾಯಿತು. ಆ ಆನಂದಾತಿರೇಕದಲ್ಲಿ ಮೈಮರೆತು, ಒಳಗಿದ್ದ ತಮ್ಮ ಮರವಳಿಗೆ ಲಕ್ಷ್ಮೀ ಮತಿಯನ್ನು ಕೂಗಿ—

'ಲಕ್ಷ್ಮೀ . . . ಲಕ್ಷ್ಮೀ . . . ಇಲ್ಲಿ ನೋಡು ಬಾ . . . ಎಂಥ ಅದ್ಭುತ . . . ಏನು ಆಶ್ಚರ್ಯ . . .'

—ಎಂದು ಕೂಗಿದರು.

ಅವರ ಕೂಗು ಕೇಳಿದ ಅವರ ಮಡದಿ ಲಕ್ಷ್ಮೀಪತಿ ಮಗನಿಗೆ ಏನಾ ಯಿತೋ ಎಂದು ಮಾಡುತ್ತಿದ್ದ ಪೂಜೆಯನ್ನೂ ಬಿಟ್ಟು, ಚೌಪಳಿಗೆಗೆ ಓಡಿ ಬಂದ ಗಂಗರಾಜರ ತಾಯಿ ಪೋಚಿಕಬ್ಬೆ ಆಳುಕಾಳುಗಳು ಒಬ್ಬೊಬ್ಬರಿಗೂ ಆ ಆಶ್ಚರ್ಯ ವಿಶೇಷವನ್ನು ತೋರಿಸಿದರು.

ಆಕಾಶದರ್ಶಿಯ ಮೂಲಕ ಸಹಸ್ರ ಕೂಟ ಜಿನಾಲಯವನ್ನು ನೋಡಿದ ವೃದ್ಧ ಪೋಚಿಕಬ್ಬೆಗಂತೂ ಬಾಯೇ ಕಟ್ಟಿಹೋಯಿತು.

—ಎಂದು ಹೇಳಿದರು.

'ಇವತ್ತಿನವರೆಗೂ ಭಗವಂತ ನನ್ನ ಕಣ್ಣು ಉಳಿಸಿದ್ದು ಸಾರ್ಥಕ ವಾಯಿತು. ಲಕ್ಷ್ಮೀ-ಒಳಗೆ ಹೋಗಿ, ಬೊಕ್ಕಸದಲ್ಲಿರೊ, ಒಂದು ಕೊಳಗ ಮುತ್ತನ್ನು ತಂದು ಈ ಪುಣ್ಯಾತ್ಮರ ಮಡಲಿಗೆ ಹಾಕಿಬಿಡು . . . ಗಂಗಣ್ಣ . . . ನೀನು ಆ ಸೀಮೆ ಗೆದ್ದೆ, ಈ ನಾಡು ಗೆದ್ದೆ ಅನ್ತಾ ಇದ್ದೆಯಲ್ಲಾ-ನೋಡಿ ದೆಯಾ ಆಕಾಶ ಪಾತಾಳ ಎಲ್ಲಾನೂ ಕೊಳವೀಲಿ ಗೆದ್ದ ಈ ಮಹಾನು ಭಾವ ನಿಜವಾಗಿಯೂ ಪ್ರಚಂಡ ದಂಡನಾಯಕ. ಮೊದಲು ದೊರೆಗಳಿಗೆ ಈ ದೈವೀಪುರುಷನ ಭೇಟಿ ಮಾಡಿಸು. ಆ ಮಹಾರಾಯ, ಪವಾಡಪುರುಷ ನನ್ನ, ಈ ಅದ್ಭುತವನ್ನ ನೋಡಿ, ಸಂತೋಷಪಡಲಿ. ಹಾಗೆ ಈ ಪವಾಡಾನ ಅರಮನೆ ಬೊಕ್ಕಸಕ್ಕೆ ಒಪ್ಪಿಸಿ ಬಾ. ಇಂಥದ್ದೆಲ್ಲಾ ಅರಮನೆ, ಗುರುಮನೇ ಲಿರಬೇಕೇ ಹೊರತು, ನಮ್ಮಂಥ ಸಾಮಾನ್ಯರ ಹತ್ತಿರ ಇರಬಾರದು'

ಎಂದರು ಪೋಚಿಕಬ್ಬೆ.

'ನಿಜ....ನಿಜ ಅವ್ವ....ನೀವಾಡಿದ್ದು ಸತ್ಯ. ದೊರೆ ಕಣ್ಣು ನೋಡಬೇಕಾದ್ದು ಇದು.'

—ಎಂದು ಹೇಳಿ.

'ಇದನ್ನು ಮೊದಲು ನಮಗೆ ತೋರಿಸಿದ ಮರ್ಯಾದೆಗೆ ನಿಮಗಿರಲಿ.'

—ಎಂದು ತಮ್ಮ ಕತ್ತಿನಲ್ಲಿದ್ದ ಹಾರ, ಕೈಯಲ್ಲಿದ್ದ ನವರತ್ನ ಕಡಗಗಳನ್ನು ತೆಗೆದು ಗೌರಾಚಾರಿಗೆ ತೊಡಿಸಿದರು. ಆ ವೇಳೆಗೆ ಒಳಗೆ ಹೋದ ಲಕ್ಷ್ಮೀಮತಿಯೂ, ಒಂದು ಮೊರದ ತುಂಬಾ ಮುತ್ತು ರತ್ನಗಳನ್ನು ತುಂಬಿಕೊಂಡು ತಂದು—

'ಬಡವರ ಸೇವೆ, ಒಪ್ಪಿಸಿಕೊಳ್ಳಿ.'

ಎಂದು ಗೌರಾಚಾರಿಯ ಇದುರಿನಲ್ಲಿ ಸುರಿದಳು.

ಅದನ್ನು ನೋಡಿ, ಆಕಾಶದರ್ಶಿಯ ಮೂಲಕ ನೋಡಿದಾಗ, ಅವರೆಲ್ಲರಿಗೂ ಆದಷ್ಟೇ ಆಶ್ಚರ್ಯ ಗೌರಾಚಾರಿಗೂ ಆಯಿತು. ಅವರ ಒಳ್ಳೆಯತನದಿಂದ, ಮೂಡಿದ ಸಂತೋಷವನ್ನು ಹೃದಯದಲ್ಲೇ ಭರಿಸಲಾಗದೆ, ಎಳೆಯ ಮಗುವಿನ ಹಾಗೆ ಅತ್ತುಬಿಟ್ಟ.

'ಇವತ್ತು ಸತ್ತ ನನ್ನ ಅಪ್ಪ ಅವ್ವೋರ ಮತ್ತೆ ಕಂಡಹಾಗಾಯಿತು. ಇದೆಲ್ಲಾ ನನ್ನಂಥವರಿಗೆ ಯಾಕೆ ? ನಿಮ್ಮ ಪ್ರೀತಿಯೇ ನನಗೆ ನವನಿಧಿ. ಈ ಮುತ್ತು ರತ್ನ ತಗೊಂಡು, ನಿಲುವಾಭರಣ ಮಾಡಿಸಿ ಇಟ್ಟುಕೊಂಡು ಸಾಕ್ಷಾತ್ ಮಹಾಲಕ್ಷ್ಮಿಯಾಗು ನನ್ನವ್ವ.'

—ಎಂದು ಬಿಕ್ಕುತ್ತಲೇ ಲಕ್ಷ್ಮೀಮತಿಗೆ ಹೇಳಿದ.

ಇದೆಲ್ಲವನ್ನೂ ಮಾತುಬರದ ಹಸುಳೆಯಂತೆ ಸುಮ್ಮನೆ ನೋಡುತ್ತಿದ್ದ ಬೋಕಿಮಯ್ಯ, ಕರುವಿಟ್ಟ ಬೊಂಬೆಯಂತೆ, ಕಣ್ಣರಳಿಸಿ ಕುಳಿತಿದ್ದ.

೫

# ರಥ ಪರೀಕ್ಷೆ

ಗಂಗರಾಜರಿಂದ ಗೌರಾಚಾರಿಯ ಸಂಶೋಧನೆಗಳ ವಿಚಾರವನ್ನರಿತ ವಿಷ್ಣುವರ್ಧನರಾಯ, ಆತನನ್ನು ಅರಮನೆಗೇ ಕರೆಸಿಕೊಂಡು ರಾಜಾಧಿರಾಜರನ್ನು ಸತ್ಕರಿಸುವಂತೆ, ಮರ್ಯಾದೆ ಮಾಡಿ ಸತ್ಕರಿಸಿದ.

ತನ್ನ ತವರೂರಿನ ನಿಪುಣನೊಬ್ಬನ ಸಾಧನೆ, ಪ್ರತಿಭೆಗಳಿಗೆ ಮನಸೋತ ರಾಜಪತ್ನಿ ಶಾಂತಲಾದೇವಿ, ಗೌರಾಚಾರಿಯನ್ನು ಅಂತಃಪುರದ ಅತಿಥಿ ಶಾಲೆಯಲ್ಲೇ ಇರಿಸಿಕೊಂಡು, ರಾಜೋಪಚಾರ ಮಾಡಿ, ತನ್ನ ಮನಸ್ಸು ತಣಿಸಿಕೊಂಡಳು.

ಆದರೆ ಗೌರಾಚಾರಿಗೆ ಈ ಉಪಚಾರಗಳಿಂದಲೇ ತೃಪ್ತಿಯಾಗಲಿಲ್ಲ.

'ಅವ್ವಾ, ಈ ಮೈಗೆ ಅಂಬಲಿ ಕುಡಿಸಿದರೇನು, ಅಮೃತ ಎರೆದರೇನು. ನನ್ನ ಜೀವಕ್ಕೆ ಅಷ್ಟರಿಂದ ತೃಪ್ತಿ ಇಲ್ಲ.'—ಎಂದ.

'ನಾವು ಕೊಟ್ಟದ್ದು ಮಾಡಿದ್ದು ನಮ್ಮ ತೃಪ್ತಿಗಾಗಿ ಆಚಾರ್ಯರೇ. ನಿಮ್ಮ ತೃಪ್ತಿಗೆಂದಲ್ಲ. ನಿಮಗೇನು ಬೇಕು ಕೇಳಿ?'

—ಎಂದಳು ಶಾಂತಲಾದೇವಿ.

'ಹೆಗ್ಗಡೆಯವರು ನನ್ನನ್ನು ಕಳಿಸಿದ್ದು, ಉಂಡುಟ್ಟು ಮಲಗಲಿಕ್ಕಲ್ಲ ನನ್ನವ್ವ. ನಾನು ಕೊಚ್ಚಿಕೊಂಡ ಬಡಾಯಿ ನಿಜ ಅಂತ ಮಾಡಿ ತೋರಿಸೋಕೆ ಅವಕಾಶ ಮಾಡಿಕೊಟ್ಟರೆ ಅಷ್ಟೈಶ್ವರ್ಯಾನೂ ಕೊಟ್ಟ ಹಾಗಾಗುತ್ತೆ. ಅಷ್ಟು ಮಾಡಿಸಿ'

—ಎಂದು ಶಾನ್ತಲಾದೇವಿಯನ್ನು ಬೇಡಿದ ಗೌರಾಚಾರಿ.

'ಅಷ್ಟು ಆತುರವೇನು? ಇಷ್ಟು ದಿನ ಬಳಲಿದ ಜೀವ ಈಗಲಾದರೂ ಎರಡು ದಿನ ಹಾಯಾಗಿರಲಿ. ಅಷ್ಟಲ್ಲವಾದರೆ ಪ್ರಯಾಣದ ದಣಿವು ತೀರುವವರೆಗಾದರೂ ವಿಶ್ರಾಂತಿ ತೆಗೆದುಕೊಳ್ಳಿ'

—ಎಂದು ವಿಷ್ಣುವರ್ಧನ, ಶಾನ್ತಲಾದೇವಿಯರು ಒಟ್ಟಾಗಿ ಹೇಳಿದರೂ ಗೌರಾಚಾರಿ ಕೇಳಲಿಲ್ಲ.

'ಅದಾಗದು. ನನ್ನ ಅಳಿಯಂದಿರು ಯುದ್ಧ ಪ್ರಯತ್ನದಲ್ಲಿದಾರೆ. ನೀನೂ ಹೋಗಿ ಮಗನ ಹಾಗೆ ಅವರಿಗೆ ನೆರವಾಗು' ಎಂದು ಹೇಳಿ ಹೆಗ್ಗಡೆಯವರು ನನ್ನನ್ನು ಕಳುಹಿಸಿದರು. ಆ ಕೆಲಸ ಮರೆತು ನಾನು ಹಾಲು ತುಪ್ಪದಲ್ಲಿ ಕೈತೊಳೆದು ಮಲಗಲೇ? ನನ್ನಿಂದ ಹಾಗಿರುವುದು ಸಾಧ್ಯವಿಲ್ಲ. ನನ್ನ ವಿಷಯದಲ್ಲಿ ವಿಶ್ವಾಸವಿದ್ದರೆ, ನಾನು ಕಂಡುಹಿಡಿದುದರಿಂದ ನಿಮಗೆ ಸಹಾಯವಾಗುವುದೆಂದಿದ್ದರೆ, ಕೆಲಸಮಾಡಲು ಅವಕಾಶ ಮಾಡಿಕೊಟ್ಟು ಆ ನಂಬಿಕೆಯ ಕಿರೀಟ ನನ್ನ ತಲೆಯ ಮೇಲಿಡಿ'

—ಎಂದು ಬೇಡಿದ.

ಗೌರಾಚಾರಿಯ ಸಂಶೋಧನೆಗಳ ರಣೋಪಯುಕ್ತತೆಯ ವಿಷಯದಲ್ಲಿ ವಿಷ್ಣುವರ್ಧನನಿಗಾಗಲೀ, ದಂಡನಾಯಕ ಗಂಗರಾಜರಿಗಾಗಲಿ ಯಾರಿಗೂ ಸಂಶಯವಿರಲಿಲ್ಲ.

'ಈ ಹೊತ್ತಿನಲ್ಲೇ ಮಾರಸಿಂಗಮಯ್ಯನವರು ಗೌರಾಚಾರಿಯನ್ನು ಇಲ್ಲಿಗೆ ಕಳುಹಿದುದು, ನಮಗೆ ಗೆಲುವು ಶತಸ್ಸಿದ್ಧವೆಂಬುದಕ್ಕೆ ಸೂಚನೆ. ಎರಡು ದಿನ ತಡವಾದರೂ ಆತನ ಸಂಶೋಧನೆಗಳ ಉಪಯೋಗ ಪಡೆಯುವುದು ಒಳಿತು.'

—ಎಂದು ಗಂಗರಾಜರೂ ಉಳಿದ ಸಚಿವ, ದಂಡನಾಯಕರೂ ಅಭಿಪ್ರಾಯ ಪಟ್ಟಿದ್ದರು.

ಆದರೆ ವಿಷ್ಣುವರ್ಧನನಿಗೇ ಈ ಅವಸರದಲ್ಲಿ ಅಷ್ಟು ರಥಗಳನ್ನು ಬಿಚ್ಚಿ ಮತ್ತೆ ಸರಿಪಡಿಸುವುದಾದೀತೇ ಎಂಬ ಅನುಮಾನವಿತ್ತು. ಹಾಗೇ ಆ ಕೆಲಸಕ್ಕಾಗಿ ನಾವು ದಿನ ದೂಡಿದರೆ, ನಮ್ಮ ಸಂಗ್ರಾಮ ಸಿದ್ಧತೆಯ ವಾರ್ತೆಯನ್ನರಿತ ಚೋಳರೂ ಕೋಟೆಗಳನ್ನು ಬಲಪಡಿಸಿಕೊಂಡು, ನಮ್ಮ ಕಾರ್ಯ ಕಠಿಣವಾದೀತೇನೋ ಎಂಬ ಭೀತಿಯೂ ಇತ್ತು.

ಆದರೆ ಗೌರಾಚಾರಿ—

'ನಮ್ಮಿಂದ ಪ್ರಭು ಕಾರ್ಯದಲ್ಲಿ ತಡವಾಗುವುದು ಬೇಡ. ಪ್ರಭುಗಳು ಜ್ಯೋತಿಷ್ಯರನ್ನು ಕೇಳಿ, ಯುದ್ಧ ಯಾತ್ರೆಯ ಮುಹೂರ್ತ ನಿಶ್ಚಯಿಸಲಿ.

ನಮಗೆ ಒಂದು ವಾರದ ಅವಧಿ ದೊರೆತರೂ ಸಾಕು. ಸಾಕಷ್ಟು ಜನ ಬಡಗಿಗಳು, ಕಮ್ಮಾರರ ನೆರವು ದೊರೆತರೆ ಆ ವೇಳೆಗೆ ಒಂದು ಸಾವಿರ ರಥವನ್ನಾದರೂ ಸಿದ್ಧಪಡಿಸಿಕೊಡುತ್ತೇನೆ. ಈ ಸಮರದಲ್ಲೇ ನನ್ನ ಸಂಶೋಧನೆಯ ಪರೀಕ್ಷೆಯೂ ನಡೆದು ಹೋಗಲಿ'

—ಎಂದು ಹೇಳಿ ಆ ಸಂಶಯ ಭೀತಿಗಳನ್ನೂ ನಿವಾರಿಸಿದ.

ಗಂಗರಾಜರೂ ಆ ಮಾತಿಗೆ ಸಮ್ಮತಿಸಿದರು.

ಎಲ್ಲರೂ ಹಾಗಾಗಬಹುದೆಂದು ಹೇಳಿದುದಕ್ಕೆ ವಿಷ್ಣುವರ್ಧನನೂ ಸಮ್ಮತಿಸಿದ. ದೊರೆಯ ಅಪ್ಪಣೆಯಂತೆ ಗಂಗರಾಜರು ದ್ವಾರಸಮುದ್ರದಲ್ಲಿದ್ದ ಬಡಗಿಗಳು, ಕಮ್ಮಾರರು, ಲೋಹಕರ್ಮಿಗಳೆಲ್ಲರನ್ನೂ ಕಲೆ ಹಾಕಿದುದೇ ಅಲ್ಲದೆ, ಸುತ್ತಮುತ್ತಲ ಗ್ರಾಮ, ನಗರಗಳಲ್ಲಿದ್ದ ಕೆಲಸಗಾರರೆಲ್ಲರನ್ನೂ ಅವಸರವಾಗಿ ರಾಜಧಾನಿಗೆ ಕರೆಯಿಸಿ, ಎಲ್ಲರಿಗೂ ಗೌರಾಚಾರಿ ಹೇಳಿದಂತೆ ಹಗಲಿರುಳೂ ದುಡಿದು ರಥಗಳನ್ನು ನಿರ್ಮಿಸುವಂತೆ ಕಟ್ಟಪ್ಪಣೆ ಮಾಡಿದ. ಕೆಲಸದಲ್ಲಿ ನಿದ್ರೆ, ಆಲಸ್ಯ, ತಾತ್ಸಾರಗಳನ್ನು ತೋರಿದವರಿಗೆ ಕೈ ಕತ್ತರಿಸುವ ಶಿಕ್ಷೆಯನ್ನು ವಿಧಿಸುವುದಾಗಿ ಹೇಳಿ, ಪ್ರತಿಯೊಬ್ಬರಿಗೂ ಅವರವರು ಮಾಡಿದ ಕೆಲಸದ ಪ್ರಮಾಣಕ್ಕೆ ಅನುಗುಣವಾಗಿ, ವೇತನ ಕೊಡುವುದೇ ಅಲ್ಲದೆ, ಆ ಪ್ರಮಾಣಕ್ಕನುಸಾರವಾಗಿ ಉಡುಗೊರೆಗಳನ್ನೂ ಕೊಡುವುದಾಗಿ ತಿಳಿಸಿದ.

ಗಂಗರಾಜನ ಅಪ್ಪಣೆಯಿಂದ ರಾಜಧಾನಿಯ ಹೊರವಳಯದಲ್ಲಿ ನೂರಾರು ಕರ್ಮಶಾಲೆಗಳು ನಿರ್ಮಾಣವಾಗಿ, ಸಾವಿರಾರು ಜನ ಕೆಲಸಗಾರರು ಗೌರಾಚಾರಿಯ ನೇತೃತ್ವದಲ್ಲಿ ಹಗಲಿರುಳೂ ದುಡಿಯಲಾರಂಭಿಸಿದರು. ಕೆಲಸಗಾರರಿಗೆ ಊಟ, ತಿಂಡಿಗಳಿಗೆ ಕೊರತೆಯಾಗದಂತೆ ಅವರಿದ್ದಲ್ಲಿಗೇ ಅದು ಸರಬರಾಯಿ ಆಗುವ ವ್ಯವಸ್ಥೆಯನ್ನು ಗಂಗರಾಜರು ಮಾಡಿದುದೇ ಅಲ್ಲದೆ, ಅಲ್ಲಿ ಏನು ಕೆಲಸ ನಡೆಯುತ್ತಿದೆ ಎಂಬುದು ಬೇರೆಯವರಿಗೆ ತಿಳಿಯದಂತೆ, ಕೆಲಸಗಾರರು ಕೆಲಸ ಬಿಟ್ಟು ಮಾತು, ಅಲೆತದಲ್ಲಿ ಹೊತ್ತು ಕಳೆಯದಂತೆ ಕಾವಲಿರಲು, ಆ ಕರ್ಮಶಾಲೆಗಳ ಸುತ್ತಲೂ ಸೇನೆಯ ಕಾವಲು ಹಾಕಿದರು.

ಆದರೆ ಪ್ರಭು ಭಕ್ತಿ, ದೇಶಭಕ್ತಿಗಳಿಂದ ಪ್ರಚೋದಿತರಾದ ಆ ಕೆಲಸಗಾರರಿಗೆ ಯಾವ ಭಯ, ಬಹುಮಾನದ ಪ್ರೋತ್ಸಾಹವೂ ಅಗತ್ಯವಿರಲಿಲ್ಲ.

ಯುದ್ಧದಲ್ಲಿ ತಮ್ಮ ದೊರೆ ಗೆಲ್ಲಬೇಕು, ಎನ್ನುವ ಶ್ರದ್ಧೆಯೊಂದಿಗೆ ಹೊಸದೊಂದನ್ನು ಆದಷ್ಟು ಬೇಗ ಮಾಡಿ ತೋರಿಸುವ ಉತ್ಸಾಹವೂ ಬೆರೆತು, ಮಿಂಚಿನ ವೇಗದಲ್ಲಿ ಕೆಲಸಗಳು ನಡೆದವು. ದೇವತಾ ಪೂಜೆ, ವಿಶ್ವಕರ್ಮ, ಮಯ ಮೊದಲಾದ ದೇವಶಿಲ್ಪಿಗಳ ಆರಾಧನೆಗಳ ಬಳಿಕ, ಕುಲುಮೆಗಳಲ್ಲಿ ಹೊತ್ತಿದ ಬೆಂಕಿ, ಹರಿದಾಡಿ ದೂರಕ್ಕೂ ಕೇಳಿಸುವಂತೆ ಸುಯ್ಯುವ ರಾಕ್ಷಸಾಕಾರದ ಕಿಡಿಗಳು ನೀಡಿದ ಗಾಳಿಯನ್ನಾಂತು ಪ್ರಜ್ವಲಿಸಿತು. ಕಬ್ಬಿಣವನ್ನು ಕಾಸಿ, ಕುಟ್ಟುವ ಸದ್ದು, ಮರಮುಟ್ಟುಗಳನ್ನು ಕೊಯ್ಯುವ, ಜೋಡಿಸಿ ಬಿಗಿ ಮಾಡುವ ಸದ್ದು ಹತ್ತಾರು ಗಾವುದಗಳ ದೂರಕ್ಕೆ ಹರಡಿತು.

ಕೆಲಸ ಆರಂಭವಾದ ಎರಡನೆಯ ದಿನವೇ ತಾನು ಯೋಚಿಸಿದ ಲೋಹಪಟ್ಟಿಕೆಗಳಿಂದ ಸಜ್ಜಾದ ರಥವೊಂದನ್ನು ನಿರ್ಮಿಸಿ, ಪರೀಕ್ಷೆಗೆಂದು ದೊರೆಯ ಬಳಿ ತಂದ.

ಆ ರಥವನ್ನು ಯಾರು ಆರೋಹಿಸಿ, ಪರೀಕ್ಷಿಸುವರೆಂಬ ಮಾತು ಚರ್ಚೆಗೆ ಬಂದಾಗ, ಕುಮಾರವಿಷ್ಣುದಂಡನಾಯಕ—

'ಸಮರಾಧಿಪತ್ಯವಂತೂ ಹಿರಿಯರಿಗಾಯಿತು. ಈ ರಥ ಪರೀಕ್ಷೆಯ ಮನ್ನಣೆಯಾದರೂ ನಮಗಾಗಲಿ. ನಾನೇ ರಥಾರೋಹಣ ಮಾಡುತ್ತೇನೆ'

ಎಂದು ಹೇಳಿದ.

ಕುಮಾರವಿಷ್ಣುದಂಡನಾಯಕನ ವಿಷಯದಲ್ಲಿ ವಿಷ್ಣುವರ್ಧನನಿಗಿದ್ದ ಭಾವನೆಯನ್ನು ಅರಿತ ಗೌರಾಚಾರಿ—

'ಪ್ರಭು, ಇದು ರಥಪರೀಕ್ಷೆಯಷ್ಟೇ ಅಲ್ಲ. ನಮ್ಮ ಗೌರವ ಪರೀಕ್ಷೆ. ಇದರ ಯೋಗ್ಯತೆ ಇಷ್ಟೇ ಎಂದು ನಿರ್ಣಯವಾಗಬೇಕಾದರೆ, ಸ್ವತಃ ಜೀವಭಯ ಇರುವವರಾಗಲಿ, ಅಥವಾ ಯಾರ ಯೋಗಕ್ಷೇಮದ ವಿಷಯದಲ್ಲಿ ಪ್ರಭುಗಳಿಗೆ ಆಸಕ್ತಿಯಿದೆಯೋ ಅಂಥವರಾಗಲಿ ಓಡಿಸುವುದು ಯುಕ್ತವಾಗಲಾರದು, ಆದುದರಿಂದ, ಜೀವಭಯವನ್ನೂ ಬಿಟ್ಟು, ಪ್ರಭುಗಳ ಪಾದಕ್ಕೆ ತಲೆಯೊಪ್ಪಿಸುವ ಪ್ರತಿಜ್ಞೆ ಮಾಡಿದ ಲೆಂಕರಲ್ಲಿ ಯಾರಾದರೊಬ್ಬರು, ದೊಡ್ಡ ದೊಡ್ಡ ಹಳ್ಳ ತಿಟ್ಟುಗಳ ಮೇಲೆ, ಕಲ್ಲು ಗಿಡಗಳ ಮೇಲೆ, ರಥವನ್ನು ಆದಷ್ಟು ವೇಗದಲ್ಲಿ ಓಡಿಸಲಿ. ಆಗ ಈ ಲೋಹಪಟ್ಟಿಕೆಯಿಂದ ಏನಾದರೂ ಉಪಯೋಗ ಉಂಟೇ ಇಲ್ಲವೇ ಎನ್ನುವುದು ನಿರ್ಣಾಯಕವಾಗಿ ತಿಳಿಯುತ್ತದೆ'

—ಎಂದು ಸಲಹೆ ಮಾಡಿದ.

‘ ಪ್ರಭುಗಳ ಊಳಿಗದಲ್ಲಿರುವವರಲ್ಲಿ, ‘ ದಂಡಪೆಂಡಾರ ’ ವನ್ನು ಹಾಕಿಕೊಂಡವರೊಬ್ಬರೇ ಲೆಂಕರಲ್ಲ. ಅವರ ಉಪ್ಪುಂಡವರೆಲ್ಲರೂ ವೇಳೆವಡಿಚರೇ. ಆದುದರಿಂದ ನಮ್ಮ ನಮ್ಮಲ್ಲಿ ಭೇದ ಕಲ್ಪಿಸಲಾಗದು. ಉಳಿದವರಿಗೆ ದೊರಕುವ ಗೌರವ ನಮಗೆ ದೊರತರೇನು ತಪ್ಪು ? ಆಳಿಗೆ ಇಲ್ಲದ ಜೀವಭೀತಿ ನಮಗುಂಟೇ ? ಆಚಾರ್ಯರಿಗೆ ನಮ್ಮ ಸಾಹಸದ ವಿಷಯದಲ್ಲಿ ಇರುವ ಸಂಶಯವನ್ನು, ನಮಗೆ ರಥಾರೋಹಣ ಮಾಡಲು ಅಪ್ಪಣೆಕೊಟ್ಟು ಪ್ರಭುಗಳು ನಿವಾರಿಸಬೇಕು.

—ಎಂದು ಹಟ ಹಿಡಿದು ಕೇಳಿದ ಕುಮಾರವಿಷ್ಣು.

‘ ಅದೂ ಯುಕ್ತವೇ. ಇದರ ಅತಿಮಿತಿ ಹೀಗೆಂದು ತಿಳಿಯದ ಹೊಸ ವಸ್ತುವಿನ ಪರೀಕ್ಷೆಗೆ ಅವರಿವರ ಜೀವವನ್ನು ಒಡ್ಡುವುದಕ್ಕಿಂತ ನಮ್ಮವರ ಮೇಲೆ ಆ ಪ್ರಯೋಗ ನಡೆಯುವುದು ಒಳಿತು ’

—ಎಂದು ಹೇಳಿ ವಿಷ್ಣುವರ್ಧನ ಕುಮಾರ ವಿಷ್ಣುವೇ ರಥಪರೀಕ್ಷೆ ಮಾಡುವುದಕ್ಕೆ ಒಪ್ಪಿದ.

ಅದರಂತೆಯೇ ಅದೇ ದಿನ ಸಂಜೆ ಪುಷ್ಪಗಿರಿಯ ಮುಂದಿನ ವಿಶಾಲವಾದ ಬಯಲಿನಲ್ಲಿ ರಥ ಪರೀಕ್ಷೆಗೆ ಸಿದ್ಧತೆಗಳು ನಡೆದವು.

ಬಯಲಿನ ಒಂದು ಬದಿಯಲ್ಲಿ ನಿರ್ಮಿಸಿದ ವೇದಿಕೆಯ ಮೇಲೆ ವಿಷ್ಣುವರ್ಧನ, ತನ್ನ ಪಟ್ಟಮಹಿಷಿ ಶಾನ್ತಲಾದೇವಿಯೊಂದಿಗೆ ಉಚಿತಾಸನದಲ್ಲಿ ಮಂಡಿಸಿದ. ಅವನ ಇಬ್ಬದಿಯಲ್ಲೂ, ಗಂಗರಾಜ, ಪುಣಿಸಮಯ್ಯ ಮೊದಲಾದ ಸಚಿವ ದಂಡನಾಯಕರೂ, ಪಸಾಯಿಗರೂ, ನಗರ ಮುಖ್ಯರೂ, ಸೇನೆಯ ಅಧಿಕಾರಿಗಳೂ ಕುಳಿತರು.

ವೇದಿಕೆಯ ಇದುರಿನಲ್ಲಿ, ಅಷ್ಟು ದೂರದಲ್ಲಿ ಬಹು ವೇಗವಾಗಿ ಓಡಬಲ್ಲಂಥ ಶಕ್ತಿಶಾಲಿ ಅಶ್ವಗಳನ್ನು ಕಟ್ಟಿದ ರಥ ಸಿದ್ಧವಾಗಿತ್ತು.

ಪುರೋಹಿತರು ನೂತನ ರಥದ ಪೂಜೆಯನ್ನು ಮಾಡಿ, ಕುದುರೆಗಳ ಹಣೆಗೆ ಕುಂಕುಮವನ್ನಿಟ್ಟ ಬಳಿಕ, ಗೌರಾಚಾರಿಯೂ ರಥದ ಬಳಿಗೆ ತೆರಳಿ, ಅದಕ್ಕೆ ಕುಂಕುಮವಿಟ್ಟು ನಮಸ್ಕರಿಸಿ—

‘ ತುಂಬಿದ ಸಭೆಯಲ್ಲಿ ನಮ್ಮ ಮರ್ಯಾದೆಯನ್ನು ಕಾಲಕಸ

ಮಾಡಬೇಡ '

—ಎಂದು ಬೇಡಿ, ದೊರೆಯ ಬಳಿಗೆ ಬಂದು—

' ಇನ್ನು ಪರೀಕ್ಷೆ ನಡೆಯಲಿ '

—ಎಂದು ಕೇಳಿದರು.

ಆ ಹೊತ್ತನ್ನೇ ಕಾಯುತ್ತಿದ್ದ ಕುಮಾರವಿಷ್ಣುದಂಡನಾಯಕ, ಅರಸು-ಅರಸಿತಿಯರಿಗೆ ವಂದಿಸಿ, ಅವರ ಹರಕೆಯನ್ನು ಪಡೆದು, ರಥದ ಬಳಿ ನಡೆದು, ರಥ ವಂದನೆ ಸಲ್ಲಿಸಿ, ಬಲಗಾಲು ಮುಂದಾಗಿ ರಥವನ್ನೇರಿ, ಸಾರಥಿ ಸ್ಥಾನ ದಲ್ಲಿ ಕುಳಿತು, ಅದುವರೆಗೂ ಕುದುರೆಗಳನ್ನು ಹಿಡಿದ ಆಳುಗಳಿಂದ ವಾಘೆ ಯನ್ನು ತನ್ನ ಕೈಗೆ ತೆಗೆದುಕೊಂಡು, ರಥವನ್ನು ಎಳೆಯಲು ಆರೋಹಿಯಷ್ಟೇ ಉತ್ಸುಕವಾಗಿ ಮುಂಗಾಲು ಗೊರಸುಗಳಿಂದ ನೆಲವನ್ನು ಬಗೆಯುತ್ತಿದ್ದ ಕುದುರೆಗಳ ಬೆನ್ನನ್ನು ಚಪ್ಪರಿಸಿದ.

ಅಶ್ವ ಹೃದಯವನ್ನು ಬಲ್ಲ ಕುಮಾರವಿಷ್ಣುದಂಡನಾಯಕನ ಹಸ್ತ ಚೋದನೆಯಿಂದ ಉತ್ತೇಜಿತವಾದ ಆ ಜಾತ್ಯಶ್ವಗಳು, ಗಾಳಿ ವೇಗದಲ್ಲಿ ರಥವನ್ನು ಎಳೆದವು.

ತಗ್ಗು ದಿಣ್ಣೆಗಳ ಮೇಲೆ, ಮಿಂಚಿನ ವೇಗದಲ್ಲಿ ಓಡುವ ರಥ ನೋಟಕರ ಎದೆಯಲ್ಲಿ ' ಎಲ್ಲಿ ಉರುಳುವುದೋ, ಯಾವಾಗ ಚಕ್ರಗಳ ಕೀಲು ಕಳಚಿ ಬೀಳುವುದೋ, ಕುದುರೆಗಳ ಕಾಲೆಲ್ಲಿ ಮುರಿಯುವುದೋ, ಆರೋಹಿಯೇ ಎಲ್ಲಿ ಉರುಳುವನೋ ' ಎಂಬ ಭೀತಿ, ಕಾತರ, ವಿಸ್ಮಯ, ಹರ್ಷ ಮೊದಲಾದ ನಾನಾ ಭಾವನೆಗಳನ್ನು ಮೂಡಿಸಿತು.

ಆ ರಥದ ವೇಗವಾದ ಓಟದಿಂದ ಮೂಡಿದ ಉತ್ಸಾಹದಿಂದ, ಅರೆ ಯೆದ್ದು ಮಂಡಿಯೂರಿ ಕುಳಿತು ವಿಷ್ಣುವರ್ಧನನೂ, ತುಟಿಕಚ್ಚಿ ' ಆಕಾಶ ದರ್ಶಿ'ಯ ಮೂಲಕ ರಥದ ಓಟವನ್ನು ವೀಕ್ಷಿಸುತ್ತಿದ್ದ.

ಕುಮಾರ ವಿಷ್ಣುದಂಡನಾಯಕನ ರಥಾರೋಹಣ ಚಾತುರಿಯಿಂದ ಮೂಡಿದ ಉತ್ಸಾಹ-ಉದ್ವೇಗಗಳಿಂದ ತಾನು ಓಲಗದಲ್ಲಿರುವುದನ್ನೂ ಮರೆತು, ದೊರೆಯ ತೋಳನ್ನು ತಬ್ಬಿ, ಮೆಚ್ಚಿಗೆಯನ್ನು ಹತ್ತಿಕ್ಕಲಾರದೆ, ಶಾನ್ತಲಾ ದೇವಿಯೂ ' ಭಲೆ ವಿಷ್ಣು, ಭಲೆ ಕುಮಾರ ' ಎಂದು ಹೊಗಳಿದಳು.

ಗೌರಾಚಾರಿಯಂತೂ ಕಣ್ಣೆವೆಗಳನ್ನು ಅಲುಗಿಸದೆಯೇ, ಬಿಡುಗಣ್ಣ

ನಾಗಿ ರಥದ ಓಟವನ್ನು ನೋಡುತ್ತಿದ್ದ.

ನೋಡುವವರ ಎದೆಯಲ್ಲಿ ಅಚ್ಚರಿ-ಮೆಚ್ಚುಗೆ ಮೂಡಿಸುವಂತೆ, ಬಯಲನ್ನು ಹತ್ತಾರು ಬಾರಿ ಸುತ್ತಿ, ಕುಮಾರವಿಷ್ಣುದಂಡನಾಯಕ ಮತ್ತೆ ರಥವನ್ನು, ಅದು ಮೊದಲಿದ್ದ ಎಡೆಯಲ್ಲಿಯೇ ತಂದು ನಿಲ್ಲಿಸಿ, ಬಾಯಿಂದ ನೊರೆಗಾರುತ್ತಾ, ಬುಸುಗರೆಯುತ್ತಿದ್ದ ಕುದುರೆಗಳ ಬೆನ್ನು ಚಪ್ಪರಿಸಿ, ತಿನ್ನಲು ಹಿಡಿ ಚಿಗುರು ಹುಲ್ಲನ್ನು ಕೊಟ್ಟು, ಏನೂ ಆಯಾಸವಾಗದವನಂತೆ, ನಸು ನಗುತ್ತಾ ದೊರೆಯ ಬಳಿಗೆ ನಡೆದು ಬಂದ.

ರಥ ನಿಲ್ಲುತ್ತಿದ್ದ ಹಾಗೆ, ಗೌರಾಚಾರಿ ರಥದ ಬಳಿ ಓಡಿ, ಗಾಲಿಯ ಮೇಲಿನ ಲೋಹ ಪಟ್ಟಿಕೆಗಳ ಗತಿ ಏನಾಗಿದೆಯೋ ಎಂದು 'ಪರೀಕ್ಷಿಸಿದ. ಆಗತಾನೇ ಕುಲುಮೆಯಿಂದ ಹೊರ ತೆಗೆದಂತೆ ಥಳಥಳಿಸುತ್ತಿದ್ದ ಲೋಹ ಪಟ್ಟಿಕೆಗಳು, ಯಾವ ಬಗೆಯ ಅಪಾಯುವಾಗದೆ, ಜೋಡಣೆ ಕೆಡದೆ ಇದ್ದುದನ್ನು ನೋಡಿ, ಆತನಿಗೆ ಅಪಾರ ಆನಂದವಾಯಿತು. ಆ ಆನಂದದಲ್ಲೇ—

'ನನ್ನ ಮರ್ಯಾದೆಯನ್ನುಳಿಸಿದೆ ಕಂದಾ'

—ಎಂದು ಮಗುವಿಗೆ ಮುತ್ತಿಡುವಂತೆ ಆ ಲೋಹ ಪಟ್ಟಿಕೆಗೆ ಮುತ್ತಿಟ್ಟ.

ತನ್ನ ಕೃತಿಯ ಬಗ್ಗೆ ಆತ ವ್ಯಕ್ತಪಡಿಸಿದ ಪ್ರೇಮ, ಅಭಿಮಾನವನ್ನು ಕಂಡು ವಿಷ್ಣುವರ್ಧನನ ಕಣ್ಣಲ್ಲಿ ನೀರಾಡಿತು.

'ದೇಶ ಉಳಿಯುವುದೂ, ಬೆಳೆಯುವುದೂ, ತಮ್ಮ ಕೃತಿಯ ಬಗ್ಗೆ ಇಂಥ ಅಭಿಮಾನವನ್ನುಳ್ಳ ಪ್ರತಿಭಾಶಾಲಿಗಳಿಂದಲೇ'

—ಎಂದು ತನಗೆ ತಾನೇ ಹೇಳಿಕೊಂಡು, ಸಮೀಪಕ್ಕೆ ಬಂದ ಕುಮಾರ ವಿಷ್ಣುದಂಡನಾಯಕನತ್ತ ತಿರುಗಿ, ಆತುರವಾಗಿ—

'ಏನಾದರೂ ವ್ಯತ್ಯಾಸ ಕಂಡಿತೋ?'

—ಎಂದು ಕೇಳಿದ.

'ಈ ಉಪಕರಣಕ್ಕಾಗಿ ಗೌರಾಚಾರ್ಯರಿಗೆ ಏನು ಮೆಚ್ಚುಗೆ ಕೊಟ್ಟರೂ ಸಾಲದು! ಎಂಥ ತಿಟ್ಟಿನ ಮೇಲೆ ಎಷ್ಟು ವೇಗವಾಗಿ ಓಡಿಸಿದರೂ, ರಥ ಉಯ್ಯಾಲೆಯಂತೆ ಆಡುತ್ತದೆಯೇ ಹೊರತು, ಮೈಗೆ ಪೆಟ್ಟಾಗುವುದಿರಲಿ, ಕುಡಿದ ನೀರೂ ಕದಲುವುದಿಲ್ಲ. ಇಂಥ ರಥವಿದ್ದರೆ ಹೊತ್ತು ಮೂಡುವಾಗ

ದ್ವಾರಸಮುದ್ರ ಬಿಟ್ಟರೆ, ಹೊತ್ತು ನೆತ್ತಿಯ ಮೇಲೆ ಬರುವ ವೇಳೆಗೆ ತಲಕಾಡಿನ ಬಾಗಿಲಿನಲ್ಲೇ ಪಾಳಯ ಮಾಡಬಹುದು. ಅಷ್ಟು ದೂರ ಹೋದರೂ, ಕುದುರೆಗಳಿಗಾಗಲಿ ರಥದಲ್ಲಿ ಕುಳಿತವರಿಗಾಗಲಿ, ರಥವನ್ನು ನಡೆಸುವವರಿಗಾಗಲಿ ಕೊಂಚವೂ ಶ್ರಮವಾಗುವುದಿಲ್ಲ'

—ಎಂದು ಕುಮಾರವಿಷ್ಣು, ಉತ್ಸಾಹದಿಂದ ವಿಷ್ಣುವರ್ಧನನ ಪ್ರಶ್ನೆಗೆ ಉತ್ತರವಿತ್ತ.

ಆ ಮಾತನ್ನು ಕೇಳಿ ವಿಷ್ಣುವರ್ಧನನಿಗೆ, ರಥದ ಅಡಿಭಾಗದಲ್ಲಿ ಚಕ್ರದ ಮೇಲೆ ಕುಳಿತ ಆ ಲೋಹಪಟ್ಟಿಕೆ ನಿರ್ಜೀವ ವಸ್ತುವಿನಂತೆ ಕಾಣದೆ, ತನ್ನ ವಿಜಯ ಸಾಧನೆಗಾಗಿ ದೇವರು ತಾನೇ ಕಳಿಸಿದ ವರದಾನದಂತೆ ಕಂಡಿತು. ಆ ಭಾವದಿಂದ ಉದ್ದೀಪಿತವಾದ ಕಣ್ಣುಗಳ ಇದಿರು, ಮಿಂಚಿನ ವೇಗದ ನೂರು ದಾಳಿಗಳು ಕಂಡು ಮರೆಯಾದವು.

ಆ ಉಪಕರಣವನ್ನು ಸೃಜಿಸಿದ ಗೌರಾಚಾರಿಗೆ ಯುಕ್ತವಾದ ಉಡುಗೊರೆಗಳನ್ನು ವಿಷ್ಣುವರ್ಧನ ಕೊಟ್ಟಬಳಿಕ, ಅಂದಿನ ಓಲಗ ಕದಲಿತು.

ಅದಾದ ಮೂರನೆಯ ದಿನಕ್ಕೇ ಗಂಗರಾಜರ ಕುಮಾರ ಬೊಪ್ಪಣ್ಣ ದಂಡನಾಯಕ, ಗೌರಾಚಾರ್ಯನಿಂದ ನಿರ್ಮಿತವಾದ 'ಸರ್ಪರಜ್ಜು'ವಿನಿಂದ ಸಂಯೋಜಿತವಾದ ರಥ ಪರೀಕ್ಷೆಮಾಡಿ, ಆ ವಿಷಯದಲ್ಲೂ ಗೌರಾಚಾರಿಯ ಹೇಳಿಕೆ ಸುಳ್ಳಲ್ಲವೆಂಬುದನ್ನು ಸಕಲರಿಗೂ ಮನವರಿಕೆ ಮಾಡಿಕೊಟ್ಟ.

ಆ ಪರೀಕ್ಷೆಯಿಂದ 'ಸರ್ಪರಜ್ಜು'ವಿನ ಬಳಕೆಯಿಂದ ರಥದ ಓಟ ಸರಾಗವಾಗುವುದೇ ಅಲ್ಲದೆ, ಗಾಲಿಗಳ ಸವೆತವೂ ತಪ್ಪುವುದೆಂಬುದು ಅರಿವಾಗಿ, ವಿಷ್ಣುವರ್ಧನನಿಗೆ ಗೌರಾಚಾರಿಗೆ ಏನು ಮೆಚ್ಚು ಕೊಟ್ಟರೂ ತೃಪ್ತಿಯಾಗದಷ್ಟು ಸಂತೋಷವಾಯಿತು.

೬

## 'ಆಳಿಂ ಮುನ್ನಿರಿವೆ'

ಗೌರಾಚಾರಿಯ ಮಾತಿನಂತೆ, ಒಂದು ವಾರದೊಳಗಾಗಿ ಸಾಕಷ್ಟು ಸಂಖ್ಯೆಯಲ್ಲಿ ಹೊಸ ರಥಗಳು ನಿರ್ಮಾಣವಾಗಿ, ಆ ರಥಗಳು ಸೇನೆಗೆ ಹಂಚಲ್ಪಟ್ಟವು. ವಿಷ್ಣುವರ್ಧನ ಒಂದು ದಿನ ವಿಶೇಷ ಓಲಗ ನೆರೆಸಿ, ಗೌರಾಚಾರ್ಯರಿಗೂ, ರಥ ನಿರ್ಮಾಣಕಾರ್ಯದಲ್ಲಿ ಹಗಲಿರುಳೂ ಶ್ರಮಿಸಿದ ಬಡಗಿ, ಕಮ್ಮಾರ, ಅಕ್ಕಸಾಲಿ ಮೊದಲಾದ ಹಲವು ವೃತ್ತಿಯವರಿಗೂ, ಅವರನ್ನು ಅಭಿವಂದಿಸಿ ಪಾರಿತೋಷಗಳನ್ನಿತ್ತ.

ಉಡುಗೊರೆಗಳನ್ನು ಪಡೆದ ಸಹಸ್ರಾರು ಜನರಲ್ಲಿ ಒಬ್ಬೊಬ್ಬರೂ ' ಇಂಥ ಉಡುಗೊರೆ ಸಿಗುವುದೆಂದು ನಾವು ಊಹಿಸಿರಲಿಲ್ಲ ' ಎಂದುಕೊಂಡರೇ ವಿನಾ ' ಇಷ್ಟೆಯೇ ? ' ಎಂದು ಗೊಣಗುವವರು ಒಬ್ಬರೂ ಇರಲಿಲ್ಲ.

ಆ ಓಲಗದಲ್ಲಿ ಗೌರಾಚಾರಿಗಾದ ಮರ್ಯಾದೆಯನ್ನು ಕಂಡ ಎಷ್ಟೋ ಜನ ತಾವೂ ಅವರಂತೆಯೇ ಏನಾದರೂ ಹೊಸದನ್ನು ಕಂಡುಹಿಡಿದು ಅಂಥ ಮೆಚ್ಚುಗೆ, ಮನ್ನಣೆ ಪಡೆಯಬೇಕು ಎಂದುಕೊಂಡು, ಏನು ಕಂಡುಹಿಡಿಯುವು ದೆಂಬ ಯೋಚನೆಗೆ ತೊಡಗಿದರು.

ಹೊಸ ರಥಗಳನ್ನು ಪಡೆದ ಸೇನೆ ' ಎಂದು ದಂಡಯಾತ್ರೆ ಆರಂಭವಾದೀತೋ ? ಎಂದು ಅವನ್ನು ಶತ್ರುಸೇನೆಯ ಮುಂದೆ ಮೆರೆಸಿ, ಅವರನ್ನು ಮುರಿದೇವೋ ' ಎಂದು ಕಾತರಪಡತೊಡಗಿತು.

ಆ ಸೇನೆಯಂತೆ ದೊರೆಯೂ ದಂಡಯಾತ್ರೆಯ ಆರಂಭ ದಿನವನ್ನು ನೆನೆದು ಕನಸು ಕಾಣತೊಡಗಿದ.

ಗಂಗರಾಜರೂ ಅಷ್ಟೇ ಆತುರವಾಗಿ ಆ ಸಿದ್ಧತೆಯಲ್ಲಿದ್ದರು.

ಸಚಿವ ಪರಿವಾರ, ದಂಡನಾಯಕರ ಮಂಡಲಿಯಲ್ಲಿ ವಿಚಾರ ನಡೆಸಿ, ಗಂಗರಾಜರು ತಲಕಾಡಿನತ್ತ ನಡೆಯುವ ಸೇನೆಗೆ ತಮ್ಮ ಆಧಿಪತ್ಯ,

ಕೊಂಗುನಾಡು, ನೀಲಪರ್ವತ ಪ್ರಾಂತದ ದಾಳಿ, ಪುಣಿಸಮಯ್ಯನವರ ಆಧಿಪತ್ಯದಲ್ಲಿ ನಡೆಯಬೇಕು; ನಿಗರಿಲಿ ಚೋಳ ಮಂಡಲದತ್ತ ನಡೆಯುವ ಸೇನೆ ರಾಜಸಹೋದರ ಉದಯಾದಿತ್ಯರ ನಾಯಕತ್ವದಲ್ಲಿ ನುಗ್ಗಬೇಕು—ಎಂದು ತೀರ್ಮಾನಿಸಿದರು.

ಕುಮಾರವಿಷ್ಣುದಂಡನಾಯಕ, ಕುಮಾರಬೊಪ್ಪಣದಂಡನಾಯಕ, ಕೊಣೆಯ ಶಂಕರದಂಡನಾಯಕ, ಚಾಮರಾಜದಂಡನಾಯಕ, ಮೊದಲಾದವರು ಯಾರು ಯಾರಿಗೆ ಸಹಕರಿಸಬೇಕು, ಒಂದೊಂದು ಸೀಳಿಗೂ ಎಷ್ಟು ರಥ, ಆನೆ, ಕುದುರೆ, ಪದಾತಿಗಳ ದಳವೆಂದೂ ನಿಶ್ಚಯಮಾಡಿದರು.

ಈ ಮೂರು ಸೀಳು ಸೇನೆ, ಚೋಳ ಮಂಡಲ ದಿಗ್ವಿಜಯದಲ್ಲಿ ತೊಡಗಿದಾಗ, ಮರಿಯಾನೆದಂಡನಾಯಕ, ಭರತದಂಡನಾಯಕರು, ರಾಜಧಾನಿಯಲ್ಲಿದ್ದು ಅಲ್ಲಿಯ ರಕ್ಷಣೆಯನ್ನೂ, ಯುದ್ಧ ನಿರತವಾದ ಸೇನೆಗೆ ಅಗತ್ಯವಾದ ವಸ್ತುಗಳನ್ನೂ ಸರಬರಾಯಿ ಮಾಡುವ ಕೆಲಸವನ್ನು ನಿರ್ವಹಿಸಬೇಕೆಂದೂ, ಗಂಗರಾಜರು ಗೊತ್ತುಪಡಿಸಿ, ತಾವು ಮಾಡಿದ ಏರ್ಪಾಟುಗಳೆಲ್ಲವನ್ನೂ ದೊರೆಗೆ ವರದಿಮಾಡಿ, ಆತನ ಒಪ್ಪಿಗೆ ಪಡೆಯಲೆಂದು, ವಿಷ್ಣುವರ್ಧನನನ್ನು ಅರಮನೆಯಲ್ಲಿ ಹೋಗಿ ಕಂಡರು.

ಗಂಗರಾಜರು ತನ್ನನ್ನು ಕಾಣಲು ಅರಮನೆಯ ಬಳಿ ಬಂದುದನ್ನು ಮನೆವೆಗ್ಗಡೆಯವರು ಕಳುಹಿಸಿದ ಪರಿಚಾರಿಕರಿಂದ ತಿಳಿದು ವಿಷ್ಣುವರ್ಧನ ಪ್ರಧಾನಿಗಳನ್ನು ಅಂತಃಪುರಕ್ಕೇ ಕರೆದು ತರಲು ಅಪ್ಪಣೆ ಮಾಡಿದ.

ಆ ಹೊತ್ತಿನಲ್ಲಿ ಪತಿಯೊಂದಿಗೆ ಚದುರಂಗದಾಟವಾಡುತ್ತಿದ್ದ ಶಾನ್ತಲಾದೇವಿ ಗಂಗರಾಜರು ದೊರೆಯೊಡನೆ ಅವಸರದ ರಾಜಕಾರಣವನ್ನು ಚರ್ಚಿಸಲು ಬಂದಿರುವರೆಂಬುದನ್ನು ಕೇಳಿ ತಾನಿದ್ದು ಅವರ ಮಾತಿಗೆ ಆತಂಕ ತರಬಾರದೆಂದು ಯೋಚಿಸಿ, ಹಾಸು ಕಾಯಿಗಳನ್ನು ಬದಿಗಿರಿಸಿ—

'ಪ್ರಧಾನರೊಂದಿಗೆ ಮಾತುಕತೆಗಳು ಮುಗಿದ ಬಳಿಕ ಮತ್ತೆ ಕಾಣಿಸಿಕೊಳ್ಳುತ್ತೇನೆ.'

—ಎಂದು ಅಲ್ಲಿಂದ ಹೋಗಲು ಯತ್ನಿಸಿದಳು.

ಆಕೆಯ ಮಾತು ಕೇಳಿ, ಏನೊ ಯೋಚನೆ ಮಾಡಿದ ವಿಷ್ಣುವರ್ಧನ 'ನೀನು ಹೋಗುವುದು ಬೇಡ ದೇವಿ. ಇಲ್ಲೇ ಇರು'—ಎಂದ.

'ನಾನಿದ್ದರೆ ನಿಮ್ಮ ಮಾತು ಕಥೆಗಳಿಗೆ ಅಡ್ಡಿಯಾಗದೇ ?'

'ಊಹೂ. ಮಾತು ಕಥೆಗಳಲ್ಲಿ ನಾನು ಲೆಕ್ಕಹಾಕಿರುವ ಮಾತೇನಾದರೂ ಬಂದರೆ, ನಿನ್ನಿಂದ ನನಗೆ ಸಹಾಯವಾಗಬಹುದು. ಆದ್ದರಿಂದ ನೀನು ಇರುವುದೇ ಒಳಿತು'

—ಎಂದು ಹೇಳಿ ಶಾನ್ತಲಾದೇವಿಯನ್ನು ತನ್ನ ಬಳಿಯಲ್ಲೇ ಉಳಿಸಿಕೊಂಡ ವಿಷ್ಣುವರ್ಧನ.

ಅವರಿಬ್ಬರೂ ಮಾತನಾಡುತ್ತಿರುವಾಗಲೇ ಪಡಿಯರತಿ, ಬಾಗಿಲಬಳಿ ಕಾಣಿಸಿಕೊಂಡು ಗಂಗರಾಜರು ಬಂದ ವಿಷಯ ತಿಳಿಸಿದಳು.

'ಒಳಗೆ ಬಿಡು'—ಎಂದು ಶಾನ್ತಲಾದೇವಿಯೇ ಪಡಿಯರತಿಗೆ ಅಪ್ಪಣೆ ಮಾಡಿದಳು.

ಒಳಗೆ ಬಂದ ಗಂಗರಾಜರು. ದೊರೆಗೂ, ರಾಣಿಗೂ ವಂದಿಸಿ—

'ವಿಶ್ರಾಂತಿಯ ವೇಳೆಯಲ್ಲಿ ಬಂದು ಸನ್ನಿಧಾನಕ್ಕೆ ತೊಂದರೆ ಕೊಟ್ಟ ಹಾಗಾಯಿತೇನೊ ? ಮಹಾರಾಜ್ಞಿಯವರು ಮನ್ನಿಸಬೇಕು'

—ಎಂದು ಕೇಳಿದರು, ಶಾನ್ತಲಾದೇವಿಯಿತ್ತ ನೋಡಿ.

'ರಾಜ್ಯಕಾರ್ಯಕ್ಕೇ ನಮ್ಮ ಬಾಳನ್ನು ಮೀಸಲು ಮಾಡಿದ ಬಳಿಕ, ಅದರಲ್ಲಿ ಆ ಹೊತ್ತು, ಈ ಹೊತ್ತು ಎಂಬ ಭೇದವೆಲ್ಲಿಯದು? ಅಂಥ ಸಂಕೋಚಕ್ಕೆ ಕಾರಣವೇ ಇಲ್ಲ. ಬಂದ ಕಾರಣವೇನು ಹೇಳಿ'

—ಎಂದ ವಿಷ್ಣುವರ್ಧನ.

'ಇಂದು ನೆರೆದ ಸಚಿವ, ದಂಡನಾಯಕರ ಸಭೆಯಲ್ಲಿ ಕೆಲವು ತೀರ್ಮಾನಗಳಾದವು. ಅದನ್ನು ತಮಗೆ ತಿಳಿಸಿ, ತಮ್ಮ ಅಭಿಪ್ರಾಯ ತಿಳಿಯಬೇಕೆಂದು ಬಂದೆ.'

—ಗಂಗರಾಜರು ತಾವು ಆ ಹೊತ್ತಿನಲ್ಲಿ ಬಂದುದಕ್ಕೆ ಕಾರಣವನ್ನು ತಿಳಿಸಿದರು, ದೊರೆ ತೋರಿಸಿದ ಆಸನದಲ್ಲಿ ಕುಳಿತು.

'ಸರಿಯೇ, ಸಚಿವ ಮಂಡಲಿಯಲ್ಲಿ ಏನು ತೀರ್ಮಾನವಾಯಿತು?'

'ತಲಕಾಡಿನ ದಿಗ್ವಿಜಯ ಸಂದರ್ಭದಲ್ಲಿ, ಯಾರು ಯಾರು ಎತ್ತೆತ್ತ ಕಡೆ ಹೋಗುವುದು, ಯಾವ ದಿಕ್ಕಿನ ದಾಳಿಗೆ ಯಾರು ಸೇನಾಧಿಪತಿಗಳು ಎಂಬ ವಿಚಾರದಲ್ಲಿ ಎಲ್ಲರ ಸಲಹೆಯನ್ನೂ ಪಡೆದು, ಒಂದು ನಿರ್ಧಾರಕ್ಕೆ

ಬರಲಾಯಿತು....'

'ಹೇಳಿ – ಯಾರ ಭಾಗ್ಯ ಹೇಗೆ?

—ಎಂದು ವಿಷ್ಣುವರ್ಧನ ಗಂಗರಾಜರು ನಿಲ್ಲಿಸಿದ ಮಾತನ್ನು ಮುಂದು ವರಿಸಲು ಸೂಚಿಸಿದ.

ವಿಷ್ಣುವರ್ಧನನ ಅಪ್ಪಣೆಯಂತೆ ಗಂಗರಾಜರು ಸಚಿವಸಭೆಯಲ್ಲಾದ ಮಾತುಕತೆಗಳನ್ನು ಸಂಗ್ರಹವಾಗಿ ವಿವರಿಸಿ ಹೇಳಿದರು—

'ಯಾರೊಬ್ಬರಿಗೂ ಅನ್ಯಾಯವಾಗದಂತೆ, ಅಸಮಾಧಾನವಾಗದಂತೆ, ನಮ್ಮ ಬುದ್ಧಿಗೆ ತಿಳಿದಮಟ್ಟಿಗೆ ತೀರ್ಮಾನ ಮಾಡಿದೇವೆ.'

'ನಿಜ. ನಿಮ್ಮ ತೀರ್ಮಾನದಿಂದ ಯಾರಿಗೂ ಅನ್ಯಾಯವಾಗಿಲ್ಲ – ಒಬ್ಬರನ್ನು ಉಳಿದು.'

— ಗಂಗರಾಜರು ಹೇಳಿದುದನ್ನು ಕೇಳಿ, ಅವರ ಮುಖವನ್ನೇ ನೋಡುತ್ತಾ ಹೇಳಿದ ವಿಷ್ಣುವರ್ಧನ.

ದೊರೆ ತಮ್ಮನ್ನು ನೋಡಿದ ರೀತಿಯನ್ನು ನೋಡಿ ಗಂಗರಾಜರಿಗೂ ಉಗುಳು ನುಂಗುವಂತಾಯಿತು. ಯಾರಿಗೆ ತಮ್ಮಿಂದ ಅಪಚಾರವಾಯಿತೋ ಎಂದು ಗಾಬರಿಯಾಯಿತು. ಆ ಭಯದಿಂದಲೇ—

'ಯಾರಿಗೆ?'

—ಎಂದು ಕೇಳಿದರು.

'ಎಲ್ಲರಿಗಿಂತ ಮುಖ್ಯವಾಗಿ, ಯಾರಿಗೆ ಮೊದಲು ಪಾಲು ಸಲ್ಲ ಬೇಕಾಗಿತ್ತೋ ಅವರನ್ನೇ ಮರೆತಿದ್ದೀರ.'

'ಅಂದರೆ....ಯಾರಿಗೆ? ನನಗೆ ತಿಳಿದಂತೆ ಯಾರನ್ನೂ ಮರೆತಿಲ್ಲ.'

'ಮರೆತಿದ್ದೀರ.'

'ಯಾರನ್ನು?'

'ನಮ್ಮನ್ನು! ಸಭೆಯಲ್ಲಿ ಮಹಾ ಸೇನಾಧಿಪತ್ಯಕ್ಕೆ ನಿಮ್ಮ ಹೆಸರು ಸೂಚಿಸಿದ ಸಚಿವ ಪುಣಿಸಮಯ್ಯನವರಿಗೆ, ನಿಮ್ಮನ್ನೇ ಹೊಗಳಿ ಹಿರಿಯ ರೆಂದ ಕುಮಾರವಿಷ್ಣುವಿಗೆ – ಎಲ್ಲರಿಗೂ, ಈ ದಿಗ್ವಿಜಯ ಯಾತ್ರೆಯಲ್ಲಿ ಪಾಲುಕೊಟ್ಟು, ನಮ್ಮನ್ನು ಮಾತ್ರ ಮರೆತುಬಿಡಬಹುದೇ ಪ್ರಧಾನಿಗಳೇ? ನಿಮ್ಮಿಂದ ಇಂಥ ಅನ್ಯಾಯವಾಗುವುದೆಂದು ನಂಬಿದ್ದರೆ, ನಿಮಗೇ ಸೇನಾಧಿ

ಪತ್ಯ ಕಟ್ಟುವ ತಪ್ಪು ನಮ್ಮಿಂದ ಆಗುತ್ತಿರಲಿಲ್ಲ. ಈಗಲೂ ನೀವು ಈ ತಪ್ಪನ್ನು ತಿದ್ದಿಕೊಳ್ಳುವುದು ಲೇಸು '

—ಎಂದು, ಹೆಚ್ಚು ಸಿಟ್ಟು ಬಂದಂತೆ, ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಹೇಳಿದ ವಿಷ್ಣುವರ್ಧನ.

ಆತನ ಸಿಟ್ಟನ್ನು ಕಂಡು, ಗಂಗರಾಜರಿಗೆ ನಾಲಿಗೆಯ ದ್ರವ ಒಣಗುವುದು ಇರಲಿ, ಬಳಿಯಲ್ಲಿದ್ದ ಶಾನ್ತಲಾದೇವಿಗೂ ಬೆಚ್ಚಿ ಬೀಳುವಂತಾಯಿತು. ದೊರೆಯ ಸಿಟ್ಟನ್ನು ನೋಡಿ, ಗಂಗರಾಜರ ಬಾಯಿಂದ ಮಾತೇ ಹೊರಡದುದನ್ನು ಕಂಡ ಶಾನ್ತಲಾದೇವಿಯೇ—

' ನೀವಿಷ್ಟು ಸಿಟ್ಟಾದರೆ ಹೇಗೆ? ಅವರು ಹಾಗೇಕೆ ಮಾಡಿದರೋ ವಿವರಿಸಲು ಅವಕಾಶವನ್ನಾದರೂ ಕೊಡಿ '

—ಎಂದು ಗಂಗರಾಜರ ಪರ ವಹಿಸಿ ಬೇಡಿದಳು.

' ನಿನಗೆ ತಿಳಿಯದು ದೇವಿ. ಪ್ರಚಂಡ ದಂಡನಾಯಕರು, ಚೋಳರನ್ನು ಮಣಿಸಬಲ್ಲ ಬಲ ಈ ತೋಳುಗಳಲ್ಲಿ ಇಲ್ಲವೆಂದೇ ನಂಬಿದಾರೆ. ಇಲ್ಲವಾದರೆ ಅವರಿಂದ ಇಂಥ ಅನ್ಯಾಯವಾಗುತ್ತಿತ್ತೇ ? '

' ಕ್ಷಮಿಸಬೇಕು .... ಮಹಾಪ್ರಭುಗಳು ಕ್ಷಮಿಸಬೇಕು .... ನಮ್ಮ ತಾಯಂದಿರ ಶ್ರೀಪಾದದಾಣೆಗೂ ನನ್ನಲ್ಲಿ ಅಂಥ ಭಾವನೆಯಿಲ್ಲ. ಪ್ರಭುಗಳ ಪರಾಕ್ರಮುವನ್ನು ಸಂದೇಹಿಸುವಂಥ ಅಲ್ಪಮತಿ ನಾನಲ್ಲ.'

—ವಿಷ್ಣುವರ್ಧನ ತಮ್ಮ ಮೇಲೆ ಹೊರೆಸಿದ ಪ್ರಬಲ ಆಪಾದನೆಯ ಇದಿರು, ಕಂಗೆಟ್ಟು, ಕಣ್ಣಿನಲ್ಲಿ ನೀರು ತುಂಬಿಕೊಂಡು, ಕಳಕಳಿಯಿಂದ ಹೇಳಿದರು ಗಂಗರಾಜರು.

' ಹಾಗಾದರೆ ನಿಮ್ಮ ಇಂದಿನ ತೀರ್ಮಾನಕ್ಕೆ ಏನು ಸಮಾಧಾನ ? '

' ಹೇಳುತ್ತೇನೆ ಪ್ರಭು, ತಾಯೀ....ನಮ್ಮ ತೀರ್ಮಾನದಲ್ಲಿ ತಪ್ಪಿದ್ದರೆ ತಾವೇ ದಂಡಿಸಿ ಹೇಳಬೇಕು '

—ಎಂದು ಶಾನ್ತಲಾದೇವಿಯತ್ತ ನೋಡಿದರು ಗಂಗರಾಜರು.

' ಮಗಳನ್ನು ತಾಯಿ ಎನ್ನಬಾರದು ಗಂಗರಾಜರೇ. ನೀವೇಕೆ ಈ ತೀರ್ಮಾನಮಾಡಿದರೋ ನಿರ್ಭಯವಾಗಿ ಹೇಳಿ. ಪ್ರಭುಗಳಿಗೆ ಸಿಟ್ಟಿನಲ್ಲಿ ತಿಳಿಯದೆ ಹೋದರೂ ಪ್ರಬಲವಾದ ಕಾರಣವಿಲ್ಲದೆ, ನೀವು ಯಾವ

ತೀರ್ಮಾನವನ್ನೂ ಮಾಡುವುದಿಲ್ಲವೆಂಬುದನ್ನು ನಾನು ಬಲ್ಲೆ'

—ಎಂದು ಶಾನ್ತಲಾದೇವಿ ಗಂಗರಾಜರಿಗೆ ಅಭಯ ನೀಡಿದಳು.

'ಅಭಯ ನೀಡುವಾಕೆ ಮಗಳಾದರೂ, ಆಕೆ ಮಾತೃ ಸ್ವರೂಪಿಯೇ. ಇಂದು ನನಗೆ ನೀವೇ ಶರಣು. ನಾನಾಡುವ ಮಾತನ್ನು ಕೇಳಿ, ನನ್ನ ಅಭಿಪ್ರಾಯವನ್ನು ಪ್ರಭುಗಳಿಗೆ ನೀವೇ ವಿವರಿಸಬೇಕು.'

'ಅದೇನು ಹೇಳಿ.'

'ತಾಯಿ–ನನಗಾಗಲಿ, ಸಚಿವ ಮಂಡಲಿಯಲ್ಲಿರುವ ಯಾರೊಬ್ಬರಿಗೇ ಆಗಲಿ, ಪ್ರಭುಗಳ ಪರಾಕ್ರಮದ ವಿಷಯದಲ್ಲಿ ಎಳ್ಳುಕಾಳು ಮುಳ್ಳುಮೊನೆಯಷ್ಟೂ ಸಂದೇಹವಿಲ್ಲ. ಅಂಥ ಮಾತು ಯಾರ ಬಾಯಲ್ಲಾದರೂ ಬಂದಿದ್ದರೆ, ಅವರ ನಾಲಿಗೆಗೆ ಗರ ಬಡಿಯಲಿ. ನಾವು ಹೀಗೆ ಮಾತನಾಡಿಕೊಳ್ಳುವುದಕ್ಕೆ ನಿಜವಾದ ಕಾರಣ ಇದು—ಈಗಿನದು ಪ್ರಭುಗಳು ಪಟ್ಟಕ್ಕೆ ಬಂದ ಹೊಸಪರಿ. ಅಂಥ ವೇಳೆಯಲ್ಲೇ ಈ ಮಹಾ ಸಂಗ್ರಾಮಕಾರ್ಯ ಒದಗಿ ಬಂದಿದೆ. ಹೊಯ್ಸಳ ಸಿಂಹಾಸನಕ್ಕೆ ಸುತ್ತುಮುತ್ತಲೂ ಶತ್ರುಗಳಿರುವ ವಿಷಯ ಪ್ರಭುಚಿತ್ತಕ್ಕೂ ವೇದ್ಯವಾಗಿಯೇ ಇದೆ. ಇಂಥ ಹೊತ್ತಿನಲ್ಲಿ ಪ್ರಭುಗಳು ರಾಜಧಾನಿಯನ್ನು ಬಿಟ್ಟು, ರಣಾಂಗಣಕ್ಕೆ ತೆರಳಿದರೆ, ಅಲ್ಲಸಲ್ಲದ ಜನ ಏನಾದರೂ ಕೆಟ್ಟ ಸುದ್ದಿ ಹಬ್ಬಿಸಿ, ರಾಜ್ಯದಲ್ಲಿ ಅಶಾಂತಿಯನ್ನು ಹುಟ್ಟಿಸಬಹುದು....'

'ಅಂದರೆ ರಾಜಧಾನಿಯಲ್ಲಿರುವ ಜನರ ನಿಷ್ಠೆಯ ವಿಷಯದಲ್ಲಿ, ಮಾಂಡಲಿಕರ ಭಕ್ತಿಯಲ್ಲಿ ನಿಮಗೆ ಸಂಶಯವೇ ಪ್ರಧಾನಿಗಳೇ? ಯಾರ ವಿಷಯದಲ್ಲಿ ನಿಮಗೆ ಅನುಮಾನ?'

—ಶಾನ್ತಲಾದೇವಿ ಕೇಳಿದಳು.

'ಇಂಥವರ ವಿಷಯದಲ್ಲಿ ಅನುಮಾನ ಎಂದು ನಾನು ಹೇಳುವುದಿಲ್ಲ ತಾಯಿ. ಆದರೂ ನಾವು ಇರಬೇಕಾದ ಎಚ್ಚರಿಕೆಯನ್ನು ಮರೆಯಬಾರದು. ಅತಿ ಅನುಮಾನದಂತೆ, ಅತಿ ನಂಬಿಕೆಯೂ ಅಪಾಯಕಾರಿ. ಆದುದರಿಂದಲೇ, ನಾವು–ಇತರರಿಗೆ ಸಲಹೆ ಹೇಳುವ ಬಹು ಹಿರಿದಾದ ಭಾರವನ್ನು ಹೊತ್ತಿರುವವರು, ಹತ್ತು ಕಡೆಯ ಯೋಚನೆಮಾಡಿ ಮಾತನಾಡಬೇಕಾಗುತ್ತದೆ. ಸಂಶಯಕ್ಕೆ ಕಾರಣವಿಲ್ಲದೆಡೆಯಲ್ಲೂ, ಕಾರಣವಿದೆಯೇನೋ ಎಂದು ಊಹಿಸ

ಬೇಕಾಗುತ್ತದೆ. ಆದುದರಿಂದ ಇಂಥ ವೇಳೆಯಲ್ಲಿ ನಾವು ನಮ್ಮನ್ನು ನಂಬಿದವರಿಂದ ನಿರೀಕ್ಷಿಸುವುದು—ನಮ್ಮ ವಿಷಯದಲ್ಲಿ ವೃಥಾ ಅಸಮಾಧಾನಕ್ಕೆ ಎಡೆ ಕೊಡಬಾರದೆಂಬುದುದಷ್ಟನ್ನೇ. ಪ್ರಭುಗಳನ್ನು ನಾವು ಪ್ರಾರ್ಥಿಸುವುದೂ ಇಷ್ಟೆ–ತಲಕಾಡಿನ ಸಮರದಷ್ಟೇ, ರಾಜ್ಯರಕ್ಷಣೆಯ ಕಾರ್ಯವೂ ಈ ಹೊತ್ತಿನಲ್ಲಿ ಅತ್ಯಗತ್ಯವಾದುದು. ಅರಿಮರ್ಧನದ ಅಲ್ಪಕಾರ್ಯವನ್ನು ನಮ್ಮಂಥ ಊಳಿಗದವರಿಗೆ ನೇಮಿಸಿ, ಪ್ರಭುಗಳು ಸಿಂಹಾಸನ ರಕ್ಷಣೆಯ ಕಾರ್ಯವನ್ನು ಕೈಗೊಳ್ಳಬೇಕು.'

—ಗಂಗರಾಜರು ತಾವು ಕೈಗೊಂಡ ತೀರ್ಮಾನಕ್ಕೆ ಕಾರಣವನ್ನು ವಿವರಿಸಿದರು.

ಗಂಗರಾಜರ ವಿವರಣೆಗೆ, ವಿಷ್ಣುವರ್ಧನ ಪ್ರತಿಮಾತನ್ನು ನುಡಿಯುವ ಮೊದಲೇ, ಶಾನ್ತಲಾದೇವಿ ತಾನೇ ಮಾತಿಗೆ ಮುಂದಾಗಿ—

'ಪ್ರಭುಗಳು ನನ್ನನ್ನು ಮನ್ನಿಸಬೇಕು. ಈ ಸಂದರ್ಭದಲ್ಲಿ ಪ್ರಧಾನರನ್ನು ನಾನು ಕೇಳಬೇಕಾದ ಪ್ರಶ್ನೆಯೊಂದಿದೆ'

—ಎಂದಳು.

'ಕೇಳಿ ತಾಯಿ.'

'ಪ್ರಭುಗಳು ರಾಜಧಾನಿಯನ್ನು ಬಿಟ್ಟರೆ, ರಾಜ್ಯ ಅರಕ್ಷಿತವಾಗುವುದೆಂದು ನಿಮ್ಮ ಭಾವನೆಯೇ ಪ್ರಧಾನಿಗಳೇ ?'

'ಅರಕ್ಷಿತವಾಗುವುದೆಂದು ನಾನು ಹೇಳಲಾರೆ ತಾಯಿ, ಆದರೆ ಸ್ವಲ್ಪ ಮಟ್ಟಿಗೆ ಅಭದ್ರವಾಗಬಹುದು.'

'ಪ್ರಧಾನಿಗಳೇ ನೀವು ಪ್ರಭುಗಳಿಗಷ್ಟೇ ಅಲ್ಲ, ನಮಗೂ ಅವಮಾನ ಮಾಡುತ್ತಿದ್ದೀರ.'

—ಗಂಭೀರವಾಗಿ ಹೇಳಿದಳು ಶಾನ್ತಲಾದೇವಿ.

ಸುಳಿವುದೋರದೆ ಬಂದ ಈ ಆಕಸ್ಮಿಕ ಸಿಡಿಲಾಘಾತದಿಂದ ಗಂಗರಾಜರು ತತ್ತರಿಸಿ ಹೋದರು.

'ನಿಮಗೆ.....ನಾನು....ಅವಮಾನ ಮಾಡುವುದೇ....ಇದೇನು ಮಾತು ತಾಯಿ....'

'ನಿಜ – ಪ್ರಧಾನಿಗಳೇ. ಪ್ರಭುಗಳೊಬ್ಬರೇ ರಾಜಧಾನಿಯ ರಕ್ಷಣೆಗೆ

ಸಮರ್ಥರು ಎಂದಾಗ ನಾವು ಅಸಮರ್ಥರು ಎಂದು ಹೇಳಿದಂತಾಗಲಿಲ್ಲವೇ? ನೀವು ಕೈಲಾಗದವರು ಹೇಡಿಗಳು ಎಂದು ಬಾಯಿಬಿಟ್ಟು ಹೇಳಬೇಕೇ? ನಮ್ಮ ಶಕ್ತಿಯ ವಿಷಯದಲ್ಲಿ ನಿಮಗೆ ಸಂದೇಹವಿದ್ದರೂ ನಮಗೆ ಸಂದೇಹವಿಲ್ಲ. ನಮ್ಮ ಅಪ್ಪಾಜಿಯವರು ನಮಗೆ ನರ್ತನ ವಿದ್ಯೆಯನ್ನಷ್ಟೇ ಅಲ್ಲ ಹೇಳಿಸಿರುವುದು – ಶಸ್ತ್ರವಿದ್ಯೆಯನ್ನೂ ಸ್ವತಃ ಕಲಿಸಿದಾರೆ. ಪ್ರಭುಗಳೂ ನಮ್ಮನ್ನು ಶೃಂಗಾರ ಸರೋವರದ ಹಂಸವಾಗಿ ಬೆಳೆಸಿಲ್ಲ. ಆಪತ್ತಿನ ಸಮಯದಲ್ಲಿ, ಆತ್ಮವನ್ನು, ಅರಮನೆಯನ್ನು ಹೇಗೆ ರಕ್ಷಿಸಿಕೊಳ್ಳಬೇಕು ಎಂಬ ರಕ್ಷಣಾತಂತ್ರವನ್ನು ಕಲಿಸಿದಾರೆ. ಹೊತ್ತು ಬಿದ್ದರೆ, ನಮ್ಮ ಅಂತಃಪುರದ ದಾಸಿಯರೇ, ಶಸ್ತ್ರ ಧರಿಸಿ ರಾಜಧಾನಿಯನ್ನು ರಕ್ಷಿಸಬಲ್ಲರು. ಆದುದರಿಂದ, ಈ ಅಲ್ಪಕಾರಣಕ್ಕಾಗಿ ಪ್ರಭುಗಳ ಸಮರೇಚ್ಛೆಗೆ ಅಡ್ಡಿಯಾಗುವುದು ಅನಗತ್ಯ.'

ಶಾನ್ತಲಾದೇವಿ ಆಡಿದ ಮಾತುಗಳನ್ನು ಕೇಳಿ ಗಂಗರಾಜರಿಗೆ ಎಷ್ಟು ಆಶ್ಚರ್ಯವಾಯಿತೋ, ವಿಷ್ಣುವರ್ಧನನಿಗೆ ಅಷ್ಟೇಮಟ್ಟಿಗೆ ಹೆಮ್ಮೆಯಿಂದ ಎದೆ ಬಿರಿಯುವಂತಾಯಿತು.

'ಭಲೆ ಭಲೆ – ಸರಿಯಾದದ್ದನ್ನೇ ಆಡಿದೆ ದೇವಿ. ತಮ್ಮ ಯಾವುದೋ ಸಂದೇಹಕ್ಕಾಗಿ, ನಮ್ಮ 'ಆಳಿಂ ಮುನ್ನಿರಿವೆ' ಎಂಬ ಬಿರುದನ್ನು ಕೇಳುವ ಕಿವಿಯ ಹೊರೆಯಾಗಿ ಮಾಡಲೆಳೆಸಿದ ಪ್ರಧಾನರ ಪ್ರಯತ್ನಕ್ಕೆ ಸರಿಯಾಗಿಯೇ ಉತ್ತರ ಕೊಟ್ಟೆ. ಇನ್ನೇನು ಪ್ರಧಾನಿಗಳೇ–ನಿಮ್ಮ ಸಂದೇಹ ತೀರಿತೇ?'

—ಎಂದು ಗಂಗರಾಜರತ್ತ ತಿರುಗಿ ಕೇಳಿದ ವಿಷ್ಣುವರ್ಧನ.

ಒಂದು ಗಳಿಗೆ ಸುಮ್ಮನಿದ್ದು, ಶಾನ್ತಲಾದೇವಿಯ ವಿಷಯದಲ್ಲಿ ಮೂಡಿ ಬಂದ ಮೆಚ್ಚುಗೆಯನ್ನು ಹಾಗೇ ತಡೆಹಿಡಿದು ಹೇಳಿದರು ಗಂಗರಾಜರು :

'ಅಶುಭವನ್ನು ನುಡಿಯಬಾರದು, ಅಶುಭವನ್ನು ಚಿಂತಿಸಬಾರದು, ಎಂದು ಹಿರಿಯರು ಹೇಳುತ್ತಾರೆ. ಆದರೂ ಈ ಸಂದರ್ಭದಲ್ಲಿ ನಮ್ಮ ಭಯವನ್ನು ಬಾಯಿ ಬಿಟ್ಟು ಆಡದೆ ವಿಧಿಯಿಲ್ಲ. ಕಳೆದ ಕೆಲವು ಸಂವತ್ಸರಗಳಲ್ಲಿ ಹೊಯ್ಸಳ ವಂಶದ ಮೂರು ಹಿರಿಯ ತಲೆಗಳನ್ನು ಕಳೆದುಕೊಂಡ ನಮಗೆ ವಿಧಿ ಮತ್ತೇನು ಹೊಂಚು ಹೂಡಿದೆಯೋ ಎಂಬ ಭೀತಿ ಬಾಧಿಸುತ್ತಿದೆ ತಾಯಿ. ಎಂತಲೇ ಅಲ್ಪ ಅಪಾಯಸೂಚನೆ ಇರುವೆಡೆಯಲ್ಲೂ

ಪ್ರಭುಗಳು ಕಾಲಿಡುವುದು ನಮಗೆ ಒಪ್ಪಿಗೆಯಿಲ್ಲ.'

—ಹೇಳಬಾರದ ಮಾತನ್ನು ಹೇಳಲೇಬೇಕಾಗಿ ಬಂದುದಕ್ಕಾಗಿ ಮೂಡಿದ ಪಶ್ಚಾತ್ತಾಪ ತುಂಬಿದ ಧ್ವನಿಯಲ್ಲಿ ತಡೆತಡೆದು ಹೇಳಿದರು ಗಂಗ ರಾಜರು.

'ನಿಮ್ಮ ರಾಜ್ಯದ ಭಾಗ್ಯದ ವಿಷಯದಲ್ಲಿ ನಿಮಗೇನೇ ಅನುಮಾನ, ಅಪನಂಬಿಕೆಗಳಿದ್ದರೂ, ನಮಗೆ ನಮ್ಮ ಕುಂಕುಮ ಭಾಗ್ಯದಲ್ಲಿ ನಂಬಿಕೆಯಿದೆ ಪ್ರಧಾನರೇ. 'ಹಾವು ಕಂಡವನು ಹಗ್ಗಕ್ಕೆ ಹೆದರಿದ' ಎಂಬ ನಾಣ್ಣುಡಿ, ನಿಮ್ಮಂಥವರ ವಿಚಾರಕ್ಕೆ ಅನ್ವಯಿಸಬಾರದು. ಪ್ರಭುಗಳಿಗೆ, ಈ ಸಮರ ದಲ್ಲಿ ಭಾಗವಹಿಸಬೇಕು ಎಂಬ ವಿಷಯದಲ್ಲಿ ಎಷ್ಟು ಉತ್ಕಟೇಚ್ಛೆಯಿದೆಯೆಂಬು ದನ್ನು ನಾನು ಬಲ್ಲೆ. ನನ್ನ ದೊರೆ, ಚೋಳರನ್ನು ತುಳಿದು, ಅವರ ಕೋಟೆಯ ಮೇಲೆ ಕೈಯಾರ ತಮ್ಮ ಕೀರ್ತಿಧ್ವಜವನ್ನು ಹಾರಿಸಬೇಕೆಂಬ ಬಯಕೆ ನನಗೂ ಅವರಷ್ಟೇ ಇದೆ. ದೊರೆಯ ಪತ್ನಿ ಎನ್ನಿಸಿಕೊಳ್ಳುವುದಕ್ಕಿಂತ ವೀರನ ಪತ್ನಿ ಎನ್ನಿಸಿಕೊಳ್ಳುವುದು ಹೆಚ್ಚಿನ ಹೆಮ್ಮೆ. ನನ್ನ ಪ್ರಾಣಪಕ್ಷಿ ಸಮರಾಕಾಶದಲ್ಲಿ ವಿಹರಿಸಿ ಬರುವುದಾದರೆ, ಹಾರಾಡಿ ಬರಲಿ. ಆದರೆ ಅವರೊಂದಿಗೆ ಹೋಗುವ ನಿಮ್ಮನ್ನು ಕೇಳುವುದಿಷ್ಟೆ—'

'ಏನು ಹೇಳಿ ತಾಯಿ?'

'ಚೋಳರ ಕೋಟೆಯನ್ನು ಗೆದ್ದ ಇವರು ಅದಿಯಮನ ಅಂತಃಪುರದ ಸೊಗೆಗಣ್ಣಿನ ಚೆಲುವೆ ಯಾರಾದರೊಬ್ಬಳಿಗೆ ಸೆರೆಯಾಗದಂತೆ, ಎಚ್ಚರದಿಂದ ಹಿಂದಕ್ಕೆ ಕರೆತಂದು ಅಂತಃಪುರಕ್ಕೆ ಬಿಡಿ. ಅಷ್ಟೆ.'

—ವಿಷ್ಣುವರ್ಧನನತ್ತ ನೋಡಿ ನಗುತ್ತಾ ಹೇಳಿದಳು ಶಾನ್ತಲಾದೇವಿ.

ಆಕೆಯಾಡಿದ ಮಾತನ್ನು ಕೇಳಿ ವಿಷ್ಣುವರ್ಧನನೂ ನಕ್ಕ. ಗಂಗ ರಾಜರೂ ಆ ನಗೆಯಲ್ಲಿ ಬೆರೆಯದೆ ಹೋಗಲಿಲ್ಲ.

'ಆಯಿತೇ ಪ್ರಧಾನರೇ – ನಿಮ್ಮ ಅನುಮಾನಗಳೆಲ್ಲಾ ಪರಿಚ್ಛೇದ ವಾದವೇ? ಇನ್ನಾದರೂ ನಮಗೆ, ನಿಮ್ಮೊಂದಿಗೆ ಬರಲು ಅನುಮತಿ ನೀಡು ತ್ತೀರಾ?'

'ತಮಗೆ ನಾನು ಅನುಮತಿ ಕೊಡುವುದೇ ಪ್ರಭು? ತಮ್ಮ ಅಭಿ ಪ್ರಾಯ ನನಗೆ ಅಪ್ಪಣೆ. ನನ್ನ ಮನದಲ್ಲಿದ್ದ ಮಾತನ್ನು ಮುಚ್ಚುಮರೆ

ಮಾಡದೆ ಆಡಿದ್ದಕ್ಕಾಗಿ ನನ್ನನ್ನು ಮನ್ನಿಸಬೇಕು. ಆದರೆ ಪ್ರಭುಗಳಲ್ಲಿ ಇಲ್ಲೇ ಮನವಿಮಾಡಿಕೊಳ್ಳಬೇಕಾದ ವಿಷಯವೊಂದಿದೆ—'

'ಏನು ?'

'ಸಮರಾಂಗಣದಲ್ಲಿ ತಮ್ಮ ರಕ್ಷಣೆಗೆ ನಾನು ಮಾಡಿದ ಕ್ರಮಗಳನ್ನು ತಾವು ಮುರಿಯಬಾರದು....'

'ಆಯಿತು....'

'ಮತ್ತೆ....'

'ಮತ್ತೇನು ?'

'ಆದಿಯಮನ ತಲೆ ನಮಗೆ ಮೀಸಲು ಎಂಬುದನ್ನು ಪ್ರಭುಗಳು ರಣೋತ್ಸಾಹದಲ್ಲಿ ಮರೆಯಬಾರದು....'

'ಅದೂ ಆಗಲಿ–ಈಗಲಾದರೂ ನಿಮಗೆ ಸಮಾಧಾನವಾಯಿತೇ ?'

'ಆಯಿತು ಪ್ರಭು.'

'ಅಂತೂ ನಮ್ಮನ್ನು ನಿಮ್ಮೊಂದಿಗೆ ಕರೆದೊಯ್ಯುವುದಕ್ಕೆ, ಈ ಬನವಾಸಿಯ ಹುಡುಗಿ ಹೇಳಬೇಕಾಯಿತಲ್ಲವೇ ಪ್ರಧಾನಿಗಳೇ. ಅಂತೂ ಹೊರಗಿನಿಂದ ಬಂದವಳ ಇದುರಿಗೆ, ನಿಮ್ಮವರಾದ ನಮ್ಮನ್ನೇ ಕಡಮೆ ಮಾಡಿದಿರಿ'

—ಎಂದ ವಿಷ್ಣುವರ್ಧನ ನಗುತ್ತಾ.

'ನಾರು ಸ್ವರ್ಗಕ್ಕೆ ಹೋದರೆ, ಹೂವು ಹಿಂದೆ ಉಳಿಯುತ್ತದೆಯೇ - ಕೇಳಿ - ಪ್ರಧಾನಿಗಳೇ ?'

—ಶಾನ್ತಲಾದೇವಿಯೂ ನಗುತ್ತಾ ಆಡಿದಳು.

ಆ ದಂಪತಿಗಳ ಪ್ರೇಮ, ಅಭಿಮಾನಗಳನ್ನು ನೋಡಿ ಗಂಗರಾಜರಿಗೆ ಎದೆಯಲ್ಲಿ ಜೇನು ಮಳೆ ಕರೆದಂತಾಯಿತು.

'ತಾಯಿ - ಮಾತರಿಯದ ಮೂಢ ನಾನೇನು ಹೇಳಬಲ್ಲೆ? ನನಗೆ ಅನಿಸುವುದಿಷ್ಟೇ - ನಿಮ್ಮನ್ನು ಆಸ್ಥಾನ ಕವಿಗಳು 'ಸದರ್ತ್ಥ ಸರಸ ಸಮಯೋಚಿತ ವಚನ ಮಧುರ ರಸಸ್ಯಂದಿ ವದನಾರವಿಂದೆ' ಎಂದು ಕರೆದದ್ದು ಅತಿಶಯೋಕ್ತಿಯಲ್ಲ. ಅಪ್ಪಣೆಯಾದರೆ ನಾನಿನ್ನು ಬರುತ್ತೇನೆ. ಆಸ್ಥಾನ ಜೋತಿಷ್ಕರನ್ನು ಕಂಡು ಯುದ್ಧಕ್ಕೆ ತೆರಳುವ ಮುಹೂರ್ತ ನಿಶ್ಚಯಮಾಡಿಸಿ, ಮತ್ತೆ ಕಾಣುತ್ತೇನೆ'

—ಎಂದು ಹೇಳಿ ಆ ದಂಪತಿಗಳಿಬ್ಬರಿಗೂ ವಂದಿಸಿ, ಗಂಗರಾಜರು ಅಂತಃಪುರದಿಂದ ತೆರಳಿದರು.

ಗಂಗರಾಜರು ಕಣ್ಣು ಮರೆಯಾಗುವವರೆಗೂ ಸುಮ್ಮನಿದ್ದ ಶಾನ್ತಲಾ ದೇವಿ, ಬಳಿಕ ಪತಿಯ ಬಳಿ ಸಾರಿ—

'ಪ್ರಧಾನರ ಕೈಲಿ ಮಾತಾಳಿ ಎಂದು ಅನ್ನಿಸುವುದಕ್ಕೇ ನನ್ನನ್ನು ಇಲ್ಲಿ, ಬೇಡವೆಂದರೂ ನಿಲ್ಲಿಸಿಕೊಂಡದ್ದು ?'

—ಎಂದು ಕೇಳಿದಳು ಹುಸಿ ಮುನಿಸಿನಿಂದ.

'ಮತ್ತೆ ನಿನ್ನ ನಾಲಗೆಯ ಕೊರೆತಕ್ಕೆ ನನ್ನ ಕಿವಿಯೇ ಮೀಸಲಾಗ ಬೇಕೇ ? ಅದು ಹೇಗಾದರಾಗಲಿ - ಅಂತೂ ನನ್ನ ದಾಳ, ಬಯಸಿದ ಗರ ವನ್ನೇ ಉರುಳಿಸಿತು.'

'ಅಂದರೆ....'

'ಗಂಗರಾಜರ ಮಂತ್ರಿ, ನನ್ನ ಕಾಲಾಳಿನ ಇದಿರು ಸೋತು ಹೋದ, ಶಾನ್ತಲಾ.'

'ಅಂದರೆ - ಆ ಸಿಟ್ಟು ನಿಮ್ಮ ಕಾಲಾಳೇ ? ಅಬ್ಬಾ - ಎಂಥ ಸಿಟ್ಟು ನಿಮ್ಮದು. ಪಾಪ - ಪ್ರಧಾನಿಗಳು ಬೆವತು ಬಿಟ್ಟರು. ನೀವಷ್ಟು ಸಿಟ್ಟಾದರೆ ಅವರು ಸೋಲದೆ ಮತ್ತೇನು ಮಾಡುತ್ತಾರೆ. ನನಗೇ ಎಲ್ಲಿಯಾದರೂ ಓಡಿಹೋಗಬೇಕು ಎಂಬಷ್ಟು ಭಯವಾಗಿತ್ತು. ಹಿರಿಯರ ಮೇಲೆ ಅಷ್ಟು ಸಿಟ್ಟಾಗುವುದುಂಟೆ ? ಗಂಗರಾಜರು ಏನು ಅಂದುಕೊಂಡರೋ.'

'ನಾನು ನಿಜವಾಗಿಯೂ ಅಷ್ಟು ಸಿಟ್ಟಾದೆ ಎಂದು ನೀನೂ ನಂಬಿ ದೆಯಾ ?'

'ಮತ್ತೆ ?'

'ಅಂಥ ತಪ್ಪು ಎಂದೂ ನನ್ನಿಂದ ಆಗದು. ಸಿಟ್ಟಾದಂತೆ ಅಭಿನಯಿ ಸಿದ್ದು, ನಿನ್ನನ್ನು ಇಲ್ಲಿ ಇರು ಎಂದದ್ದು ಎಲ್ಲಾ ಒಂದೇ ಉದ್ದೇಶಕ್ಕಾಗಿ.'

'ಅಂದರೆ—'

—ವಿಷ್ಣುವರ್ಧನ ಆಡಿದುದನ್ನು ಕೇಳಿ, ಚಕಿತಳಾಗಿ ಕೇಳಿದಳು ಶಾನ್ತಲಾದೇವಿ.

'ಗಂಗರಾಜರಿಗೆ ನನ್ನನ್ನು ಯುದ್ಧರಂಗಕ್ಕೆ ಕರೆದೊಯ್ಯುವುದು ಇಷ್ಟ

ವಿರಲಿಲ್ಲ. ಆ ಸೂಕ್ಷ್ಮ ನನಗೆ ತಿಳಿದಿತ್ತು. ಅದಕ್ಕೇ ನಿನ್ನನ್ನು ಇರು ಎಂದದ್ದು.'

ಏಕೆ ? '

'ಈಗ ಆಡಿದೆಯಲ್ಲಾ ಆ ಮಾತನ್ನು ಆಡಿ ಗಂಗರಾಜರನ್ನು ಸೋಲಿಸಲಿಕ್ಕೆ.'

'ಹಾಗಾದರೆ ಅಷ್ಟು ಸಿಟ್ಟೇಕೆ ಆಗಬೇಕಾಗಿತ್ತು ? '

'ನಿನ್ನ ಬಾಯಿಂದ ಈಗಾಡಿದ ಮಾತು ಹೊರಡಿಸಲಿಕ್ಕೆ. ನನ್ನ ಸಿಟ್ಟಿನಿಂದ ಗಂಗರಾಜರನ್ನು ಉಳಿಸಲಾದರೂ ನೀನು ಹೀಗೇ ಮಾತಾಡುತ್ತೀಯ ಎಂದು ನಾನು ಊಹಿಸಿದ್ದೆ ; ಹಾಗಾಯಿತು '

—ಎಂದು ನಕ್ಕ ವಿಷ್ಣುವರ್ಧನ.

'ಒಂದು ವೇಳೆ–ನಾನು ಗಂಗರಾಜರ ಪಕ್ಷಕ್ಕೇ ಸೇರಿದ್ದರೆ. . . .'

'ಊಹೂ, ಆ ಊಹೆಗೆ ಅವಕಾಶವೇ ಇರಲಿಲ್ಲ.'

'ಏಕೋ ? '

'ನಿನ್ನ ಭಾಗ್ಯದಲ್ಲಿ ನಿನಗೆಷ್ಟು ನಂಬಿಕೆಯಿದೆಯೋ, ನನ್ನ ಭಾಗ್ಯದಲ್ಲಿ ನನಗೂ ಅಷ್ಟೇ ನಂಬಿಕೆಯಿದೆ ಶಾನ್ತಲಾ. ಹಂಸ ಸಮೂಹದಲ್ಲಿ ಎಂದಾದರೂ ಕಾಗೆ ಸೇರಿತೇ ? '

ತನ್ನ ವಿಷಯದಲ್ಲಿ ವಿಷ್ಣುವರ್ಧನ ಆಡಿದ ಅಭಿಮಾನದ ಮಾತನ್ನು ಕೇಳಿ, ಶಾನ್ತಲಾದೇವಿಯ ಹೃದಯ ಪ್ರೇಮ, ಅಭಿಮಾನದಿಂದ ಬೀಗಿತು. ಆ ಭಾವೋತ್ಕರ್ಷದಲ್ಲಿ ಪತಿಯನ್ನು ಆಲಂಗಿಸಿ, ಆತನ ವಿಶಾಲ ವಕ್ಷಸ್ಥಲದಲ್ಲಿ ಮುಖ ಮರೆಯಿಸಿ, ಹೇಳಿದಳು—

'ನಿಮಗೆ ಮಾತಿನಲ್ಲಿರುವ ಚಾತುರಿಯಲ್ಲಿ, ನೂರರಲ್ಲಿ ಒಂದು ಪಾಲು ಯುದ್ಧದಲ್ಲಿದ್ದರೂ, ಅದಿಯಮ - ಖಂಡಿತವಾಗಿಯೂ - ನನ್ನ ಊಳಿಗದಾಳು '

—ಎಂದು ನಗುತ್ತಾ ಹೇಳಿದಳು.

'ಪ್ರಧಾನಿಗಳು ಮಾತಾಳಿ ಎಂದದ್ದು ನನ್ನನ್ನಲ್ಲ, ಅರಗಿಳಿಯೇ, ನಿನ್ನನ್ನು '

—ಎಂದು, ತಾನೂ ಪತ್ನಿಯನ್ನು ಬಿಗಿದಪ್ಪಿ, ಮತ್ತೆ ಆಕೆ ಮಾತಾಡದಂತೆ, ಆಕೆಯ ಹವಳದುಟಿಗಳನ್ನು ತನ್ನ ತುಟಿಗಳಿಂದ ಬಂಧಿಸಿದ.

೭

# ಅರಸಿಯ ಬಯಕೆ

ಶಕವರ್ಷ ಸಾವಿರದ ಮೂವತ್ತೆಂಟನೆಯ ದುರ್ಮುಖಿನಾಮ ಸಂವತ್ಸರದ ಆಶ್ವಯುಜ ಶುದ್ಧ ವಿಜಯದಶಮಿಯ ಶುಭದಿನದಂದು, ಹೊಯ್ಸಳ ಸೇನೆ, ತನ್ನ ವಿಜಯ ಯಾತ್ರೆಯನ್ನು ಆರಂಭಿಸುವುದೆಂದು, ರಾಜಜ್ಯೋತಿಷಿಗಳು, ದಂಡಯಾತ್ರೆಯ ಮುಹೂರ್ತ ನಿಶ್ಚಯ ಮಾಡಿದರು. ಅದರಂತೆಯೇ ಆ ದಿನ ಸೂರ್ಯೋದಯಾನಂತರ ಸೇನೆ, ಸೀಮೋಲ್ಲಂಘನ ಮಾಡಿ, ತಲಕಾಡಿನತ್ತ ನಡೆಯುವುದಕ್ಕೆ ಬೇಕಾದ ಸಿದ್ಧತೆಗಳೆಲ್ಲವೂ ಮಿಂಚಿನ ವೇಗದಲ್ಲಿ ನಡೆದವು.

ಜ್ಯೋತಿಷ್ಕರು ದಿನ ನಿಶ್ಚಯ ಮಾಡಿದ ಗಳಿಗೆಯಲ್ಲೇ ಗಂಗರಾಜರು ಹೊಯ್ಸಳರ ಸಾಮಂತರಿಗೆ, ಮಾಂಡಲಿಕ, ಮನ್ನೆಯರಿಗೆ ತಮ್ಮ ತಮ್ಮ ಸೇನಾಬಲದೊಂದಿಗೆ ದುರ್ಗಾಷ್ಟಮಿಯ ವೇಳೆಗೇ ರಾಜಧಾನಿಗೆ ಬರುವುದೆಂದು ಓಲೆಗಳನ್ನು ಬರಿಸಿ, ಕುದುರೆಯಾಳುಗಳನ್ನು ಅಟ್ಟಿದರು. ಆದರಂತೆ ದಿನಕ್ಕೆ ಒಂದೊಂದು ದಿಕ್ಕಿನಿಂದ ಸಾಮನ್ತರ ಸೇನಾವಾಹಿನಿ ದ್ವಾರಸಮುದ್ರಕ್ಕೆ ಬರತೊಡಗಿ, ದ್ವಾರಸಮುದ್ರ ಸೇನಾಸಮುದ್ರವಾಯಿತು.

ದಿನದಿನವೂ ರಾಜಧಾನಿಗೆ ಬರುವ ಸಾಮಂತರು, ಮಾಂಡಲಿಕರನ್ನು ಭೇಟಿ ಮಾಡಿ, ಅವರು ತಂದ ಕಾಣಿಕೆಗಳನ್ನು ಸ್ವೀಕರಿಸಿ, ಅವರ ಸೇನಾ ಬಲದ ವಿವರಗಳನ್ನು ವಿಚಾರಿಸಿ, ಒಬ್ಬೊಬ್ಬರಿಗೂ ಅವರ ಅಂತಸ್ತು ಮರ್ಯಾದೆಗಳಿಗನುಸಾರವಾಗಿ ಊಟ-ವಸತಿಗಳಿಗೆ ಏರ್ಪಾಟು ಮಾಡುವುದರಲ್ಲಿ ಗಂಗರಾಜರು, ಉಳಿದ ಸಚಿವರು, ಆಸ್ಥಾನಿಕರಿಗೆ ಒಂದು ಗಳಿಗೆಯೂ ತಮ್ಮ ಊಟ, ನಿದ್ರೆಗೂ ಬಿಡುವು ಉಳಿಯಲಿಲ್ಲ.

ಒಂದು ಕಡೆ ಬಂದ ಸಾಮಂತರಿಗೆ, ಸೇನೆಗೆ ಊಟೋಪಚಾರಗಳಿಗೆ ವ್ಯವಸ್ಥೆ ನಡೆದಂತೆಯೇ ಮತ್ತೊಂದು ಕಡೆ, ಸಮರಾಂಗಣಕ್ಕೆ ತೆರಳಲಿರುವ

ಸೇನಾಸಮೂಹಕ್ಕೆ ಬೇಕಾದ ಆಹಾರಸಾಮಗ್ರಿಗಳನ್ನೂ, ಉಳಿದ ಅಗತ್ಯ ವಸ್ತುಗಳನ್ನೂ ಶೇಖರಿಸುವ ಕೆಲಸವೂ ನಡೆಯಿತು.

ದ್ವಾರಸಮುದ್ರದ ಪಟ್ಟಣಶೆಟ್ಟಿಯನ್ನು ಕರೆಸಿ ಗಂಗರಾಜರು, ಸೇನೆಗೆ ಬೇಕಾದ ವಸ್ತುಗಳ ವಿವರಗಳೆಲ್ಲವನ್ನೂ ತಿಳಿಸಿ, ಅವರಿಗೆ ಮುಂಗಡ ಹಣ ಸಂದಾಯ ಮಾಡಿ, ಆರು ಮಾಸ ಮುತ್ತಿಗೆ ನಡೆದರೂ ಯಾವುದಕ್ಕೂ ಕೊರತೆ ಬೀಳದಂತೆ ವ್ಯವಸ್ಥೆ ಮಾಡಬೇಕೆಂದು ಕಟ್ಟುಮಾಡಿ ಕಳಿಸಿದರು.

ಈ ಅನಿವಾರ್ಯವಾದ ನೂರೆಂಟು ಕೆಲಸಗಳ ಗಡಿಬಿಡಿಯಲ್ಲಿ, ಯಾರೊಬ್ಬರಿಗೂ ದಿನಗಳು ಸರಿದುದೂ ಅರಿವಾಗಲಿಲ್ಲ.

ಅರಮನೆ, ಆಸ್ಥಾನ, ದಂಡನಾಯಕರ ವಾಡೆಗಳಲ್ಲಿದ್ದಷ್ಟೇ ಗದ್ದಲ, ನಗರದ ಮನೆ ಮನೆಯಲ್ಲೂ ಇತ್ತು. ಮನೆಗೆ ಒಬ್ಬರಂತಾದರೂ, ಒಂದಲ್ಲ ಒಂದು ಕಾರಣಕ್ಕೆ ಯುದ್ಧಭೂಮಿಗೆ ಹೊರಟಿದ್ದರು. ಹಾಗೆ ಹೋಗುವವರಿಗೆ ಬೇಕಾದ ಸಕಲ ವಸ್ತುಗಳನ್ನು ಜೋಡಿಸಿ ಕೊಡುವ ಸಡಗರ ಮನೆಯ ಹೆಂಗಸರಿಗೆ.

ಅಂಗಡಿಗಳಲ್ಲಂತೂ ಒಂದು ಗಳಿಗೆಯೂ ಬಿಡುವಿಲ್ಲದೆ ವ್ಯಾಪಾರ ನಡೆಯಲಾರಂಭಿಸಿ, ಇರುಳೂ ಹಗಲಾಯಿತು.

ರಾಜಧಾನಿಯ ಬಸದಿ, ದೇವಾಲಯಗಳಲ್ಲೂ ಅದೇ ಸಂಭ್ರಮ.

ಒಂದು ಕಡೆ ದೊರೆಯ ವಿಜಯಾಭಿವೃದ್ಧಿಗಾಗಿ, ನಾನಾ ದೇವಾಲಯಗಳಲ್ಲಿ ಹೋಮ ಹವನಗಳನ್ನು ನಡೆಸುತ್ತಿದ್ದರು. ದೇವತೆಗಳಿಗೆ ವಿಶೇಷ ಪೂಜೆ ಮಾಡುತ್ತಿದ್ದರು. ಅರಮನೆಯ ಬಳಿಯ ಯಾಗಶಾಲೆಯಲ್ಲಿ 'ಶತ ಚಂಡಿ' ಹೋಮ ನಡೆಯುತ್ತಿತ್ತು. ಬಸದಿಗಳಲ್ಲಿ ಶಾಂತಿಪೂಜೆಗಳು ನಡೆಯುತ್ತಿದ್ದವು. ಅವರೊಂದಿಗೆ ಮನೆಮನೆಯವರೂ ಬಂದು ಹರಕೆ ಹೊತ್ತು, ಪೂಜೆ ಮಾಡಿಸುವ ಗದ್ದಲ.

ಬೆಟ್ಟದ ಭೈರವನ ಗುಡಿಯಲ್ಲಂತೂ ಒಂದು ಗಳಿಗೆಯೂ ಬಿಡುವಿರಲಿಲ್ಲ. ದೊರೆಗೆ ವಿಜಯವನ್ನು ಕೋರಿ, ಹರಕೆಯಾಳುಗಳು, ಕುರಿಕೋಣಗಳೊಂದಿಗೆ ತಮ್ಮ ತಲೆಯನ್ನೂ ಅರ್ಪಿಸಿದರು. ಆ ನೂರಾರು ಬಲಿಗಳಿಂದ ಬೆಟ್ಟಕ್ಕೆ ಬೆಟ್ಟವೇ ರಕ್ತದಲ್ಲಿ ಅದ್ದಿ ತೆಗೆದಂತೆ ಕೆಂಪಾಯಿತು.

ಆಶ್ವಯುಜ ಶುದ್ಧ ಪಾಡ್ಯದಂದು ಆರಂಭವಾದ ಪೂಜೆಗಳು ದುರ್ಗಾ

ಷ್ಟಮಿಯ ವೇಳೆಗೆ ಒಂದು ಘಟ್ಟಕ್ಕೆ ಬಂದು, ಆ ದಿನ ದ್ವಿಜರು ಮಂತ್ರ-ತಂತ್ರೋಕ್ತವಾಗಿ, ಮಹಿಷಾಸುರ ಮರ್ದಿನಿಯಾದ ದುರ್ಗಾಮಾತೆಯನ್ನು ಆರಾಧಿಸಿ ರಾಜಧಾನಿಯ ಹೊರವಲಯದಲ್ಲಿ 'ರಣಸ್ತಂಭ' ವನ್ನು ಸ್ಥಾಪಿಸಿ, ಅದಕ್ಕೆ ಸಲ್ಲಬೇಕಾದ ಪೂಜೆಗಳನ್ನೆಲ್ಲಾ, ಮಿಂದುಮಡಿಯುಟ್ಟ ದೊರೆಯಿಂದ, ಸಕಲ ಸೇನಾಧಿಪತಿ ಗಂಗರಾಜರಿಂದ ಮಾಡಿಸಿದರು.

ಅದರ ಮಾರನೆಯ ದಿನವೇ ಆಯುಧಪೂಜೆ ನಡೆಯಿತು.

ದೊರೆಯಂತೆಯೇ ಲಕ್ಷಾಂತರ ಸೇನೆಯೂ, ತನ್ನ ತನ್ನ ಆಯುಧ, ವಾಹನಗಳನ್ನು ಅರ್ಚಿಸಿ ವಿಜಯ ಕೋರಿತು.

ಆ ದಿನ ರಾತ್ರಿ - ಮರುದಿನವೇ ಸೀಮೋಲ್ಲಂಘನೆಯ ದಿನವಾದುದರಿಂದ - ಯುದ್ಧಭೂಮಿಗೆ ತೆರಳಲಿದ್ದ ವಿಷ್ಣುವರ್ಧನನೂ, ರಾಜಸೋದರ ಉದಯಾದಿತ್ಯನೂ, ಗಂಗರಾಜರೇ ಮೊದಲಾದ ದಂಡನಾಯಕರೂ ಮಡಿಯಲ್ಲೇ ದರ್ಭೆಯ ಮೇಲೆ ಮಲಗಿದರು.

ಆದರೆ ನಿದ್ರೆ ಮಾತ್ರ ಯಾರೊಬ್ಬರಿಗೂ ಬರಲಿಲ್ಲ. ಎಲ್ಲರಿಗೂ ಒಂದು ಗಳಿಗೆ ಕಣ್ಣು ಹತ್ತಿ ಏನಾದರೂ ಶುಭಸ್ವಪ್ನವಾಗಲಿ ಎನಿಸಿದರೂ, ಹಗಲು ಎಷ್ಟು ಹೊತ್ತಿಗಾದೀತೊ, ಎಷ್ಟು ಹೊತ್ತಿಗೆ ಸೇನೆ ಹೊರಟೀತೋ ಎಂಬ ಕಾತರದಲ್ಲಿ, ಮನೆಯವರೊಂದಿಗೆ ಹೊರಡುವ ಹೊತ್ತಿನ ನಾನಾ ಮಾತು ಕಥೆಗಳನ್ನಾಡುವ ಅವಸರದಲ್ಲಿ, ರೆಪ್ಪೆಗೆ ರೆಪ್ಪೆ ತಾಗಲಿಲ್ಲ.

ಉಳಿದವರಂತೆ ವಿಷ್ಣುವರ್ಧನನಿಗೂ ಆ ರಾತ್ರಿ ಜಾಗರಣೆಯೇ ಆಯಿತು. ವಿಷ್ಣುವರ್ಧನ ಎಷ್ಟು ಹೊತ್ತಾದರೂ ನಿದ್ದೆ ಮಾಡದುದನ್ನು ಕಂಡ ಆತನ ಪಕ್ಕದಲ್ಲಿ ಕುಳಿತ ಶಾನ್ತಲಾದೇವಿ—

'ನಾಳೆನಿಂದ ಹೇಗೋ ಏನೋ. ಇವೊತ್ತಾದರೂ ಒಂದು ಗಳಿಗೆ ಎಲ್ಲವನ್ನೂ ಮರೆತು ನಿದ್ರೆಮಾಡಿ'

—ಎಂದಳು.

'ನನಗೆ ಬುದ್ಧಿ ಹೇಳುವ ಜಾಣೆ, ನೀನೇಕೆ ಮಲಗಬಾರದು. ನಾಳೆನಿಂದ ನನ್ನಂತೆ ನಿನಗೂ ನಿದ್ರೆ ವೈರಿ.'

'ಅದೇನೊ ನಿಜ. ನಾಳೆನಿಂದ ಒಂಟಿಯಾಗಿ, ಹಾಸಿಗೆಯಲ್ಲಿ ಹೊರಳುವುದು ಇದ್ದೇ ಇದೆ. ಅದಕ್ಕೇ ಅವಕಾಶವಿರುವಷ್ಟು ಹೊತ್ತನ್ನು ನಿಮ್ಮ

ಬಳಿಯೇ ಕಳೆಯಬೇಕೆಂದು ಕೂತಿರುವುದು.'

'ಅಷ್ಟಕ್ಕೇ ಆದರೆ, ಆಗಬಹುದು. ಬೇರೆ ಚಿಂತೆ, ಭಯವೇನೂ ಇಲ್ಲ ತಾನೇ.'

'ಚಿಂತೆ-ಭಯ-ಏಕೆ?'

'ನಾನು ಯುದ್ಧಭೂಮಿಗೆ ತೆರಳುತ್ತೇನೆಂದು. . . .'

'ಊಹೂ - ಆ ಭಯವಿದ್ದರೆ, ಆದಿಯಮನ ಹೆಂಡತಿ, ಮಕ್ಕಳಿಗೆ ಇರಬೇಕು. ನನಗಿರುವ ಯೋಚನೆಯೇ ಬೇರೆ?'

'ಏನು?'

'ನಿಮ್ಮೊಂದಿಗೆ ವಿವಾಹ ವೇದಿಕೆ ಏರಿದಂತೆ, ಸಿಂಹಾಸನವನ್ನು ಹತ್ತಿದ್ದಾಯಿತು. ಇನ್ನೊಂದು ಉಳಿಯಿತು. . . .'

'ಯಾವುದು?'

'ರಣಾಶ್ವವನ್ನು ಹತ್ತುವುದು. ಆ ಭಾಗ್ಯವೊಂದರಲ್ಲಿ ಪಾಲು ಕೊಡಲಿಲ್ಲವಲ್ಲಾ, ಎಂದು ನನಗೂ ಆ ಯೋಗ ಎಂದು ಚಿಂತಿಸುತ್ತಿದ್ದೇನೆ. ಅದೇಕೊ ನಾನು ಕಾಣೆ. ಅಂತೂ ಈಚೆಗೆ ಏಕೋ ಕತ್ತಿ ಹಿಡಿಯಬೇಕು, ನಿಮ್ಮಂತೆಯೇ ಸಮರಾಂಗಣದಲ್ಲಿ ರಕ್ತಸ್ನಾನ ಮಾಡಿ, ವೈ ತಂಪುಮಾಡಿಕೊಳ್ಳಬೇಕು ಎಂಬ ಬಯಕೆ ಬಹುವಾಗಿದೆ—'

—ಆ ಮಾತನ್ನು ಶಾನ್ತಲಾದೇವಿ ಲಘುವಾಗಿಯಾಗಲಿ, ನಗೆದನಿಯಲ್ಲಾಗಲಿ ಹೇಳದೆ, ಏನೋ ವಿಚಿತ್ರ ಉತ್ಕಟತೆ ತುಂಬಿದ ಧ್ವನಿಯಲ್ಲಿ ಹೇಳಿದಳು.

ಆ ಮಾತನ್ನು, ಆಕೆ ಆ ಮಾತನ್ನು ಹೇಳಿದ ರೀತಿಯನ್ನು ಕೇಳಿ, ವಿಷ್ಣುವರ್ಧನನಿಗೆ ಆಶ್ಚರ್ಯವಾಯಿತು.

'ಇದೆಂಥ ವಿಚಿತ್ರ ಬಯಕೆ ನಿನ್ನದು ಶಾನ್ತಲಾ? ನಾನು ಯುದ್ಧಕ್ಕೆ ಹೋಗುವೆನೆಂದು ದಿನವೂ ಆ ಕನಸು ಕಾಣುತ್ತಿರುವೆಯಾ?'

—ಎಂದು ಮಲಗಿದಂತೆಯೇ ಮಗ್ಗುಲಾಗಿ, ಬಳಿಯಲ್ಲಿ ಕುಳಿತ ಶಾನ್ತಲಾದೇವಿಯ ಬಾಳೆಯದಿಂಡಿನಂತೆ ದುಂಡಾದ, ನಯವಾದ ತೋಳನ್ನು ಸಸ್ನೇಹವಾಗಿ ನೇವರಿಸಿ ಕೇಳಿದ.

'ಇದು ವಿಚಿತ್ರ ಬಯಕೆಯಲ್ಲ. ವಸಂತಕಾಲದಲ್ಲಿ ಕೋಗಿಲೆ

ಕೂಗುವುದು ವಿಚಿತ್ರವೇ ?'

'ಅಲ್ಲ. ಆದರೆ ಹೆಣ್ಣು ರಕ್ತಸ್ನಾನ, ರಣಕೇಳಿಯನ್ನು ಬಯಸುವುದು ವಿಚಿತ್ರವಲ್ಲವೆ ?'

'ಊಹೂ.'

'ಏಕೆ ?'

'ಇಷ್ಟು ದಿನ, ಈಗ ಒಂದು ಪಕ್ಷದಿಂದ ನಿಮಗೆ ಏನೋ ಮಾತು ಹೇಳಬೇಕೆಂದಿದ್ದೆ. ಹೇಗೆ ಹೇಳುವುದು ಎಂದು ಸುಮ್ಮನಾಗಿದ್ದೆ. ಆದರೆ ಈ ದಿನ....'

'ಏನು ಹೇಳಬೇಕೆಂದಿದ್ದೆ. ನನ್ನನ್ನೂ ಯುದ್ಧಕ್ಕೆ ಕರೆದುಕೊಂಡು ಹೋಗಿ ಎಂದು ಕೇಳಬೇಕೆಂದಿದ್ದೆಯಾ ? ಮೊದಲೇ ಹೇಳಬೇಕಾಗಿತ್ತು. ನಾನು ಅದಕ್ಕೆ ಅಡ್ಡಿ ಮಾಡುತ್ತೇನೆಂದು ಹೆದರಿದೆಯಾ ?'

'ಊಹೂ. ನೀವಲ್ಲ ಅಡ್ಡಿಯಾದುದು ?'

'ಮತ್ತೆ .... ಅವ್ವೆ ಬೇಡವೆಂದಳೇ ?'

'ಅಲ್ಲ.'

'ಮತ್ತೆ ಯಾರು ಅಡ್ಡಿಯಾದರು ?'

—ಅಚ್ಚರಿಯಾಗಿ ಕೇಳಿದ ವಿಷ್ಣುವರ್ಧನ.

'ಎಲ್ಲವನ್ನು ನಾನೇ ಬಾಯಿಬಿಟ್ಟು ಆಡಬೇಕೇ ? ಬಾಯಿಬಿಟ್ಟು ಆಡದ ಮಾತಿನ ಅರ್ಥ ತಿಳಿದುಕೊಳ್ಳುವ ಜಾಣ್ಮೆ ಪ್ರಭುಗಳಿಗೆ ಇದೆ ಎಂದಿದ್ದೆ ....'

ಕಣ್ಣ ನೋಟದ ಅಲುಗಾಟದ ಮೇಲೆ ಕಾವ ಕಟ್ಟುವ ಜಾಣ್ಮೆಯನ್ನು ಭಗವಂತ ಸ್ತ್ರೀಯರೊಬ್ಬರಿಗೇ ಅನುಗ್ರಹಿಸಿರುವುದು. ನನ್ನಂಥಾ ಗಂಡಸರಿಗೆ ಅದು ತಿಳಿಯದ ವಿದ್ಯೆ. ಆಯಿತೇ—ನನ್ನ ಅಜ್ಞತೆಯನ್ನು ಒಪ್ಪಿಕೊಂಡೆನಲ್ಲಾ—ನಿನ್ನ ಉತ್ಸಾಹಕ್ಕೆ ಅಡ್ಡಿಯಾದವರು ಯಾರು ಹೇಳು ?'

'ನಾನೇ ಆಡಿದರೆ—ನಾಚ್ಗೇಡಿ ಎನ್ನುತ್ತೀರೋ ಏನೋ.'

'ಊಹೂ. ಯಾವುದೋ ಮಾತಿಗೆ ಬಲವಾಗಿಯೇ ಪೀಠಿಕೆ ಹಾಕುತ್ತಿದ್ದೀಯ. ಅದೇನು ಹೇಳು.'

'ನನ್ನ....ನನ್ನ....ಗರ್ಭದಲ್ಲಿ ಕುಳಿತ....ನಿಮ್ಮ ಮಗ?'

—ಲಜ್ಜೆಯಿಂದ ಅವನತಶಿರಳಾಗಿ, ನುಡಿ ತೊದಲಾಗಿ ಹೇಳಿ, ತೋಳಿನಲ್ಲಿ ಮುಖ ಮರೆಸಿಕೊಂಡಳು ಶಾನ್ತಲಾದೇವಿ.

'ನಿಜವೇ....ಹೌದೇ....'

—ಧಿಗ್ಗನೆ ಎದ್ದು ಕುಳಿತು ಬಳಿಯಲ್ಲಿದ್ದ ಪತ್ನಿಯನ್ನು, ಆನಂದೋದ್ರೇಕದಲ್ಲಿ ಆಲಿಂಗಿಸಿ ಕೇಳಿದ ವಿಷ್ಣುವರ್ಧನ—

'ಮೊದಲೇ ಏಕೆ ಹೇಳಲಿಲ್ಲ?'

'ಅತ್ತೆಯವರು ಹೇಳು ಎಂದರು. ನಿನಗಾಗದಿದ್ದರೆ ನಾನೇ ಹೇಳುತ್ತೇನೆ ಎಂದರು. ಆದರೆ ಯುದ್ಧ ಚಿಂತೆಯಲ್ಲಿದ್ದ ನಿಮಗೆ ಹೇಳಿ, ಮನಸಿಗೆ ಯೋಚನೆ ಮಾಡುವುದೇಕೆಂದು ನಾನೇ ಬೇಡವೆಂದೆ.'

'ಹುಚ್ಚಿ....ಹುಚ್ಚಿ....ಈ ಸಂತೋಷಕ್ಕೆ ಯೋಚನೆ ಎಂದು ಸಲ್ಲದ ಹೆಸರಿಡುತ್ತಾರೆಯೇ? ನಿನ್ನನ್ನು ಅಂದೇನು ಉಪಯೋಗ—ದಿನ ದಿನಕ್ಕೆ ನಿನ್ನ ಸೌಂದರ್ಯ ಪುಟಕ್ಕಿಟ್ಟ ಮಿಸುನಿಯಂತಾಗುತ್ತಿರುವುದನ್ನು ನೋಡಿದಾಗ—ನಾನೇ ಊಹಿಸಬೇಕಾಗಿತ್ತು. ನನ್ನದೇ ತಪ್ಪಾಯಿತು.'

'ತಪ್ಪು ನಿಮ್ಮದೇ ಎಂದು ಒಪ್ಪಿಕೊಂಡರೆ, ಆದಷ್ಟು ಬೇಗ ಈ ಯುದ್ಧ ಮುಗಿಸಿಕೊಂಡು ಬಂದುಬಿಡಿ. ನೀವು ಯುದ್ಧಕ್ಕೆ ಹೋದಾಗ ನಿಮ್ಮನ್ನು ಬಿಟ್ಟು ಹೇಗಿರುವುದು ಎಂದು ಯೋಚಿಸುತ್ತಿದ್ದೆ. ಅದನ್ನು ಮರೆಯಲು ದೇವರೇ ಈ ಸಂತೋಷದ ದಾರಿ ತೋರಿಸಿದ. ಆದರೆ, ಯುದ್ಧವನ್ನು ಮಾತ್ರ ಬೇಗ ಮುಗಿಸಿಕೊಂಡು, 'ಆ ಹೊತ್ತಿ'ಗಾದರೂ ಬಂದುಬಿಡಿ. ಹಾಗೇ ನೀವು ನನಗೊಂದು ಮಾತು ಕೊಡಬೇಕು....'

'ಏನು ಬೇಕು-ಕೇಳು? ಮೂರು ಲೋಕದ ಸಿರಿ ಬೇಕೆಂದರೂ ತಂದು ನಿನ್ನ ಕಾಲ ಬಳಿ ರಾಶಿ ಹಾಕುತ್ತೇನೆ.'

'ನಮ್ಮ ಅರಮನೆಯಲ್ಲಿರುವುದು ದೇವೇಂದ್ರನ ಆಸ್ಥಾನದಲ್ಲಿ ತಾನೇ ಏನಿದ್ದೀತು! ಅದಲ್ಲ—'

'ಮತ್ತೇನು?'

'ಒಂದು—ಯುದ್ಧ ಶಿಬಿರದಲ್ಲಿ ನನ್ನ ಚಿಂತೆ ಮಾಡಬಾರದು. ಮತ್ತೊಂದು ತಲಕಾಡಿನ ಯುದ್ಧದಲ್ಲಿ, ನೀವು ಗೆದ್ದಾಗ, ಅಲ್ಲಾಗಲಿ, ದಾರಿ

ಯಲ್ಲಿ ಕೈಸೆರೆ ಹಿಡಿಯುವ ಊರುಗಳಲ್ಲಾಗಲಿ, ಎಲ್ಲೂ ಯಾವ ಹೆಂಗಸು, ಮಕ್ಕಳಿಗೂ ನಮ್ಮ ಸೇನೆ ಹಿಂಸೆ ಮಾಡದಂತೆ ನೋಡಿಕೊಳ್ಳಿ. ನೀವೇ ಯುದ್ಧ ರಂಗಕ್ಕೆ ಹೋಗಲು ನಾನು ಒಪ್ಪಿದುದು—ಈ ಕಾರಣಕ್ಕಾಗಿ. ಸಣ್ಣ ತುರು ಗಾಳಗವೆಂದರೂ, ಹಸು ಕರು ಹಿಡಿಯುವುದಲ್ಲದೆ, ಶತ್ರು ಹೆಂಗಸರ ಮಾನ ಭಂಗ ಮಾಡುವುದು ಸೈನಿಕರಿಗೆ ವಾಡಿಕೆಯಾಗಿ ಹೋಗಿದೆ. ನಾನು ಬಲ್ಲೆ. ನಾನು ಬೇಡ ಎಂದರೆ ಹುಲಿ ಮಾಂಸ ತಿನ್ನುವುದನ್ನು ಬಿಟ್ಟು, ಹುಲ್ಲು ಮೇಯುವುದಿಲ್ಲ. ಆದರೆ ಇದೊಂದು ಯುದ್ಧದಲ್ಲಾದರೂ ಈ ಘೋರ ಬೇಡ'

—ಎಂದು ಕಕ್ಕುಲತೆಯಿಂದ ಪತಿಯನ್ನು ಬೇಡಿದಳು ಶಾನ್ತಲಾದೇವಿ.

'ಆಯಿತು. ಹಾಗಾಗದಂತೆ ನೋಡಿಕೊಳ್ಳುತ್ತೇನೆ. ಗಂಗರಾಜರಿಗೆ ಹೇಳಿ, ಸೇನೆಯಲ್ಲಿ ಡಂಗುರ ಸಾರಿಸುತ್ತೇನೆ. ನೀನು ನಿಶ್ಚಿಂತಳಾಗಿರು.'

—ಎಂದು ಆಕೆಗೆ ವಚನವಿತ್ತ ವಿಷ್ಣುವರ್ಧನ.

'ನೀವಷ್ಟು ಹೇಳಿದರೆ ಸಾಕು-ಹತ್ತು ಬಳ್ಳ ಹಾಲು ಕುಡಿದಷ್ಟು ಸಂತೋಷವಾಯಿತು. ಇಷ್ಟು ದಿನ ಈ ಮಾತೆಲ್ಲಾ ಹೇಳಬಾರದು ಎಂದು ಕೊಂಡಿದ್ದೆ. ಈ ದಿನ ಕರಳು ತಡೆಯಲಿಲ್ಲ.'

'ಹೇಳಿ ಒಳ್ಳೆಯದೇ ಮಾಡಿದೆ ದೇವಿ. . . .'

'ಏನು ಒಳ್ಳೆಯದೋ-ನಿಮ್ಮ ನಿದ್ದೆ ತಪ್ಪಿಸಿದೆ.'

'ಊಹೂ-ಈ ಸಮರದಲ್ಲಿ ಗೆಲುವು ನಮ್ಮದೇ ಎಂಬ ಭರವಸೆಯನ್ನು ಮೂಡಿಸಿದೆ. ಈಗ ನೀನು ಹೇಳುವುದಕ್ಕಿಂತ ಇನ್ನೇನು ಶುಭಶಕುನ ಬೇಕು ಹೇಳು.'

—ಎಂದ ಉತ್ಸಾಹದಿಂದ ವಿಷ್ಣುವರ್ಧನ.

'ಮನಸ್ಸಿಗೆ ಆ ನೆಮ್ಮದಿ ಇದ್ದರೆ ಒಂದು ಗಳಿಗೆ ಮಲಗಿ ನಿದ್ರೆಮಾಡಿ'

—ಎಂದಳು ಶಾನ್ತಲಾದೇವಿ.

'ಇದು ನೀನು ನಿದ್ರೆ ಕೆಡುವ ಕಾಲವಲ್ಲ. ಮಲಗು.'

—ಎಂದು ವಿಷ್ಣುವರ್ಧನ ಪತ್ನಿಗೆ ಹೇಳಿದ.

ಒಬ್ಬರು ಮತ್ತೊಬ್ಬರಿಗೆ 'ನಿದ್ರೆ ಮಾಡು' ಎಂದು ಹೇಳಿದರೇ ವಿನಾ, ಇಬ್ಬರೂ ಮಲಗಲಿಲ್ಲ.

ಅವರಿಬ್ಬರೂ ಹಾಗೆ ಮಾತಿನಲ್ಲಿ ಕಾಲ ಕಳೆಯುತ್ತಿರುವಾಗಲೇ, ಇರುಳು ಸವೆದು, ವಿಜಯ ಯಾತ್ರೆ ಹೊರಟ ಹೊಯ್ಸಳ ಸೇನೆಗೆ ದಿಗಂಗನೆ ಎತ್ತಲೆಂದು ತಂದ ಕುಂಕುಮಾರತಿಯ ಹೊಂದಳಿಗೆಯಂತೆ, ಮೂಡಲಲ್ಲಿ ರವಿ ಮೂಡಿದ.

೮

# ಪ್ರಸ್ಥಾನ ಭೇರಿ

ಶುಭ ಬ್ರಾಹ್ಮೀ ಮುಹೂರ್ತದಲ್ಲಿ ಮೊರೆಯಲಾರಂಭಿಸಿದ ಸನ್ನಾಹ ಭೇರೀರವವನ್ನು ಕೇಳಿ, ಜಾಗ್ರತವಾದ ಹೊಯ್ಸಳ ಸೇನೆ, ಪ್ರಯಾಣ ಸನ್ನದ್ಧವಾಗಿ, ತರಂಗ ತರಂಗವಾಗಿ ಬಂದು, ನಿಯತ ಕಾಲಕ್ಕೆ 'ರಣ ಗಂಭ'ದ ಬಯಲಲ್ಲಿ ಕಲೆತವು. ಕಾರ್ಗಾಲದ ಕಡಲ ತೆರೆಯಂತೆ, ಒಂದನ್ನು ಹಿಂಬಾಲಿಸಿ ಮತ್ತೊಂದು, ಕಾಲಾಳು ತಂಡಗಳು, ಬಿಲ್ಗಾರರ ಗುಂಪುಗಳು, ರಥದ ಸಾಲುಗಳು, ಆನೆ ಕುದುರೆಯ ಪಡೆಗಳು, ನೋಡುವ ಜನರ ಎದೆಯಲ್ಲಿ, ಭಯವನ್ನೂ, ಆಶ್ಚರ್ಯವನ್ನೂ ಮೂಡಿಸುತ್ತಾ ಬಂದು, ತಮ್ಮ ಚೂಣಿಯ ನಾಯಕರ ನಿರ್ದೇಶದಂತೆ ಗೊತ್ತಾದ ಸ್ಥಳದಲ್ಲಿ ನಿಂತಿತು. ಸೇನೆಯ ಒಂದೊಂದು ತರಂಗ ತನ್ನ ವಿಶಿಷ್ಟ ವಾದ್ಯರವದೊಡನೆ ಬಂದು, ಬಯಲಿನಲ್ಲಿ ನಿಂತಾಗಲೂ, ಸೇನೆಯನ್ನು ನೋಡಲು ಬಯಲಿನ ಸುತ್ತಲೂ ನೆರೆದ ಅಸಂಖ್ಯಾತ ಜನಕೋಟಿ, ಮುಗಿಲು ಮಾರ್ದನಿಸುವಂತೆ ಕೇಕೆ ಹಾಕಿತು.

ಸಕಲ ಸೇನೆ, ದೊರೆ, ದಂಡನಾಯಕರು ಎಲ್ಲರೂ ಬಂದ ಬಳಿಕ, ದ್ವಿಜರು 'ರಣಸ್ತಂಭಾರ್ಚನೆ' ಮಾಡಿ, ಸಮರ ವಿಜಯವನ್ನು ಕೈಗೂಡಿಸುವ ಮಂತ್ರಗಳನ್ನು ಪಠಿಸಿ, ದೊರೆಗೂ, ಸಕಲ ಸೇನಾಧಿಪತಿ ಗಂಗರಾಜರಿಗೂ ವೀರ ಕಂಕಣ ಕಟ್ಟಿದರು. ವೇದೋಕ್ತವಾದ ಪೂಜೆ, ಹೋಮ ಹವನಗಳು ನಡೆದ ಬಳಿಕ, ಮೂರು ನಾಲ್ಕು ಮಂದಿ ಭಾಷೆಯಾಳುಗಳು ರಣಗಂಭಕ್ಕೆ ತಮ್ಮ ತಲೆಯೊಪ್ಪಿಸಿ, ದೊರೆಗೆ ದಿಗ್ವಿಜಯ ಕೋರಿದರು. ಒಂದೊಂದು ಬಲಿ ಯೊಪ್ಪಿಸಿದಾಗಲೂ ಸಹಸ್ರಾರು ರಣವಾದ್ಯಗಳು ಮೊರೆದು, ದಿಕ್ಕುಗಳನ್ನು ಬೆದರಿಸಿದುವು. ಒಮ್ಮೊಮ್ಮೆ ರಣವಾದ್ಯ ಮೊರೆದಾಗಲೂ, ಸೇನಾಕೋಟಿ ಹರ್ಷೋದ್ಗಾರದ ಕೇಕೆಯನ್ನು ಹಾಕಿದಾಗಲೂ, ಆ ಸದ್ದು, ರಾಜಧಾನಿಯ

ಬಳಿಯ ಮೂರು ಬೆಟ್ಟದ ಬಂಡೆಗಳಿಂದಲೂ ಮಾರ್ದನಿಸಿ, ಉತ್ಸಾಹ ಮತ್ತ ನಾದ ಬೆಟ್ಟಗಳೂ ಜೀವದಾಳಿ ಹರ್ಷೋದ್ಗಾರ ಮಾಡುತ್ತಿರುವವೇನೋ ಎಂಬ ಭ್ರಾಂತಿಯನ್ನು ಮೂಡಿಸಿದವು

ಆ ಬಳಿಕ, ಪ್ರಚಂಡದಂಡನಾಯಕ ಗಂಗರಾಜರು ಶತ್ರು ಸಂಕೇತ ವಾಗಿ ಸಿಲ್ಲಿಸಿದ ಬಾಳೆಯ ದಿಂಡುಗಳನ್ನು ತನ್ನ ಹರಿತವಾದ ಕರವಾಳದಿಂದ ಕತ್ತರಿಸಿ, ಆಗ ಮೂಡಿದ ಹರ್ಷೋದ್ಗಾರದ ಸದ್ದು ಅಡಗಿದ ಬಳಿಕ, ಮುಗಿಲ ಗುಡುಗಿನಂತೆ ಮೊಳಗುವ ಧ್ವನಿಯಲ್ಲಿ ಹೇಳಿದರು—

'ಹೊಯ್ಸಳ ಸಾಮ್ರಾಜ್ಯ ರಕ್ಷಣಾ ದಕ್ಷರಾದ ವೀರ ಪಟುಭಟರೇ— ಇಂದು ನಮ್ಮೆಲ್ಲರ ಸತ್ವಪರೀಕ್ಷೆಯ ಸಮಯ. ಹೊಯ್ಸಳ ರಾಜ್ಯ ಲಕ್ಷ್ಮಿಯ ಆಜನ್ಮವೈರಿಗಳಾದ ಚೋಳರನ್ನು ಮರ್ಧಿಸಿ, ಅವರ ಹೆಣಗಳ ಬಣಬೆಯ ಮೇಲೆ, ನಮ್ಮ ವಿಜಯಧ್ವಜವನ್ನು ಹಾರಿಸುವ ಹೊತ್ತು ಸನ್ನಿಹಿತವಾಗಿದೆ. ಈ ಬಾರಿಯ ಸಮರದಲ್ಲಿ ಚೋಳಬಲ ಸಂಪೂರ್ಣವಾಗಿ ಸೋಲಿಸಲ್ಪಟ್ಟು, ಮತ್ತೆಂದೂ ನಮ್ಮ ದೇಶದತ್ತ ತಲೆಯಿಕ್ಕದಂತಾಗ ಬೇಕೆಂಬುದು ಪ್ರಭುಗಳ ಮಹದಾಶಯ. ಆ ದಿವ್ಯ ಆಶಯವನ್ನು ಭವ್ಯ ಸತ್ಯವಾಗಿ ಮಾಡುವ ಶಕ್ತಿ ಸಾಮರ್ಥ್ಯಗಳು, ಶ್ರೀ ವಾಸನ್ತಿಕಾದೇವಿಯ ಅನುಗ್ರಹದಿಂದ, ನಮ್ಮೆಲ್ಲರ ತೋಳುಗಳಲ್ಲಿಯೂ ನೆಲೆಸಿದೆ. ಅಂತೆಯೇ ಯಾವ ಭಯಕ್ಕೂ ಅಳುಕದ ಭೀಮಬಲ, ಯಾವ ಲೋಭಕ್ಕೂ ಸೋಲದ ನಿಷ್ಠಾಶಕ್ತಿಗಳ ಅಕ್ಷಯಭಂಡಾರ ನಮ್ಮಲ್ಲಿದೆ ಎಂಬ ನಂಬಿಕೆಯೂ ನನು ಗಿದೆ. ಆ ನಿಮ್ಮ ಪ್ರಚಂಡಬಲ, ಇಂದು ಸಹಸ್ರಮಡಿಯಾಗಿ ವೃದ್ಧಿತವಾಗಲಿ. ರೂಕ್ಷ ರಾಕ್ಷಸಮರ್ಧನ ಸಮಯದಲ್ಲಿ ದೇವತಾ ಸೇನೆಯ ತೋಳಿನಲ್ಲಿ ವಿಝೃಂಭಿಸಿದ ಬಲ, ರಾವಣ ಪ್ರಾಣಹರಣದ ಸಮಯದಲ್ಲಿ ಕಪಿಸೇನೆಯ ಬಾಹುಗಳಲ್ಲಿ ಪ್ರಜ್ವಲಿಸಿದ ಶಕ್ತಿ, ಇಂದು ರಣಚಂಡಿಯ ಹರಕೆಯಿಂದ ನಿಮ್ಮದಾಗಲಿ.

'ಈ ಗಳಿಗೆಯಲ್ಲಿ ಒರೆಗಳಚಿದ ನಿಮ್ಮ ಖಡ್ಗ ಶತ್ರು ಸಮ್ಮರ್ಧನ ಕಾರ್ಯ ಮುಗಿಯುವವರೆಗೂ ಕೆಳಗಿಳಿಯದಿರಲಿ. ಹೊಯ್ಸಳ ಸೈನಿಕರಲ್ಲಿ ಒಬ್ಬರ ಬೆನ್ನನ್ನೂ ಶತ್ರುಸೇನೆ ಕಾಣದಂತಾಗಲಿ.'

—ಎಂದು ಹೇಳಿ ಸೇನೆಯನ್ನು ಹರಸಿದರು.

ಆ ಬಳಿಕ, ದ್ವಿಜರು ದೇವತಾ ಗೃಹಗಳ ತೀರ್ಥ ಪ್ರಸಾದವನ್ನು, ಇಂದ್ರರು ಬಸದಿಗಳ ಗಂಧೋದಕ-ಸೇಸೆಗಳನ್ನು ದೊರೆಗೆ, ದಂಡನಾಯಕರಿಗೆ ನೀಡಿದ ಬಳಿಕ, ನೂರಾರು ಜನ ಮುತ್ತೈದೆಯರು, ದೊರೆಗೆ ದಂಡನಾಯಕರಿಗೆ ವಿಜಯಾರತಿಯನ್ನೆತ್ತಿ, ಹಣೆಗೆ ಕುಂಕುಮವಿಟ್ಟರು.

ಆ ಕಾರ್ಯಗಳೆಲ್ಲವೂ ಮುಗಿದ ಬಳಿಕ, ಗಂಗರಾಜರ ಸೂಚನೆಯಂತೆ ಪ್ರಸ್ಥಾನ ಭೇರಿಗಳು ಮೊಳಗಲಾರಂಭಿಸಿದವು. ಅದರೊಂದಿಗೇ, ಅದುವರೆಗೆ, ಕಡೆದ ವಿಗ್ರಹಗಳಂತೆ ನಿಂತ, ತಮ್ಮ ತಮ್ಮ ಚೂಣಿಗಳಿಗೆ ಚಲನೆಯ ಅಪ್ಪಣೆಯನ್ನು ಕೊಡುವ ದಳಪತಿಗಳ ಕೂಗಿನ ಸದ್ದು, ನಿಂತ ಆನೆಗಳನ್ನು ತಿವಿದು ಎಚ್ಚರಿಸುವ ಮಾವುತರ ಕೂಗು, ಗಜಗಳ ಘೀಂಕಾರ, ಅಶ್ವಗಳ ಹೇಷಾರವದ ಸದ್ದೂ ಬಯಲನ್ನು ತುಂಬಿ ಬಿರಿಯಿತು.

ತನ್ನಿದುರು ಆರೋಹಣಕ್ಕೆ ಸಿದ್ಧವಾಗಿ ಬಂದ ರಾಜರಥವನ್ನು ಏರುವ ಮುನ್ನ ವಿಷ್ಣುವರ್ಧನ, ತನ್ನ ಬಳಿಯಿದ್ದ ಶಾನ್ತಲಾದೇವಿಯ ನೆತ್ತಿಯನ್ನು ಹರಸುವಂತೆ ನೇವರಿಸಿ—

'ನಾನಿನ್ನು ಹೋಗಿ ಬರಲೇ ಶಾನ್ತಲಾ ? ಯಾವ ಬಗೆಯ ಚಿಂತೆಗೂ ಮನಸ್ಸಿನಲ್ಲಿ ಎಡೆಕೊಡಬೇಡ. ಮೂರು ಮಾಸದ ಯುದ್ಧವನ್ನು ಮೂರೇ ದಿನದಲ್ಲಿ ಮುಗಿಸಿ ಬರುತ್ತೇನೆ. ಬಳ್ಳಿಗಾವೆಯಿಂದ ನಿನ್ನ ಅವ್ವೆಯವರನ್ನು ಕರೆಸಿಕೋ. ಮಾವಯ್ಯನವರೂ ಬಂದಿರುವುದಾದರೆ ಮತ್ತಷ್ಟು ಸಂತೋಷ'

—ಎಂದು ಹೇಳಿದ.

'ಗೆದ್ದು ಬನ್ನಿ, ನಾನು ಹೇಳಿದುದನ್ನು ಮರೆಯಬೇಡಿ. ವೃಥಾ ಹೆಂಗಸರು ಮಕ್ಕಳಿಗೆ ನೋವಾಗದಿರಲಿ.'

—ಎಂದು ತನ್ನ ಬೇಡಿಕೆಯನ್ನು ಜ್ಞಾಪಿಸಿ, ಪತಿಯ ಚರಣಗಳಿಗೆರಗಿ, ಆತನ ಪಾದಧೂಳಿಯನ್ನು ತನ್ನ ನೆತ್ತಿಗಿರಿಸಿಕೊಂಡಳು ಶಾನ್ತಲಾದೇವಿ.

'ಮಹಾರಾಜ್ಞಿಯವರ ಆಜ್ಞೆಯನ್ನು ಮೀರುವ ಉನ್ಮತ್ತರಾರೂ ಹೊಯ್ಸಳ ರಾಜ್ಯದಲ್ಲಿಲ್ಲ ದೇವಿ.'

ಎಂದು ಆಕೆಗೆ ಆಶ್ವಾಸನವಿತ್ತು, ಹಿರಿಯರಿಗೆ ಗುರುಜನರಿಗೆ ವಂದಿಸಿ ವಿಷ್ಣುವರ್ಧನ ರಥಾರೋಹಣ ಮಾಡಿದ.

ಆತನು ರಥವನ್ನೇರಿದ ಕೂಡಲೇ, ಚಂಡೆ, ತಮಟೆ, ಕೊಂಬು,

ಕಹಳೆ–ಮೊದಲಾದ ನೂರಾರು ರಣವಾದ್ಯಗಳ ಮೊಳಗು, ಸೈನಿಕರ ಉತ್ಸಾಹ ಮತ್ತು ರಣಕೇಕೆಯ ಅಬ್ಬರ ಹೊಮ್ಮಿ ಹೊರಸೂಸಿ, ದ್ವಾರಸಮುದ್ರದ ಕೆರೆಗಳ ನೀರು, ಬಿರುಗಾಳಿಯ ಹೊಯ್ಲಿಗೆ ಸಿಕ್ಕಾಗ ಹೊಯ್ದಾಡುವಂತೆ ಹೊಯ್ದಾಡಿತು.

ವಿಷ್ಣುವರ್ಧನ, ಆತನ ಹಿಂದೆ ಗಂಗರಾಜರು, ಅವರ ಹಿಂದೆ ಉದಯಾದಿತ್ಯ, ಪುಣಿಸಮಯ್ಯ ಮೊದಲಾದ ದಂಡನಾಯಕರು, ಅವರ ಹಿಂದೆ ವೇಳೆವಡಿಚರ ಪಡೆ, ನಿಶ್ಚಯಿಸಿದ ದಿಕ್ಕಿನತ್ತ ಚಲಿಸಿದರು.

ಅವರನ್ನು ಹಿಂಬಾಲಿಸಿ, ರಥಗಳೂ, ಗಜಾಶ್ವಪಡೆಗಳೂ, ಬಿಲ್ಗಾರರೂ, ಕಾಲಾಳುಗಳೂ ಆಯುಧದ ಬಂಡಿಗಳೂ, ಬಡಗಿ ಕಮ್ಮಾರ ಮೊದಲಾದ ಕೆಲಸಗಾರರೂ, ರಣವೈದ್ಯರು, ಸೇನಾರಂಜನೆಯ ಕುಶಲರು, ವೇಶ್ಯೆಯರು, ಹರದರು ಮೊದಲಾದ ಜನ ಕುಳಿತ, ಎತ್ತು, ಕುದುರೆ, ಕತ್ತೆಗಳ ಬಂಡಿಗಳು ಸಾಲು ಸಾಲಾಗಿ ಹೊರಟವು.

ಹೋಗುತ್ತಿರುವ ಸೇನೆಯ ಕೇಕೆ, ಅವರನ್ನು ಬೀಳ್ಕೊಡುವ ಜನತೆಯ ಹರ್ಷಧ್ವನಿ, ಗಜಾಶ್ವ ರಥ ಮೊದಲಾದುವುಗಳ ಬಗೆಬಗೆಯ ಸದ್ದು ತುಂಬಿ ಕೇಳದ ಕಿವಿ ಕಿವುಡಾಯಿತು. ಪದಾಘಾತದಿಂದ ಹಬ್ಬಿದ ಧೂಳಿಯಲ್ಲಿ ಹಗಲು ಕತ್ತಲಾಯಿತು.

ಹಗಲು ಆರಂಭವಾದ ಸೇನಾಚಲನೆ, ಆದಿನ ಸಂಜೆಯವರೆಗೂ ನಡೆಯುತ್ತಲೇ ಇತ್ತು.

ಪತಿ ಹೋದ ದಿಕ್ಕನ್ನೇ ನೋಡುತ್ತಾ ನಿಂತ ಶಾಂತಲಾದೇವಿ, ಸೇನೆಯ ಸದ್ದು ಕೇಳುವಂತಾಗುವವರೆಗೂ, ಅದರ ಚಲನೆಯಿಂದ ಹುಟ್ಟಿದ ಪ್ರಚಂಡ ಧೂಳಿನ ಮೋಡ ದಿಗಂತದ ಅಂಚಿನಲ್ಲಿ ಕರಗುವವರೆಗೂ, ಹಾಗೆಯೇ ನೋಡುತ್ತಲೇ ನಿಂತಿದ್ದಳು.

ಗಳಿಗೆ ಗಳಿಗೆಗೂ ಆಕೆಯ ಹೃದಯ — 'ಬೇಗ ಬನ್ನಿ, ಗೆದ್ದು ಬನ್ನಿ. ಮೈಯ ಕೂದಲೂ ಕೊಂಕದಂತೆ ಬನ್ನಿ'—ಎಂದು ಬೇಡುತ್ತಿತ್ತು.

ಶಾಂತಲಾದೇವಿಯ ಹೃದಯದ ಬೇಡಿಕೆಯೇ ರಾಜಧಾನಿಯ, ಹೊಯ್ಸಳರಾಜ್ಯದ ಕೋಟಿ ಕೋಟಿ ಮಾತೆಯರು, ಮಡದಿಯರು, ಸಹೋದರಿಯರು, ಮಕ್ಕಳು ಮರಿಗಳ ಹೃದಯದಲ್ಲೂ ಮಾರ್ದನಿಸುತ್ತಿತ್ತು.

೯

# ಅಚ್ಚರಿಯ ಅಪ್ಪಣೆ

ಶುಭ ದಶಮಿಯ ದಿನ ದ್ವಾರಸಮುದ್ರದಿಂದ ಸೀಮೋಲ್ಲಂಘನೆ ಮಾಡಿ ತಲಕಾಡಿನತ್ತ ನಡೆದ ಹೊಯ್ಸಳ ಸೇನೆ, ಮಾರ್ಗ ಮಧ್ಯದಲ್ಲಿ ಯಾವ ಅಡಿ ತಡೆಯೂ ಇಲ್ಲದೆ, ಸಮರಾರಂಭದ ಉತ್ಸಾಹಭಂಗವಾಗುವಂಥ ಯಾವ ಘಟನೆಯೂ ನಡೆಯದೆ, ಮೂರು ದಿನಗಳ, ಅಲ್ಪವಿರಾಮದ ಪ್ರಯಾಣಮಾಡಿ, ಮೂರನೆಯ ದಿನ ಹೃದುವಿನಕೆರೆಯನ್ನು ಸಮೀಪಿಸಿತು.

ಹೃದುವಿನಕೆರೆ ಕನ್ನಡನಾಡಿನ ಗಡಿಯ ಗ್ರಾಮ. ಆ ಗ್ರಾಮವನ್ನು ದಾಟಿ, ನಾಲ್ಕಾರು ಗಾವುದ ಹೋದರೆ ಆಚೆಗೆ ಶತ್ರುರಾಜ್ಯ, ಚೋಳನಾಡು. ಆ ಸೀಮೆ ಸಮೀಪವಾಯಿತು ಎಂದರೆ ಸಮರವೂ ಸನ್ನಿಹಿತವಾಯಿತೆಂದೇ. ಎಂತಲೇ ಅದುವರೆಗೆ, ಕೇವಲ ಶೀಘ್ರಪ್ರಯಾಣದ ದೃಷ್ಟಿಯಿಂದ ನಡೆದ ಸೇನೆ, ಹೃದುವಿನಕೆರೆಯಲ್ಲಿ ಎರಡು ದಿನ ನಿಂತು, ಮಾರ್ಗಾಯಾಸವನ್ನು ಪರಿಹರಿಸಿಕೊಂಡು, ಶತ್ರುಸೇನೆಯನ್ನು ದಾಳಿಮಾಡಲು ಬೇಕಾದ ಸಿದ್ಧತೆ ಗಳನ್ನು ಮಾಡಿಕೊಂಡು ಮುಂದುವರಿಯಬೇಕು ಎಂಬ ಉದ್ದೇಶದಿಂದ, ಚೋಳಸೀಮೆಯನ್ನು ಕಾಣುತ್ತಿದ್ದ ಹಾಗೇ ಏರಿಹೋಗಬೇಕೆನ್ನುವ ಉತ್ಸಾಹ ತೋಳಿನಲ್ಲಿ ತುಡಿಯುತ್ತಿದ್ದರೂ, ದಂಡನಾಯಕ ಗಂಗರಾಜರು, ಸೇನೆಗೆ ಹೃದುವಿನಕೆರೆಯಲ್ಲಿ ಬೀಡು ಬಿಡಲು ಅಪ್ಪಣೆ ಮಾಡಿದರು.

ಗಂಗರಾಜರು ಸೇನೆಗೆ ವಿಶ್ರಮಿಸಿಕೊಳ್ಳಲು ಅಪ್ಪಣೆ ಕೊಟ್ಟರೂ, ಸೇನೆಗೇ ವಿಶ್ರಾಂತಿ ಪಡೆಯುವ ಅಪೇಕ್ಷೆ ಇರಲಿಲ್ಲ. ಒಂದೊಂದು ದಳ ದವರಿಗೂ—ಆದಷ್ಟು ಬೇಗ ಮಿಂಚಿನ ವೇಗದಿಂದ ಶತ್ರುಸೀಮೆಯ ಮೇಲೆ ದಾಳಿ ಮಾಡಿ, ನಾಲ್ಕಾರು ಹಳ್ಳಿಗಳನ್ನಾದರೂ ಹಿಡಿದು 'ಮೊದಲ ಗೆಲುವು ನಮ್ಮದಾಯಿತು.' ಎನಿಸಿಕೊಳ್ಳಬೇಕೆಂಬ ಚಪಲ, ಪ್ರಥಮ ವಿಜಯದ ಕಾಣಿಕೆಯನ್ನು ದೊರೆಗೆ, ದಂಡನಾಯಕರಿಗೆ ತಂದೊಪ್ಪಿಸಿ 'ಇದೋ ಮೊದಲ

ತುತ್ತು ಸ್ವೀಕರಿಸಿ' ಎಂದು, ಅವರಿಂದ ಮೆಚ್ಚುಗೆ ಪಡೆಯಬೇಕೆಂಬ ಉತ್ಸಾಹ, ಎಲ್ಲಕ್ಕಿಂತ ಹೆಚ್ಚಾಗಿ, ಚೋಳರಾಜ್ಯ ಸಮೀಪವಾಗಿ, ಹೊಯ್ಸಳ ಸೈನಿಕರು ಒಬ್ಬೊಬ್ಬರಿಗೂ, ಹಿಂದೆ ಹಲವಾರು ಬಾರಿ ಚೋಳರು ತಮ್ಮ ಸೀಮೆಯ ಮೇಲೆ ದಾಳಿಮಾಡಿದಾಗ ನಡೆಸಿದ ಅತ್ಯಾಚಾರದ ನೆನಪು ಮರುಕಳಿಸಿ, ಆ ಸೇಡನ್ನು ತೀರಿಸಿಕೊಳ್ಳಬೇಕೆಂಬ ತೃಷೆ, ಚೋಳ ಗ್ರಾಮಗಳನ್ನು ಸುಲಿದು ಹೊಯ್ಸಳ ಭಂಡಾರವನ್ನು ಬಿರಿಯುವಷ್ಟು ತುಂಬ ಬೇಕು ಎಂಬ ಆತುರ.

ಈ ಬಗೆಬಗೆಯ ಬಯಕೆಗಳ ಆತುರ-ಕಾತರದಲ್ಲಿ ಹಲವಾರು ದಳಗಳ ನಾಯಕರು ಗಂಗರಾಜರನ್ನು ಕಂಡು ಸೇನಾಬಲ ವಿಶ್ರಾಂತಿ ಪಡೆಯುತ್ತಿರುವಾಗ, ತಮ್ಮ ದಳವೊಂದು ಮುಂದೆ ನುಗ್ಗಿ ಗಡಿಯ ಹಳ್ಳಿಗಳನ್ನು ಹಿಡಿಯಲು ಅನುಮತಿ ಕೊಡಬೇಕೆಂದು ಬೇಡಿದರು.

ಆ ದಳಪತಿಗಳ ಅಪೇಕ್ಷೆ ಗಂಗರಾಜರಿಗೂ ಅಪ್ರಿಯವಾಗಿರಲಿಲ್ಲ. ಹಲವಾರು ಕಾರಣಗಳಿಂದ ಅಪೇಕ್ಷಣೀಯವೇ ಆಗಿತ್ತು. ಹತ್ತು ಹಳ್ಳಿಗಳನ್ನು ಸುಲಿದು, ನೆಲಸಮ ಮಾಡಿದರೆ, ಆ ವಾರ್ತೆ, ಹೊಯ್ಸಳ ಸೇನೆಗಿಂತಲೂ ಮುಂದಾಗಿ ಚಲಿಸಿ, ಹೊಯ್ಸಳ ಬಲವನ್ನು ಎದುರಿಸಲು ಅಪೇಕ್ಷಿಸುವವರಲ್ಲೂ ಭೀತಿಯನ್ನು ಮೂಡಿಸಿ, ಅವರ ಪ್ರತಿಭಟನಾಶಕ್ತಿಯನ್ನು ಕುಗ್ಗಿಸಬಹುದು ಎಂದೇ ತೋರಿತ್ತು.

ಉಳಿದ ವೇಳೆಯಲ್ಲಾಗಿದ್ದರೆ, ಗಂಗರಾಜರೂ ಹಿಂದೆ ಮುಂದೆ ನೋಡದೆ, ತಮ್ಮ ಬಳಿಗೆ ದಳಪತಿಗಳು ತಾವಾಗಿಯೇ ಬಂದು ಬೇಡುವುದಕ್ಕೂ ಅವಕಾಶ ಕೊಡದೆ, ತಾವೇ, ಕೆಲವು ದಳಗಳಿಗೆ ಆ ಬಗೆಯ ಅಪ್ಪಣೆ ಮಾಡುತ್ತಿದ್ದರು. ಹಾಗೆ ಅಪ್ಪಣೆ ಮಾಡುವ ಅಧಿಕಾರವೂ ಅವರಿಗಿತ್ತು. ಆದರೂ ಈ ಬಾರಿ ದೊರೆಯೂ ಸೇನೆಯೊಂದಿಗೆ ಬಂದಿದ್ದುದರಿಂದ, ತಾವೇ ದಂಡನಾಯಕರಾಗಿದ್ದರೂ, ಕೂಡಲೇ ದಾಳಿಗೆ ಅನುಜ್ಞೆ ಕೊಡದೆ—

'ಈ ದಿನ ಎಲ್ಲರೂ ವಿಶ್ರಾಂತಿ ಪಡೆಯಿರಿ. ನಾಳೆಯ ಹಗಲು ದೊರೆಗಳೊಂದಿಗೆ ಧಾಳಿಯ ಕ್ರಮ ಏನೆಂದು ಚರ್ಚಿಸಿ, ಸೂಕ್ತವಾದ ಅಪ್ಪಣೆ ಮಾಡುತ್ತೇನೆ'

—ಎಂದು ಹೇಳಿ ಕಳುಹಿಸಿಕೊಟ್ಟರು.

ಅದರಂತೆಯೇ ಮರುದಿನ ಪ್ರಾತಃಕಾಲ ಗಂಗರಾಜರು, ವಿಷ್ಣುವರ್ಧನ

ನನ್ನು, ದೊರೆಯು ಪಟ್ಟಗೃಹದಲ್ಲಿ ಭೇಟಿ ಮಾಡಿದಾಗ, ಆತನಿಗೆ ದಳಪತಿಗಳ ಅಪೇಕ್ಷೆಯನ್ನು ತಿಳಿಸಿದರು. ಅವರು ಹೇಳಿದುದೆಲ್ಲವನ್ನು ಕೇಳಿದ ವಿಷ್ಣು ವರ್ಧನ, ಒಂದು ಗಳಿಗೆ ಸುಮ್ಮನಿದ್ದು ಬಳಿಕ—

'ತಾವು ಈ ಬಾರಿಯ ರಣೋದ್ಯೋಗದ ಸರ್ವಾಧಿಕಾರಿಗಳು. ಈ ಬಾರಿ ಎಲ್ಲ ವಿಷಯಗಳಲ್ಲೂ ತಮ್ಮದೇ ಪರಮಾಧಿಕಾರ ಎಂದು ನಾವು ಮೊದಲೇ ಹೇಳಿದ್ದೆವು. ಆದರೂ ಇದೊಂದು ವಿಷಯದಲ್ಲಿ ನೀವು ನಮ್ಮನ್ನು ಕೇಳಿ ಬಳಿಕ ಹೇಳುತ್ತೇವೆ ಎಂದು ಹೇಳಿದುದು ಒಳಿತಾಯಿತು'

—ಎಂದು ಹೇಳಿದ.

'ಏಕೆ?'

—ವಿಷ್ಣುವರ್ಧನನಿಂದ ಆ ಬಗೆಯ ಮಾತನ್ನು ನಿರೀಕ್ಷಿಸದ ಗಂಗ ರಾಜರು, ಚಕಿತರಾಗಿ ಕೇಳಿದರು.

'ಈ ವಿಷಯದಲ್ಲಿ, ಈ ಮೊದಲೇ ತಮಗೆ ತಿಳಿಸಬೇಕಾದ ಮಾತೊಂದಿತ್ತು. ಸೇನೆ ರಾಜಧಾನಿಯಿಂದ ಹೊರಡುವ ಮೊದಲೇ ತಿಳಿಸಬೇಕೆಂದಿದ್ದೆವು. ಆದರೆ, ಆಗಿನ ಪ್ರಯಾಣದ ಸವರಣೆಯ ಸಂಭ್ರಮದಲ್ಲಿ ಹೇಳುವುದು ಆಗಲಿಲ್ಲ. ಅಂದು ಮರೆತು ಹೋದ ಮಾತನ್ನು ಇಂದು ನೀವಾಗಿಯೇ ನೆನಪಿಸಿ ಬಹು ದೊಡ್ಡ ಉಪಕಾರ ಮಾಡಿದ್ದೀರಿ. ಹಾಗಿಲ್ಲದಿದ್ದರೆ ಮುಂದೆ ನಾವು ವಚನ ಭ್ರಷ್ಟತೆಯ ಕಲಂಕಕ್ಕೆ ಗುರಿಯಾಗಿ, ಸಾಯುವವರೆಗೂ ಕೊರಗಬೇಕಾಗು ತ್ತಿತ್ತು.

ವಿಷ್ಣುವರ್ಧನ ಆಡಿದ ಮಾತನ್ನು ಕೇಳಿ, ಆ ಮಾತಿನ ಏನೊಂದೂ ಅರ್ಥತಿಳಿಯದ ಗಂಗರಾಜರ ಅಚ್ಚರಿ ಮತ್ತಷ್ಟು ಹೆಚ್ಚಿತು. ಆ ಆಶ್ಚರ್ಯ ದಲ್ಲೇ—

'ಏನು? ಪ್ರಭುಗಳಿಗೆ ವಚನ ಭ್ರಷ್ಟತೆಯ ಕಲಂಕ ಪ್ರಾಪ್ತವಾಗುತ್ತಿತ್ತೇ! ಹಾಗಿದ್ದರೆ, ಭಗವಾನ್ ಆದಿನಾಥನೇ ನನಗೆ ಅಪ್ಪಣೆ ಕೊಡುವ ಮೊದಲು ತಮ್ಮನ್ನು ಅನುಮತಿ ಕೇಳುವ ಬುದ್ಧಿಯನ್ನು ಕರುಣಿಸಿದನೆನ್ನಬೇಕು.'

—ಎಂದರು.

'ನಿಜ, ನಿಜ, ಇದು ದೈವಾನುಗ್ರಹವೆಂದೇ ನಮಗೆ ತೋರುತ್ತದೆ. ಇಲ್ಲವಾದರೆ ನಮ್ಮ ಪ್ರಥಮ ವಿಜಯಯಾತ್ರೆ, ನಮ್ಮ ಪಾಲಿಗೆ ಎಂದೆಂದೂ

ತೀರದ ಕೊರಗಾಗುತ್ತಿತ್ತು'

—ಎಂದ ವಿಷ್ಣುವರ್ಧನ.

'ಈಗ ಪ್ರಭುಗಳು ಕೊಟ್ಟ ವಚನ ಉಳಿಯಲು ನಾವೇನು ಮಾಡಬೇಕೋ ಅಪ್ಪಣೆಯಾಗಬೇಕು'

'ಇಷ್ಟೆ-ಈ ಬಾರಿಯ ತಮ್ಮ ಯುದ್ಧಯಾತ್ರೆ ಕೇವಲ ಅರಿಮರ್ದನಕ್ಕೆ ಮೀಸಲಾಗಬೇಕು.'

'ಅದಲ್ಲದೆ ಬೇರೆ ಉದ್ದೇಶವೇ ನಮಗಿಲ್ಲವಲ್ಲ. ಪ್ರಭುಗಳಿಗೆ ನಮ್ಮ ಉದ್ದೇಶದಲ್ಲೇನಾದರೂ ಸಂಶಯವುಂಟೇ ?'

'ಇಲ್ಲ.'

'ಮತ್ತೆ ?'

'ಎಲ್ಲ ಜೈತ್ರಯಾತ್ರೆಯ ಉದ್ದೇಶವೂ ನಿರ್ದಿಷ್ಟ ಅರಿನಾಶನವೇ ಆದರೂ, ಒಮ್ಮೊಮ್ಮೆ-ಏಕೆ ಬಹುಬಾರಿ-ಅಂಥ ಸಂದರ್ಭದಲ್ಲಿ ನಮ್ಮ ಶತ್ರುಗಳಿಗಿಂತ ಹೆಚ್ಚಾಗಿ, ಅಸಹಾಯಕ ಪ್ರಜೆಗಳ ಪೀಡನೆ, ದಂಡನೆಯಾಗುತ್ತದೆ ಅಲ್ಲವೆ ?'

'ಅದು ಅನಿವಾರ್ಯ.'

'ಅದು ಹಾಗಿರಬಹುದು. ಆದರೆ ಈ ಬಾರಿ ಅಂಥ ಅಸಾಧ್ಯವಾದುದನ್ನೂ ಸಾಧ್ಯವಾಗಿ ಮಾಡಿ ತೋರಿಸಬೇಕಾದ ಕಠಿಣ ಪರೀಕ್ಷಾ ಪ್ರಸಂಗ ಹೊಯ್ಸಳ ಸೇನೆಯ ಪಾಲಿಗೆ ಬಂದಿದೆ.'

'ಅಂದರೆ—?'

'ನಮ್ಮನ್ನು ಶತ್ರುಗಳಾಗಿ ವಿರೋಧಿಸದ ಯಾರೊಬ್ಬರ ವಧೆಯೂ, ಯಾವೊಂದು ಹಳ್ಳಿಯ ಸುಲಿಗೆಯೂ ನಮ್ಮ ಸೇನೆಯಿಂದ ಆಗಕೂಡದು. ವಿರೋಧವನ್ನು ಪ್ರತಿಭಟಿಸುವ ಸಂದರ್ಭದಲ್ಲಿ ಮಾತ್ರ, ನಮ್ಮ ಖಡ್ಗ ಹೊರಬೀಳಬೇಕೇ ಹೊರತು, ಉಳಿದ ವೇಳೆಯಲ್ಲಿ ನಮ್ಮ ಹಸ್ತ, ಕೇವಲ ಸ್ನೇಹಹಸ್ತವಾಗಿರಬೇಕು. ಈ ಬಾರಿಯ ಸಮರಯಾತ್ರೆ, ಕೇವಲ ಸಮರಯಾತ್ರೆಯಾಗಿರಬೇಕೇ ಹೊರತು, ಕೊಲೆ, ಸುಲಿಗೆಗಳ ಮಾರಿ ಮೆರವಣಿಗೆಯಾಗಬಾರದು. ಈ ಮಾತನ್ನು ನಮ್ಮ ಸೈನಿಕರಿಗೆ, ನೀವು, ನಿಮ್ಮ ಆಜ್ಞೆಯಾಗಿ ತಿಳಿಸಬೇಕು.'

—ಎಂದ ವಿಷ್ಣುವರ್ಧನ

ಆ ಮಾತನ್ನು ಕೇಳಿ ಗಂಗರಾಜರು ಕೆಲವು ಕ್ಷಣಗಳ ಕಾಲ ಏನೊಂದೂ ಮಾತನಾಡದೆ ಸುಮ್ಮನೆ ಕುಳಿತಿದ್ದು, ಬಳಿಕ—

'ಇದು ಬಹು ವಿಚಿತ್ರ ಆಜ್ಞೆ. ಇಂಥ ಆಜ್ಞೆಯಿಂದ ಸೈನಿಕರು ಅಸಂತುಷ್ಟರಾಗಬಹುದು, ನಿರುತ್ಸಾಹಿಗಳಾಗಬಹುದು.'

—ಎಂದರು ಚಿಂತೆ ತುಂಬಿದ ಧ್ವನಿಯಲ್ಲಿ.

'ಏಕೆ?'

'ನಾವು ಮನ ಬಿಚ್ಚಿ ಮಾತನಾಡಬಹುದೇ?'

'ಅದಕ್ಕೆ ಎಂದೂ ಯಾವ ಬಗೆಯ ಅಡ್ಡಿ ಆತಂಕವೂ ಇಲ್ಲವಲ್ಲ.'

'ನಿಜ.'

'ಇಂದೂ ಎಂದಿನಂತೆಯೇ ಮಾತನಾಡಿ. ಅದಕ್ಕೇನೂ ಅಡ್ಡಿಯಿಲ್ಲ'

'ಅಷ್ಟಾದರೆ ಕೃತಾರ್ಥನಾದೆ. ಪ್ರಭುಗಳು ತಲಕಾಡಿನ ವಿರುದ್ಧ ದಂಡ ಯಾತ್ರೆ ಹೊರಟಿರುವುದು ಏಕೆಂದು ನಾನು ಬಲ್ಲೆ. ಪ್ರಭುಗಳ ಪಾಲಿಗೆ ಇದು ಕೇವಲ ರಾಜ್ಯ ವಿಸ್ತರಣೆಯ ಪ್ರಯತ್ನವಲ್ಲ. ಶಿವಸಾಯುಜ್ಯವನ್ನೈದಿದ ಬಲ್ಲಾಳ ದೊರೆಗಳಿಗೆ ಮರಣ ಸಮಯದಲ್ಲಿತ್ತ ವಚನವನ್ನು ಪಾಲಿಸುವ ಮಾರ್ಗದಲ್ಲಿಟ್ಟ ಮೊದಲ ಹೆಜ್ಜೆ; ಭ್ರಾತೃಧರ್ಮಪರಿಪಾಲನಾಕಾರ್ಯ, ನಮಗೂ ಅಷ್ಟೆ; ಚೋಳರಿಂದ ಜಿನಧರ್ಮಕ್ಕೊದಗಿದ ವಿನಾಶವನ್ನು ತಡೆ ಗಟ್ಟಬೇಕೆಂಬುದೇ ಪ್ರಥಮೋದ್ದೇಶ........'

'ನಿಜ.'

'ಇದೇ ಬಗೆಯ ಭಾವನೆಗಳೇ ನಮ್ಮ ಸೈನಿಕರ ಹೃದಯದಲ್ಲೂ ಸಾಮಾನ್ಯವಾಗಿ ಇದೆ. ಆದರೆ, ಎಲ್ಲರೂ ಕೇವಲ ಈ ಬಗೆಯ ಉದಾತ್ತ ಭಾವನೆಗಳಿಂದಲೇ ಪ್ರಚೋದಿತರಾಗಿರಬೇಕೆಂದು ನಂಬಿದರೆ ಆಗ, ಬಹುಶಃ ಅದು ನಮ್ಮ ತಪ್ಪು ತಿಳುವಳಿಕೆಯೋ, ಅವಾಸ್ತವ ಊಹಾತಿಶಯವೋ ಆಗಬಹುದು.........'

'ಅಂದರೆ....'

'ಸೇನೆಗೆ ಸೇರುವವರೆಲ್ಲರೂ, ದೇಶರಕ್ಷಣೆ, ಧರ್ಮರಕ್ಷಣೆಯ ದಿವ್ಯೋ ದ್ದೇಶದಿಂದಲೇ ಬಂದಿರುವುದಿಲ್ಲ ಮಹಾಪ್ರಭು. ಬಹು ಜನ ತಮ್ಮ ಉದ

ರಂಭರಣೆಗೆ ಮಾರ್ಗವೆಂದೋ ಬಡತನದ ನಿವಾರಣೋಪಾಯವೆಂದೋ ಸೇರಿರುತ್ತಾರೆ. ಅಂಥ ಜನ, ಜೀವದ ಭೀತಿಯನ್ನು ಮೀರಿ, ಸಮರಾಂಗಣಕ್ಕೆ ಇಳಿಯುವುದು, ಉಂಡ ಉಪ್ಪಿನ ಋಣ ತೀರಿಸುವುದಕ್ಕಾಗಿಯೇ ಅಲ್ಲ; ಇಂಥ ಸಮಯದಲ್ಲಿ ಮಾಡಿದ ಲೂಟಿಯಿಂದ ಆದಷ್ಟು ಮಟ್ಟಿಗೆ ತಾವು ತಮ್ಮ ಬಡತನವನ್ನು ನೀಗಿಕೊಳ್ಳುವ ಸಲುವಾಗಿ.'

'ನಿಜ'

'ಅದಕ್ಕಾಗಿಯೇ ರಾಜಭಂಡಾರ, ಅತ್ಯಮೂಲ್ಯ ವಸ್ತುಗಳು ವಿನಾ, ಉಳಿದ, ಯುದ್ಧದಲ್ಲಿ ದೊರೆತ ಕೊಳ್ಳೆಯ ವಸ್ತುಗಳನ್ನು ಸೈನಿಕರಿಗೇ ತಮ್ಮ ತಮ್ಮಲ್ಲಿ ಹಂಚಿಕೊಳ್ಳಲು ಬಿಡುವ ಸಂಪ್ರದಾಯವನ್ನು ಸೇನೆಯಲ್ಲಿ ಮೊದಲಿನಿಂದಲೂ ಪಾಲಿಸುತ್ತ ಬಂದಿದ್ದೇನೆ. ಆದುದರಿಂದ, ಈಗ ಸೈನಿಕರಿಗೆ ಈ ಬಗೆಯ ಕೊಳ್ಳೆ, ಲೂಟಿಗಳಿಗೆ ಅವಕಾಶವಿಲ್ಲವೆಂದು ಕಟ್ಟಾಜ್ಞೆಯನ್ನು ಮಾಡಿದಲ್ಲಿ ಸೈನಿಕರು ಅಸಂತುಷ್ಟರಾಗಬಹುದು. ಹಾಗಾಗದಿದ್ದರೂ ನಿರುತ್ಸಾಹಿಗಳಾಗುವುದಂತೂ ಖಂಡಿತ. ಹಾಗಾದರೆ, ಅದರಿಂದ ಎಂಥ ಅಪಾಯ ಪರಿಸ್ಥಿತಿ ಸನ್ನಿಹಿತವಾಗಬಹುದೆಂದು ನಾನು ಪ್ರಭುಗಳಿಗೆ ವಿವರಿಸಬೇಕಾಗಿಲ್ಲ.'

'ನೀವು ಹೇಳಿದ ಯಾವುದನ್ನೂ ನಾವು ಅಲ್ಲವೆನ್ನುವುದಿಲ್ಲ. ಆದರೂ ಈ ಬಾರಿ ನಮ್ಮ ಸೇನೆಯ ಜನ, ತಮ್ಮ ಹಳೆಯ ಅಭ್ಯಾಸವನ್ನು ಮರೆತು, ಈ ಹೊಸ ನೀತಿಯಂತೆ ಆಚರಿಸಬೇಕು ಎಂದು ತಿಳಿಸಿ.'

'ಪ್ರಭುಗಳ ಆಜ್ಞೆಯನ್ನು ಪರಿಪಾಲಿಸುವುದೇ ನಮ್ಮೆಲ್ಲರ ಕರ್ತವ್ಯವಾಗಿರುವಾಗ, ಅಗತ್ಯವಾಗಿ ಪ್ರಭುಗಳ ನೂತನ ಆಜ್ಞೆಯನ್ನು ಪಾಳೆಯದಲ್ಲಿ ಡಂಗುರ ಸಾರಿಸುತ್ತೇನೆ. ಇದಕ್ಕೆ ವಿರುದ್ಧವಾಗಿ ನಡೆದವರನ್ನು ಶೂಲಕ್ಕೇರಿಸಲಾಗುವುದೆಂಬ ಕಟ್ಟಪ್ಪಣೆಯನ್ನೂ ಹೊರಡಿಸುತ್ತೇವೆ. ಆದರೂ ಈ ಆಜ್ಞೆಯ ಹಿಂದೆ ಪ್ರಭುಚಿತ್ತದಲ್ಲಿ ಯಾವ ಉದ್ದೇಶವಿದೆ ಎಂದು ಅರಿವಾಗಿದ್ದರೆ, ಪ್ರಭುಗಳ ಆಜ್ಞೆಯನ್ನು ಅಗತ್ಯವಾದಾಗ ವಿವರಿಸಲು ಅನುಕೂಲವಾಗುತ್ತಿತ್ತು . . . . . .'

'ಉದ್ದೇಶವೇನೆಂದು ಆಗಲೇ ಹೇಳಿದೆನಲ್ಲಾ. ಕೊಟ್ಟ ವಚನವನ್ನು ಕಾಪಾಡಿಕೊಳ್ಳುವುದು.'

—ಎಂದು ವಿಷ್ಣುವರ್ಧನ ಗಂಗರಾಜರಿಗೆ ತಾನು ಶಾನ್ತಲಾದೇವಿಗೆ

ಕೊಟ್ಟ ವಚನ, ಅದಕ್ಕೆ ಒದಗಿದ ಸಂದರ್ಭಗಳನ್ನೂ ವಿವರಿಸಿ ಹೇಳಿ—

'ಒಂದು ಮಾತು ನಿಜ. ಅಂದು ನಾವು ದೇವಿಯವರಿಗೆ ವಚನವಿತ್ತುದು ಕೇವಲ ಭಾವೋದ್ರೇಕದಲ್ಲಿ. ಆ ವಚನ ಪರಿಪಾಲನಾ ಪ್ರಯತ್ನದಲ್ಲಿ ನಾವು ಸೇನೆಯ ಅಸಂತುಷ್ಟಿಗೆ ಪಾತ್ರರಾಗಬಹುದಾದ ಪ್ರಸಂಗ ಬಂದರೂ ಬರಬಹುದು. ಅದಕ್ಕಾಗಿ ಸೈನಿಕರಿಗೆ ಹೇಳಿ—ತಲಕಾಡಿನ ವಿಜಯ ನಮ್ಮದಾಗುವವರೆಗೂ, ಸೈನಿಕರು, ನಾವು ದೇವಿಯವರಿಗೆ ಕೊಟ್ಟ ವಚನ ತಮ್ಮದೆಂದು ಪಾಲಿಸುವುದಾದರೆ ಅವರ ಆ ವಿಶ್ವಾಸಕ್ಕೆ ಪ್ರತಿಫಲವಾಗಿ ನಾವು ತಲಕಾಡಿನಲ್ಲಿ ನಮಗೆ ವಶವಾಗಬಹುದಾದ ಶತ್ರುಭಂಡಾರವೆಲ್ಲವನ್ನೂ ಸೇನೆಯವರಲ್ಲಿ ಹಂಚುತ್ತೇವೆ ಎಂದು. ಹಾಗಾದರೆ, ಅವರಿಂದ ನಮ್ಮ ವಚನ ಪರಿಪಾಲನೆಯೂ ಆಗುವುದೇ ಅಲ್ಲದೆ, ಹೊಯ್ಸಳ ಸೇನೆಯ ವಿಷಯದಲ್ಲಿ ಜನಕ್ಕೆ ವಿಶ್ವಾಸವೂ ಬೆಳೆಯಬಹುದೆಂದೂ ನಮಗೆ ತೋರುತ್ತದೆ. ಇಂಥ ಹೊತ್ತಿನಲ್ಲಿ ದೇವಿಯವರ ಮನದಲ್ಲಿ ಮೂಡಿದ ಬಯಕೆಯಿಂದ, ಎಂದೂ ಕೆಡುಕಾಗಲಾರದೆಂದೇ ನಮ್ಮ ಅಂತರಾತ್ಮ ನಮಗೆ ಸಾರಿ ಹೇಳುತ್ತಿದೆ ಗಂಗರಾಜರೇ....'

—ಎಂದ ವಿಷ್ಣುವರ್ಧನ.

'ನಿಜ, ನಿಜ, ಖಡ್ಗಬಲದಿಂದ ಗೆದ್ದುದಕ್ಕಿಂತಲೂ ಸ್ನೇಹಬಲದಿಂದ ಗೆದ್ದುದು ಹೆಚ್ಚುಕಾಲ ಉಳಿಯುತ್ತದೆ. ಮಹಾರಾಜ್ಞಿಯವರ ಬಯಕೆ ಉದಾತ್ತವಾದದ್ದು........'

'ಉದಾತ್ತಧ್ಯೇಯ ಸಾಧನೆಗಾಗಿ ಶ್ರಮಿಸುವುದೇ ವೀರನ ಲಕ್ಷಣವಲ್ಲವೆ?'

—ಗಂಗರಾಜರು ತಮ್ಮ ಮಾತು ಮುಗಿಸುವ ಮೊದಲೇ ಹೇಳಿದ ವಿಷ್ಣುವರ್ಧನ.

ಗಂಗರಾಜರಿಗೂ ದೊರೆಯ ಆ ಮಾತಿನ ಅರ್ಥವೇನೆಂದು ಮನವರಿಕೆಯಾಗಿ—

'ಆಯಿತು, ಶ್ರಮಿಸುವುದು ನಮ್ಮ ಯತ್ನ; ಫಲ ದೈವೀಚಿತ್ತ, ತಮ್ಮ ಬಯಕೆಯನ್ನು ಅಪ್ಪಣೆಯೆಂದು ಸೇನೆಯಲ್ಲಿ ಸಾರಿಸುತ್ತೇನೆ.'

—ಎಂದು ಮಾತು ಮುಗಿಸಿದರು, ಅಲ್ಲಿಂದ ಹೊರಡಲು ಸಿದ್ಧರಾಗಿ.

'ಈ ಬಾರಿಯ ಸಮರದಲ್ಲಿ ಗೆಲ್ಲಲೇ ಬೇಕೆಂಬ ಉತ್ಸಾಹ ತಮಗೆ ಎಷ್ಟಿದೆ ಎಂಬುದನ್ನು ನಾವು ಬಲ್ಲೆವು. ಸಮರ ಪ್ರಾರಂಭದಲ್ಲಿ ಈ ಬಯಕೆಯನ್ನು ವ್ಯಕ್ತಪಡಿಸಿ, ನಿಮ್ಮ ವಿಜಯ ಪಥದಲ್ಲಿ ಶಂಕೆಯ ನೆಳಲು ಸುಳಿಯುವಂತೆ ಮಾಡಿದುದಕ್ಕಾಗಿ ನಮ್ಮನ್ನು ಮನ್ನಿಸಬೇಕು ಪ್ರಧಾನಿಗಳೇ.'

—ಸಮರ ಸಂಪ್ರದಾಯದಲ್ಲಿ ಮುರಿವ ತನ್ನ ಬಯಕೆಯಿಂದ ದಂಡನಾಯಕರ ಮನಸ್ಸಿಗೆ ನೋವಾಯಿತೇನೋ ಎನಿಸಿ, ಹೇಳಿದ ವಿಷ್ಣುವರ್ಧನ.

'ಹಾಗೇನೂ ಅಲ್ಲ. ನಮ್ಮ ಮೈಗೆ ತಾಯಿಯವರು ಧರ್ಮದ, ಪ್ರೇಮದ ವಜ್ರಕವಚ ತೊಡಿಸಲು ಯತ್ನಿಸುತ್ತಿರುವಾಗ ನಾನು ಬೇಡವೆನ್ನಲೆ? ತಾಯಿಯವರ ಬಯಕೆ, ಪ್ರಭುಗಳ ಇಚ್ಛೆ, ನಮ್ಮ ಕರ್ತವ್ಯ ಎಲ್ಲವೂ ಆ ಧರ್ಮಪುರುಷನ ಅನುಗ್ರಹದಿಂದ ಸುಗಮವಾಗಿ ನೆರವೇರಲಿ.'

ಎಂದು ವಿಷ್ಣುವರ್ಧನನಿಗೆ ಮಣಿದು, ಆತನ ಅಪ್ಪಣೆಯನ್ನು ಪಡೆದು ಗಂಗರಾಜರು ತಮ್ಮ ಬಿಡಾರಕ್ಕೆ ತೆರಳಿದರು.

# ೧೦

## ಆನೆ ಕಲಿಸಿದ ಪಾಠ

ವಿಷ್ಣುವರ್ಧನನ ಸೂಚನೆಯಂತೆ, ಶಾನ್ತಲಾದೇವಿಯ ಬಯಕೆಯನ್ನು ರಾಜಾಜ್ಞೆಯಾಗಿ ಪಾಳೆಯದಲ್ಲಿ ಸಾರಿಸಿದ ಗಂಗರಾಜರಿಗೆ, ಈ ವಿಚಿತ್ರ ಆಜ್ಞೆಯ ಪರಿಣಾಮ ಹೇಗಾದೀತೋ ಎಂಬ ಚಿಂತೆಯಿದ್ದುದರಿಂದ, ವಿದೇಶಿಯ ರೊಂದಿಗೆ ಯುದ್ಧಕ್ಕೆ ಹೊರಟ ಸೇನೆಯಲ್ಲಿ ಅಸಂತುಷ್ಟರು ಇರಬಾರದು ಎಂಬ ಉದ್ದೇಶದಿಂದ, ಆ ಆಜ್ಞೆಯೊಂದಿಗೆ 'ಈ ಅಪ್ಪಣೆ ಒಪ್ಪಿಗೆಯಾಗದ ಜನ ತಮ್ಮ ತಮ್ಮ ಗ್ರಾಮಗಳಿಗೆ ಹಿಂದಿರುಗಬಹುದು. ಹಾಗೆ ಹಿಂದಿರುಗುವವ ರನ್ನು ಅಪರಾಧಿಗಳೆಂದು ಪರಿಗಣಿಸದೆ, ಅವರಿಗೆ ಸಲ್ಲಬೇಕಾದುದನ್ನೆಲ್ಲಾ ಸಲ್ಲಿಸಲಾಗುವುದು. ಈ ಬಾರಿಯ ನಮ್ಮ ಪಡೆ, ಕೇವಲ ಕೀರ್ತಿಕಾಮಿ ಗಳಾದ ವೀರಪುರುಷರ ಮೀಸಲುಪಡೆಯಾಗಬೇಕೆಂಬುದೇ ಪ್ರಭುಗಳ ಬಯಕೆ' ಎಂಬ ವಿನಾಯತಿಯನ್ನೂ ಸೂಚಿಸಿದ್ದರು.

ಆಜ್ಞೆ ಒಪ್ಪಿಗೆಯಾಗದವರು, ಯಾವ ಬಗೆಯ ನಷ್ಟ, ಅಪಮಾನ ಭೀತಿಯೂ ಇಲ್ಲದೆ ಸ್ವಗೃಹಗಳಿಗೆ ಹಿಂದಿರುಗಬಹುದೆಂಬ ವಿನಾಯತಿಯನ್ನು ದಂಡನಾಯಕರು ನೀಡಿದರೂ, ಸೇನೆಯೊಂದಿಗೆ ಬಂದ ಯಾರೊಬ್ಬರೂ ಹಿಂದಿರುಗುವ ಇಚ್ಛೆಯನ್ನು ವ್ಯಕ್ತಪಡಿಸಲಿಲ್ಲ. ಒಬ್ಬಿಬ್ಬರು ಆಜ್ಞೆಯ ಬಗ್ಗೆ ಸಂಶಯವನ್ನು ವ್ಯಕ್ತಪಡಿಸಿದಾಗ, ಅವರಲ್ಲೇ ಕೆಲವರು—

'ದಂಡನಾಯಕರ ಆಜ್ಞೆ ತಪ್ಪಲ್ಲ. ನಮಗಿರುವ ಸಿಟ್ಟೆಲ್ಲಾ ಚೋಳರ ಮೇಲೆ. ನಮ್ಮ ಬಸದಿಗಳನ್ನು ಒಡೆದವರು ಅವರು; ನಮ್ಮ ಊರುಗಳ ಹೆಸರುಗಳನ್ನು ಬದಲಿಸಿದವರು ಅವರು. ತಮ್ಮ ಭಾಷೆಯನ್ನು ನಮ್ಮ ನೆತ್ತಿಯ ಮೇಲೆ ಹೇರಿ, ನಮ್ಮವರನ್ನು ತಮ್ಮ ಆಳುಗಳನ್ನಾಗಿ ಮಾಡಿಕೊಂಡು ನಮ್ಮ ಮೇಲೆ ಅತ್ಯಾಚಾರ ನಡೆಸುತ್ತಿರುವವರು ಅವರು, ಹಾಗಿರುವಾಗ ಎಲ್ಲಕ್ಕೂ ಮೂಲಕಾರಣರಾದ ಅವರನ್ನು ಮಟ್ಟಹಾಕುವುದನ್ನು ಬಿಟ್ಟು ಏನೂ

ತಿಳಿಯದ ನಮ್ಮ ಜನರನ್ನೇ ಏಕೆ ನಾವು ಸುಲಿಗೆ ಮಾಡಬೇಕು ? ಆದ್ದರಿಂದ ದೊರೆಗಳು ಮಾಡಿದ ಅಪ್ಪಣೆ ಸರಿಯಾದದ್ದೇ '—ಎಂದು ವಾದಿಸಿ, ಸಂಶಯ ಚಿತ್ತರಿಗೆ ಬುದ್ದಿ ಹೇಳಿದರು.

ಸೇನೆಗೆ ಸೇರಿದ ಬಹು ಜನ ಬೇರೆ ಬೇರೆ ಗ್ರಾಮಗಳಿಂದ ಬಂದವರು. ಎಷ್ಟೋ ಯುದ್ಧಗಳ ವೇಳೆಯಲ್ಲಿ, ತಮ್ಮ ಹಳ್ಳಿಗಳೇ ಸುಲಿಗೆಯಾದುದನ್ನು ಕಣ್ಣಾರೆ ಕಂಡು, ಆ ದುಃಖ, ನೋವನ್ನು ತಾವೇ ಅನುಭವಿಸಿದವರು. ಹತ್ತಾರು ಯುದ್ಧಗಳಲ್ಲಿ, ಈ ರೀತಿ ನಿರಪರಾಧಿಗಳ ಸುಲಿಗೆ, ಮಾನಭಂಗವಾಗುವುದನ್ನು ಕಂಡು, ಆ ಜನಕ್ಕೆ ಇದೇ ನಿಯಮವೇನೋ ಎನಿಸಿತ್ತು. ಅವಕಾಶ ಸಿಕ್ಕಾಗ ಸುಲಿಗೆ ಮಾಡುವುದು, ಪರಿಸ್ಥಿತಿ ಬದಲಾದಾಗ ಯುದ್ಧವನ್ನು ಶಪಿಸುತ್ತ, ಇದ್ದುಬದ್ದುದನ್ನೆಲ್ಲಾ ಶತ್ರುಗಳ ಹಸ್ತಕ್ಕೆ ಒಪ್ಪಿಸುವುದು ಅವರಿಗೆ ಅಭ್ಯಾಸವಾಗಿ ಹೋಗಿತ್ತು. ಎಂತಲೇ ಅಂಥ ಜನಕ್ಕೆ ದೊರೆಯ ಆಜ್ಞೆ, ಒಂದು ಗಳಿಗೆ ವಿಚಿತ್ರವೆಂದು, ಅಸಹಜವೆಂದು ತೋರಿದರೂ, ಕೊಂಚ ಆ ಆಜ್ಞೆಯನ್ನು ಮೆಲಕು ಹಾಕಿದಮೇಲೆ—

'ನಮ್ಮಪ್ಪ, ದೊರೆ, ಮಾಡಿದ ಆಜ್ಞೆ ಸರಿ. ಇದರಿಂದ ನಮಗೆ ಅಷ್ಟಿಷ್ಟು ಕಷ್ಟವಾದರೂ ಚಿಂತೆಯಿಲ್ಲ. ಅರಿಯದವರ ಕೊಲೆಮಾಡಿ, ತಾಯಂದಿರ, ಮೂಕ ಪಶುಗಳ ಶಾಪ ಹೊರುವ ಪಾಪ ತಪ್ಪುತ್ತದೆ. ನಿರಪರಾಧಿ ಜನ ಒಂದು ಒಳ್ಳೆಯ ಮಾತಾಡಿದರೆ, ಹತ್ತು ಜನ ಶತ್ರುಗಳನ್ನು ಕೊಂದ ಪಾಪ ನಿವಾರಣೆಯಾಗುತ್ತದೆ.'

—ಎಂದು ತಮಗೆ ತಾವೇ ಸಮಾಧಾನ ಹೇಳಿಕೊಂಡರು. ತಮ್ಮ ಜೊತೆಯಲ್ಲಿದ್ದವರಿಗೂ ಸಮಾಧಾನ ಹೇಳಿದರು.

ಇದೆಲ್ಲಕ್ಕಿಂತಲೂ ಮಿಗಿಲಾಗಿ ಈ ಆಜ್ಞೆ ಗರ್ಭಿಣಿಯಾದ ಮಹಾರಾಜ್ಞಿಯವರ ಬಯಕೆಯ ಫಲ ಎಂಬ ಸುದ್ದಿ ಹೊರಬಿದ್ದಾಗ, ಆ ಸುದ್ದಿ ಸೈನಿಕರ ಉತ್ಸಾಹವನ್ನು ಇಮ್ಮಡಿಸಿ—

'ತಾಯಿಯ ಇಚ್ಛೆಯನ್ನು ನಡೆಸುವುದು ಮಕ್ಕಳ ಕರ್ತವ್ಯ. ತನ್ನ ಮಕ್ಕಳು ಕಟುಕರಾಗಬಾರದು, ಕೊಲೆಗಡುಕರಾಗಬಾರದು, ಧರ್ಮಾತ್ಮರು ಅಂತ ಅನ್ನಿಸಿಕೊಳ್ಳಲಿ ಅಂತ ಆ ಮಹಾತಾಯಿ ಆಸೆಪಟ್ಟರೆ, ನಾವೇಕೆ ಅದಕ್ಕೆ, 'ಅಲ್ಲ, ಕೊಂದು ತಿನ್ನುವುದೇ ನಮ್ಮ ಹಣೆಬರಹ' ಅಂತ ಹೇಳಿಕೊಳ್ಳಬೇಕು.

ಆ ಮಹಾತಾಯಿಯ ಬಯಕೆ ನಡೆಯಲಿ. ಆಕೆಯ ಧರ್ಮಾತ್ಮ ಮಗ ನಮ್ಮ ದೊರೆಯಾಗಲಿ. ಗಂಡಾದರೆ ತಲೆ ಕೊಡೋಣ; ಹೆಣ್ಣಾದರೆ ಅಮ್ಮನವರ ಹೆಸರು ಹೇಳಿ 'ಸಿಡಿ' ಹತ್ತೋಣ'

—ಎಂದು ತಮ್ಮ ತಮ್ಮಲ್ಲೇ ಪಂಥ ಮಾಡಿಕೊಂಡರು.

ಈ ಬಗೆಯ ಭಾವನೆಗಳೇ ಸೇನೆಯಲ್ಲಿ ಬಹುವಾಗಿ ವ್ಯಾಪಿಸಿ, ಸೈನಿಕರಲ್ಲಿ ನೂತನ ಶ್ರದ್ಧೆ, ಉತ್ಸಾಹಗಳು ತಲೆದೋರಿದವು. ಸೈನಿಕರಲ್ಲಿ ಮೂಡಿದ ಈ ಪ್ರತಿಕ್ರಿಯೆಯನ್ನು ತಮ್ಮ ಬೇಹುಗಾರರಿಂದ ಅರಿತು, ಗಂಗರಾಜರಿಗೂ ಮನಸ್ಸಿಗೆ ಸಮಾಧಾನವಾಗಿ, ಈ ಹೊಸ ಬಗೆಯ ಯುದ್ಧ ನೀತಿಯನ್ನು ಆಚರಣೆಯಲ್ಲಿ ತರುವ ಅವಕಾಶ ತಮಗೆ ಲಭಿಸಿದುದಕ್ಕಾಗಿ ಹೆಮ್ಮೆಯಾಯಿತು.

ತಮ್ಮ ಸೈನಿಕರ ನಿಷ್ಠೆಯಬಗ್ಗೆ ಇದ್ದ ಅನುಮಾನ ತೊಲಗಿದ ಬಳಿಕ, ಗಂಗರಾಜರು, ಸೇನೆಯನ್ನು ಶತೃಸೀಮೆಯತ್ತ ನಡೆಸುವ ಬಗ್ಗೆ ಚಿಂತಿಸ ತೊಡಗಿದರು. ಗಂಗರಾಜರು ಆ ಚಿಂತೆಯಲ್ಲಿರುವಾಗಲೇ, ಹೊಯ್ಸಳ ಸೈನಿಕರಲ್ಲಿ, ತಲಕಾಡು ಯುದ್ಧದಲ್ಲಿ ಗೆಲವು ತಮ್ಮದಾಗುವುದೆಂಬ ಭರವಸೆಯನ್ನು ಮೂಡಿಸುವ ಘಟನೆಯೊಂದು ನಡೆಯಿತು. ಆ ಘಟನೆ ನಡೆದುದು, ಹೊಯ್ಸಳ ಸೇನೆ, ಹೃದುವಿನ ಕೆರೆಯ ಬಳಿ ಬೀಡು ಬಿಟ್ಟ ಮೂರನೆಯ ರಾತ್ರಿ.

ಹೃದುವಿನಕೆರೆಯ ನಿವೇಶನ ಸೇನೆಯ ಪಾಳಯ ಹೂಡುವುದಕ್ಕೆ ಅನುಕೂಲವಾಗಿತ್ತು. ಆ ಗ್ರಾಮ ದಟ್ಟವಾದ ಕಾನನ ಮಧ್ಯದಲ್ಲಿದ್ದುದರಿಂದ, ಅಲ್ಲಿ ಸೇನೆ ಬೀಡು ಬಿಟ್ಟಿರುವುದು ಅನ್ಯರಾರಿಗೂ ತಟಕ್ಕನೆ ಗೊತ್ತಾಗದಂತೆ ಮರೆಯಿದ್ದುದಲ್ಲದೆ, ಆ ಕಾಡಿನಲ್ಲಿ ಒತ್ತಾಗಿ, ಮುಗಿಲು ಮುಟ್ಟುವಂತೆ ಬೆಳೆದ ವೃಕ್ಷಗಳು ಪಾಳಯಕ್ಕೆ ಅಗತ್ಯವಾದ ನೆಳಲನ್ನು ನೀಡಿದ್ದವು. ಸೇನೆಯಲ್ಲಿದ್ದ ಆನೆ, ಕುದುರೆ, ಹಸು, ಕತ್ತೆಗಳಿಗೆ ಬೇಕಾದಷ್ಟು ಹಸಿರು ಮೇವು ಅಲ್ಲಿ ದೊರೆಯುತ್ತಿತ್ತು. ಇದೆಲ್ಲವನ್ನೂ ನೋಡಿಕೊಂಡು, ಕಾಡ ಮಧ್ಯದಲ್ಲಿ ಹರಿಯುತ್ತಿದ್ದ ವನಝರಿಯ ಬಳಿಯ ಪ್ರದೇಶವನ್ನು ಗಂಗರಾಜರು ಪಾಳೆಯ ನಿವೇಶನವಾಗಿ ನಿರ್ಧರಿಸಿದ್ದರು. ಆ ಕಾಡಿನಲ್ಲಿ ಸೇನೆ ಬೀಡು ಬಿಡಲು ಸಾಕಷ್ಟು ಅನುಕೂಲಗಳಿದ್ದರೂ, ಅದರೊಂದಿಗೆ ವನ ಮೃಗಗಳ ಭೀತಿಯೂ ಇದ್ದುದರಿಂದ, ಹಸು, ಕುದುರೆ, ಕತ್ತೆಗಳ ವಾಸನೆ ಹಿಡಿದು, ಕಾಡುಪಶುಗಳು, ಬಿಡಾರದ ಮೇಲೆ ನುಗ್ಗಲು ಆಗದಂತೆ, ಪಾಳಯದ ಸುತ್ತಲೂ ಅಗಳನ್ನು

ಅಗೆಯಿಸಿ, ಮುಳ್ಳುಬೇಲಿಯನ್ನು ಬಿಗಿಸಿದ್ದರು. ಅದರೊಂದಿಗೆ ಇರುಳಿನಲ್ಲಿ ಅಲ್ಲಲ್ಲಿ ಉರಿ ಹೊತ್ತಿಸಿಕೊಂಡು ಸೈನಿಕರು ಕಾವಲು ಕಾಯುತ್ತಿದ್ದುದರಿಂದ, ಮನುಷ್ಯರ ವಾಸನೆ, ಬೆಂಕಿಯ ಭಯಕ್ಕೆ ಬೆದರಿದ ಕಾಡುಮೃಗಗಳು ಸೇನೆಗೆ ಏನೊಂದೂ ಅಪಾಯವನ್ನು ಮಾಡುವ ಸ್ಥಿತಿಯಲ್ಲಿರಲಿಲ್ಲ.

ಈ ರಕ್ಷಣೆಯ ಮರೆಯಲ್ಲಿ ನಿಂತು, ಹೊಯ್ಸಳ ಸೈನಿಕರು, ತಮ್ಮ ಜೀವನದಲ್ಲಿ ಹಿಂದೆಂದೂ ನೋಡದ ಬಗೆ ಬಗೆಯ ವನ ಪ್ರಾಣಿಗಳನ್ನು ಕಂಡು, ಅಚ್ಚರಿಪಟ್ಟು ಹರ್ಷಿಸಿದ್ದರು. ಎಷ್ಟೋಜನ ದಿನ ದಿನವೂ ಬೇಟೆಯಾಡಿ, ತಮ್ಮ ಮೃಗಯಾವಿಹಾರದ ಬಯಕೆಯನ್ನು ತೀರಿಸಿಕೊಂಡಿದ್ದರು.

ಎರಡು ದಿನ ಕಾಡ ಪಶುಗಳಿಂದ ಹೊಯ್ಸಳ ಸೇನೆಗೆ ಯಾವೊಂದು ಕಷ್ಟವೂ, ಅಪಾಯವೂ ಸಂಭವಿಸದೆ ಕಾಡುಪಾಳಯ ಗೃಹವಾಸಕ್ಕಿಂತಲೂ ಸಂತೋಷದಾಯಕವೆನಿಸಿತ್ತು.

ಆದರೆ ಮೂರನೆಯ ದಿನ ರಾತ್ರಿ, ಸೈನಿಕರು ಕಾವಲು ಕಾಯುತ್ತಿರುವಾಗ, ಪಾಳೆಯದ ಬದಿಯ ವನಝರಿಯಲ್ಲಿ ನೀರು ಕುಡಿಯಲೆಂದು ತನ್ನ ಗುಂಪಿನೊಂದಿಗೆ ಬಂದ ಸಲಗವೊಂದು, ಪಾಳೆಯದಲ್ಲಿದ್ದ ಹೆಣ್ಣಾನೆಯ ವಾಸನೆಯನ್ನು ಹಿಡಿದು, ಅದರ ಕರೆಯನ್ನು ಕೇಳಿ, ಮನುಷ್ಯ ಭೀತಿಯನ್ನು ಮರೆತು ಪಾಳೆಯದತ್ತ ನುಗ್ಗಿತು. ಅದನ್ನು ಕಂಡ ಸೈನಿಕನೊಬ್ಬನು, ಪಾಳಯದತ್ತ ಮುಳ್ಳುಬೇಲಿಯನ್ನು ಮುರಿದು ನುಗ್ಗುತ್ತಿದ್ದ ಸಲಗವನ್ನು ಬೆದರಿಸಲೆಂದು ಬಾಣವನ್ನು ಬಿಟ್ಟ. ಆ ಬಾಣ ಮದವೇರಿದ ಸಲಗದ ಮಸ್ತಕಕ್ಕೆ ನಾಟಿ, ಆ ಗಾಯದ ನೋವಿನಲ್ಲಿ ಸಲಗ ಉನ್ಮತ್ತವಾಗಿ, ಭಯಂಕರವಾಗಿ ಘೀಳಿಡುತ್ತ, ಎಲ್ಲ ಭೀತಿಯನ್ನು ಕಿತ್ತೊಗೆದು, ಬಾಣ ಬಂದ ಕಡೆ ಹುಚ್ಚಾಗಿ ನುಗ್ಗಿತು. ಸಲಗ ನುಗ್ಗಿದುದನ್ನು ಕಂಡು, ಅದರ ಹಿಂದಿದ್ದ ಮೂವತ್ತು ನಲವತ್ತು ಆನೆಗಳೂ, ಎಂತಹ ಧೀರರ ಎದೆಯೂ ಬಿರಿಯುವಂತೆ, ಉಗ್ರವಾಗಿ ಘೀಳಿಡುತ್ತ, ಅಡಿತಡೆಗಳನ್ನು ಕಾಲಿನಿಂದ ತುಳಿದು, ಸೊಂಡಿಲಿನಿಂದ ಕಿತ್ತುಹಾಕಿ ತಾವೂ ಪಾಳಯದತ್ತ ನುಗ್ಗಿದವು.

ಆನೆಗಳು ಪಾಳಯದತ್ತ ನುಗ್ಗಿದುದನ್ನು ಕಂಡು ಸೈನಿಕರು, ಭೀತರಾಗಿ, ಅಪಾಯ ಸೂಚನೆಯ ಕೊಂಬುಗಳನ್ನು ಊದುತ್ತ, ಮೇಲಿಂದ ಮೇಲೆ ಶರಾಘಾತಮಾಡುತ್ತ, ಆನೆಗಳ ದಾಳಿಯನ್ನು ತಡೆಯಲು ಯತ್ನಿಸಿದರು.

ಕಬ್ಬಿಣದ ತಗಡಿನಂತಿದ್ದ ಕಾಡಾನೆಗಳ ಚರ್ಮವನ್ನು ಭೇದಿಸಲಾಗದ ಆ ಬಾಣಗಳು, ಸಣ್ಣಪುಟ್ಟ ಗಾಯಗಳನ್ನು ಮಾಡಿ, ಆನೆಗಳ ರೋಷವನ್ನು ಮತ್ತಷ್ಟು ಹೆಚ್ಚಿಸಿತೇ ಹೊರತು ಆನೆಗಳನ್ನು ಬೆದರಿಸಿ ಹಿಮ್ಮೆಟ್ಟಿಸಲಿಲ್ಲ.

ಕಣ್ಣು ಮುಚ್ಚಿ ಕಣ್ಣು ತೆರೆಯುವುದರೊಳಗಾಗಿ, ಬೃಹದಾಕಾರದ ಗಜಗಳು ಭೇದಿಸಲು ಅಸಾಧ್ಯವೆಂದು ಭಾವಿಸಿದ ಪಾಳೆಯ ಪ್ರವೇಶ ಮಾಡಿ, ಸೊಂಡಿಲಿಗೆ ಸಿಕ್ಕವರನ್ನು ಹಿಡಿದು ಹೊಸಗಿಹಾಕಿದವು.

ಕಾಡಾನೆಗಳ ಘೀಂಕಾರ, ಅದನ್ನು ಕಂಡು ಬೆದರಿದವರ ಚೀತ್ಕಾರ ಧ್ವನಿಯನ್ನು ಕೇಳಿ, ಪಾಳಯದಲ್ಲಿ ಬಂಧಿತವಾಗಿದ್ದ ಬಗೆಬಗೆಯ ಪಶುಗಳು ಭೀತಿಯಲ್ಲಿ ಕೂಗತೊಡಗಿ, ತಮ್ಮನ್ನು ಬಂಧಿಸಿದ ಹಗ್ಗ, ಸರಪಳಿಗಳನ್ನು ಕಿತ್ತುಹಾಕಿ ಓಡಲು ಯತ್ನಿಸಿದುವು.

ಕಣ್ಣು ಕಾಣಿಸದಂಥ ಕತ್ತಲು; ಆ ಕತ್ತಲಿನಲ್ಲಿ ದಿಕ್ಕರಿಯದೆ, ನೋವು, ರೋಷಗಳಿಂದ ಹುಚ್ಚಾಗಿ, ಸಿಕ್ಕಿದ್ದನ್ನು ಹೊಸಗುತ್ತಾ ನುಗ್ಗಿದ ಆನೆಗಳು; ಪಾಳಯದಲ್ಲಿ ಹಬ್ಬಿದ ಬಗೆಬಗೆಯ ಪಶು, ಮಾನವರ ಕೂಗಾಟ, ಚೀರಾಟಗಳಲ್ಲಿ ಯಾರಿಗೂ ದಿಕ್ಕುತೋಚದಂತಾಯಿತು. ಒಬ್ಬೊಬ್ಬರಿಗೂ, ಆ ವೇಳೆಯಲ್ಲಿ, ಆ ಆನೆಗಳನ್ನು ಹೇಗೆ ಹಿಮ್ಮೆಟ್ಟಿಸುವುದೆಂಬ ಯೋಚನೆಗಿಂತ, ಆಕಸ್ಮಿಕವಾಗಿ ಒದಗಿದ ಈ ಅಪಾಯದಿಂದ ತಮ್ಮ ಜೀವಗಳನ್ನು ಹೇಗೆ ಉಳಿಸಿಕೊಳ್ಳುವುದೆಂಬ ಭಯವೇ ದೊಡ್ಡದಾಗಿ, ಒಬ್ಬೊಬ್ಬರೂ, ತಮ್ಮ ರಕ್ಷಣೆಗೆ ಕೈಗೆಸಿಕ್ಕ ಅಸ್ತ್ರ ಧರಿಸಿ, ದಾರಿ ಕಂಡಕಡೆ ನುಗ್ಗತೊಡಗಿದರು.

ಆ ಅಸ್ತವ್ಯಸ್ತತೆ, ದಿಗ್ಭ್ರಾಂತಿ, ಮತ್ತಷ್ಟು ಹೊತ್ತು ಹಾಗೇ ಮುಂದುವರಿದಿದ್ದರೆ ಚೋಳರನ್ನು ಗೆಲ್ಲಬಂದ ಹೊಯ್ಸಳ ಸೇನೆ ಕಾಡಾನೆಗಳ ತುಳಿತಕ್ಕೆ ಸಿಕ್ಕಿ ನುಚ್ಚುನೂರಾಗಿ, ಚೆಲ್ಲಾಪಿಲ್ಲಿಯಾಗಿ ಹೋಗುತ್ತಿತ್ತು.

ಈ ವಿಷಮಸಮಯದಲ್ಲಿ, ವಿಷ್ಣುವರ್ಧನನ ಪಟ್ಟಗೃಹದ ಕಾವಲು ಕಾಯುತ್ತಿದ್ದ ಅಯ್ಕಣನೆಂಬ ಕಾವಲು ಭಟನೊಬ್ಬ ತನ್ನ ರಾಜರಕ್ಷಣೆಯ ಹೊಣೆಗಾರಿಕೆಯನ್ನರಿತು, ಸೇನೆಗೆಲ್ಲಾ ಬುದ್ಧಿ ಕೆಡಸಿದ ಆ ಹೊತ್ತಿನಲ್ಲೂ ತನ್ನ ಬುದ್ಧಿಯನ್ನು ಕಳೆದುಕೊಳ್ಳದೆ, ಕತ್ತಲಿನಲ್ಲಿ ತಾವು ಹುಚ್ಚಾಗಿ ನುಗ್ಗುವುದರಿಂದ ಆನೆಗಳನ್ನು ಹಿಮ್ಮೆಟ್ಟಿಸುವುದು ಸಾಧ್ಯವಾಗುವುದಿಲ್ಲವೆಂಬುದನ್ನು ಅರ್ಥಮಾಡಿಕೊಂಡು, ತನ್ನ ಹಾಗೆ ಬುದ್ಧಿ ಕೆಡದಿದ್ದ ಸಾಹಸಿಗಳನ್ನು ಗುಂಪು ಕಟ್ಟಿಕೊಂಡು, ಕೂಡಲೇ

ನೂರಾರು ಪಂಜುಗಳನ್ನು ಹೊತ್ತಿಸಿ ಚಲ್ಲಾಪಿಲ್ಲಿಯಾಗಿ ಓಡುತ್ತಿದ್ದ ಸೈನಿಕರಿಗೆ ಆ ಪಂಜಿನ ಮರೆಗೆ ಬರುವಂತೆ ಕೂಗಿ ಹೇಳಿ ಬಲವಾದ ಖಡ್ಗಗಳನ್ನು ಹಿಡಿದು, ಆನೆಗಳ ಮೇಲೆ ದಾಳಿಮಾಡಲು ಹೇಳಿದ.

ಎಲ್ಲರಿಗಿಂತಲೂ ತಾನೇ ಮುಂದಾಗಿ, ಒಂದು ಕೈಯಲ್ಲಿ ಉರಿಪಂಜು, ಮತ್ತೊಂದು ಕೈಯಲ್ಲಿ ಖಡ್ಗವನ್ನು ಹಿಡಿದು ಪಾಳಯದತ್ತ ನುಗ್ಗುತ್ತಿದ್ದ ಆನೆಯೊಂದರ ಮೇಲೆ ದಾಳಿಮಾಡಿ, ಮೃತ್ಯುವಿನ ಹೆಡೆಯಂತೆ ಆಡುತ್ತಿದ್ದ ಅದರ ಸೊಂಡಿಲನ್ನು ಕತ್ತರಿಸಿ, ಅದರ ಆಯಕಟ್ಟಿನ ಸ್ಥಳವನ್ನು ಅರಿತು ಖಡ್ಗ ಪ್ರಯೋಗ ಮಾಡಿದ. ಆತನ ಬಲವಾದ ಖಡ್ಗ ಪ್ರಹಾರಕ್ಕೆ ಸಿಲುಕಿದ, ಪ್ರಚಂಡ ಶಕ್ತಿಯುತವಾದ ಆನೆಯೂ, ನೋವು ಭಯದಿಂದ ಚೀರುತ್ತ, ಜೀವ ಉಳಿಸಿಕೊಳ್ಳಲು ಕಾಡಿನ ಕಡೆ ಓಡಿತು.

ಅಯ್ಯಣನ, ವಿಪತ್ಸಮಯದಲ್ಲಿ ಎದೆಗುಂದದ ಈ ಸಾಹಸ, ಉಳಿದವರಿಗೆ ಮಾರ್ಗದರ್ಶಕವಾಗಿ, ಅವರೂ ಹುಚ್ಚಾಗಿ ಓಡಿ ಮೃತ್ಯುವಿಗೆ ತುತ್ತಾಗುವುದನ್ನು ನಿಲ್ಲಿಸಿ, ತಾವೂ ಪಂಜು ಖಡ್ಗಗಳನ್ನು ಹಿಡಿದು, ಕಾಡಾನೆಗಳನ್ನು ಎದುರಿಸಲಾರಂಭಿಸಿದರು.

ಸೈನಿಕರಲ್ಲಿ ಭಯ ತೊಲಗಿ, ಸಾಹಸಬುದ್ಧಿ ಜಾಗೃತವಾದ ಬಳಿಕ ಕಾಡಾನೆಗಳ ದಾಳಿಯನ್ನು ತಡೆಗಟ್ಟುವುದು ಹೆಚ್ಚು ಕಷ್ಟಸಾಧ್ಯವಾಗಲಿಲ್ಲ. ಒಂದೊಂದು ಆನೆಯ ಮೇಲೂ ಹತ್ತಾರು ಜನ ಮುಗಿಬಿದ್ದು ಅದನ್ನು ಕತ್ತರಿಸಿ ಕೆಡಹಿದರು. ಇದರಿಂದಾಗಿ, ಬೆಟ್ಟದಂತೆ ಕವಿದು ಬಂದ ಆಪತ್ತು ಮಂಜಿನಂತೆ ಕರಗಿಹೋಗಿ, ಬಹು ಬೇಗ ಪಾಳಯದಲ್ಲಿ ಮತ್ತೆ ಶಾಂತಿ ನೆಲಸಿತು.

ಮರುದಿನ ಪಾಳಯದಲ್ಲೆಲ್ಲಾ ಅಯ್ಯಣನ ಸಾಹಸಬುದ್ಧಿ, ವಿಪತ್ಸಮಯದಲ್ಲಿ ಎದೆಗುಂದದ ಧೈರ್ಯ, ಅಪಾಯದ ರೀತಿಯನ್ನು ಅರಿತು, ಅದನ್ನು ಗೆಲ್ಲುವ ಉಪಾಯವನ್ನು ಕಂಡುಹಿಡಿಯುವ ಜಾಣ್ಮೆಗಳ ಪ್ರಶಂಸೆ ಹಬ್ಬಿತು.

ಅಯ್ಯಣ ಮಾಡಿದ ಸಾಹಸವನ್ನು ಕಣ್ಣಾರೆ ಕಂಡ ವಿಷ್ಣುವರ್ಧನ ಅಯ್ಯಣನಿಗೆ, ವೀರಪಟ್ಟವನ್ನು ಕಟ್ಟಿ, 'ಕರಿಯ ಅಯ್ಯಣ' ಎಂಬ ಬಿರುದನ್ನಿತ್ತು—

'ಈ ಧೀರನ ಸಾಹಸ ತಮ್ಮೆಲ್ಲರಿಗೂ ಆದರ್ಶವಾಗಬೇಕು. ಮನುಷ್ಯನನ್ನು ಹೆಚ್ಚಾಗಿ ಸೋಲಿಸುವುದು ಹೊರಗಿನ ಅಪಾಯವಲ್ಲ; ತಮ್ಮ ಒಳಗೇ ಇರುವ ಭೀತಿ. ತನ್ನ ಭೀತಿಯನ್ನು ಗೆದ್ದ ಮನುಷ್ಯ ಎಂಥ ಅಪಾಯವನ್ನೂ,

ಅರಿಯನ್ನೂ ಸೋಲಿಸಬಲ್ಲ ಎಂಬುದಕ್ಕೆ ನಿನ್ನೆಯ ಘಟನೆ ನಿದರ್ಶನವಾಗಿದೆ. ಈ ಪಾಠವನ್ನು ನಮ್ಮ ಸೈನಿಕರೆಲ್ಲರೂ ಕಲಿಯಬೇಕು.

'ಹಾಗೆ ಆ ಕಾಡಾನೆಗಳಿಂದಲೂ ನಾವು ಪಾಠ ಕಲಿಯಬೇಕಾದುದಿದೆ.

'ಆ ಆನೆಗಳು ನೂರಾರು, ಸಾವಿರಾರು ಸಂಖ್ಯೆಯಲ್ಲಿ ನಮ್ಮ ಮೇಲೆ ನುಗ್ಗಲಿಲ್ಲ. ಇದ್ದವು ಎಲ್ಲೋ ಮೂವತ್ತು—ನಲವತ್ತು. ಅವಕ್ಕಿಂತಲೂ ಹೆಚ್ಚು ಸಂಖ್ಯೆಯ ಆನೆಗಳನ್ನು ನಾವು ಸಮರಭೂಮಿಯಲ್ಲಿ ಕಂಡಿದೇವೆ; ಅಂಥ ಗಜಪಡೆಗಳನ್ನು ಸೋಲಿಸಿದ್ದೇವೆ. ಆದರೆ, ಸಂಖ್ಯೆ ಕಡಮೆಯೆಂದು ಕುಗ್ಗದೆ, ಏಕೈಕದೃಷ್ಟಿಯಿಂದ ಆ ಆನೆಗಳು ಮಾಡಿದ ದಾಳಿ, ಒಂದು ಗಳಿಗೆ ಹೊಯ್ಸಳ ಸೇನಾಸಮುದ್ರವನ್ನೂ ಎದೆಗೆಡಿಸಿತ್ತು; ನಮ್ಮ ವಿನಾಶವನ್ನು ಬಹು ಸಮೀಪಕ್ಕೆ ತಂದಿತ್ತು. ಇದರಿಂದ ನಾವು ಗೆಲುವಿಗೆ ಸೇನೆಯ ಸಂಖ್ಯಾ ಬಲಕ್ಕಿಂತಲೂ, ಸಾಹಸ, ಏಕಮುಖತೆಗಳು ಹೆಚ್ಚು ಪ್ರಾಮುಖ್ಯವೆಂಬುದನ್ನು ಅರಿಯಬಹುದು. ಚೋಳ ಪಡೆಗಳು ಸಂಖ್ಯಾ ಬಲದಲ್ಲಿ ನಮ್ಮ ಬಲಕ್ಕಿಂತಲೂ ಬಲು ಹಿರಿದು. ಆ ಬಲವನ್ನು ನಾವು ಹೇಗೆ ಮುರಿಯಬಹುದು ಎಂಬುದನ್ನು ನಮ್ಮ ಸೇನೆಗೆ ತಿಳಿಸುವುದಕ್ಕಾಗಿಯೇ ಭಗವಂತನು ಈ ಆನೆಯ ಅಪಾಯವನ್ನು ತಂದೊಡ್ಡಿದ ಎಂದು ನಮಗೆ ತೋರುತ್ತದೆ.

'ನಮ್ಮ ಸೇನೆ, ಇಂದಿನ ಘಟನೆಯಿಂದ ಕಲಿಯಬೇಕಾದ ಬುದ್ಧಿಯನ್ನು ಕಲಿತು ಅಜೇಯವಾಗಬೇಕು. ನಮ್ಮ ಸೇನೆಯ ಒಬ್ಬೊಬ್ಬ ಭಟನೂ ಚೋಳ ಸೇನಾ ಮದಗಜದ ಪಾಲಿಗೆ ಅಯ್ಕಣನಾಗಬೇಕು.'

—ಎಂದು ಹೇಳಿ ಅಯ್ಕಣನ ಸಾಹಸವನ್ನು ಬಾಯಾರ ಹೊಗಳಿ ಹಾಡಿದ.

ಆ ದಿನ ವಿಷ್ಣುವರ್ಧನ ಅಯ್ಕಣನಿಗೆ ಮಾಡಿದ ಮರ್ಯಾದೆ, ಆತನ ಬಗ್ಗೆ ಆಡಿದ ಮೆಚ್ಚುಗೆಯ ಮಾತುಗಳು ಹೊಯ್ಸಳ ಸೇನೆಯಲ್ಲಿದ್ದ ಒಬ್ಬೊಬ್ಬ ಸೈನಿಕನಿಗೂ ಬರಲಿರುವ ಸಮರದಲ್ಲಿ ತಾವೂ ಅಂಥ ಸಾಹಸವನ್ನು ಮೆರೆದು, ದೊರೆಯಿಂದ ಅಂಥ ಪ್ರಶಂಸೆ, ಮೆಚ್ಚುಗೆಯನ್ನು ಪಡೆಯಬೇಕು ಎಂಬ ಹುರುಪನ್ನು ಮೂಡಿಸಿದವು.

ಅದರೊಂದಿಗೆ ಸೇನೆಯೊಂದಿಗೆ ಬಂದ ಜ್ಯೋತಿಷ್ಕರು, 'ಈ ಆನೆಗಳ ಅವಾಂತರ, ಮುಂಬರುವ ಘನ ಘೋರ ಸಂಗ್ರಾಮದಲ್ಲಿ ಹೊಯ್ಸಳ ಬಲಕ್ಕೇ

ಗೆಲುವಾಗುತ್ತದೆ ಎಂಬ ನಂಬಿಕೆಯನ್ನು ಕೊಡಲು ಒದಗಿದ ದೈವೀಸಂಕೇತ' ವೆಂದು ಹೇಳಿದುದು, ಸೈನಿಕರಲ್ಲಿ ಮತ್ತಷ್ಟು ಉತ್ಸಾಹವನ್ನು ಮೂಡಿಸಿತು.

ಹೀಗೆ, ಗೆಲುವಿನ ಭರವಸೆಯಿಂದ, ಬಗೆಬಗೆಯ ಸಾಹಸವನ್ನು ಮೆರೆಯುವ ಬಯಕೆಯಿಂದ, ಹೊಯ್ಸಳ ಸೇನೆ, ಹೃದುವಿನಕೆರೆಯಿಂದ ಬೀಡನ್ನು ಕದಲಿಸಿ, ಶತ್ರುಸೀಮೆಯತ್ತ ನಡೆಯಿತು.

ಈ ಭರವಸೆಯಿಂದ ಹುರಿಗೊಂಡ ಪ್ರಚಂಡ ಸೇನಾ ಪ್ರವಾಹಕ್ಕೆ ಇದಿರಾದ ಚೋಳ ಸೀಮೆಯ ನೂರಾರು ಹಳ್ಳಿಗಳು ಕತ್ತಿಯೆತ್ತದೆಯೇ ಶರಣಾಗತವಾದವು. ಶರಣಾಗತವಾದ ಹಳ್ಳಿಯಲ್ಲಿ, ಹೊಯ್ಸಳ ಸೇನೆ ನಡೆದುಕೊಂಡ ರೀತಿ, ಅಲ್ಲಿಯ ಹೆಂಗಸರು ಮಕ್ಕಳ ವಿಷಯದಲ್ಲಿ ತೋರಿದ ಗೌರವ ಭಾವ, ಹಾಲು ಕರೆಯುವ ಹಯನುಗಳನ್ನಾಗಲಿ, ಅವುಗಳ ಕರುಗಳನ್ನಾಗಲಿ, ಹಿಂಸಿಸದೆ, ಪ್ರತಿಭಟಿಸದ ಪುರುಷರಾರನ್ನೂ ಕೊಲ್ಲದೆ ವಿಶ್ವಾಸದಿಂದ ನಡೆಸಿಕೊಂಡ ವಿಚಾರ—ಸುತ್ತಮುತ್ತಲ ಸೀಮೆಯಲ್ಲಿ ಕಥೆಯಾಗಿ ಹಬ್ಬಿತು.

'ಪುಣ್ಯಾತ್ಮ ವಿಷ್ಣುವರ್ಧನ. ಆತನನ್ನು ಹಡೆದ ತಾಯಿ, ಕೈ ಹಿಡಿದ ಮಡದಿಯ ಹೊಟ್ಟೆ ತಣ್ಣಗಿರಲಿ. ದೊರೆ ಎಂದರೆ ಹೀಗಿರಬೇಕು. ಕೈಯಲ್ಲಿ ಕತ್ತಿ ಇದೆ, ತೋಳಲ್ಲಿ ಬಲವಿದೆ ಎಂದು ಸೊಕ್ಕಿ, ಕರೆಯುವ ಹಸುವಿನ ಕೆಚ್ಚಲು ಕೊಯ್ದು, ಅಸಹಾಯಳಾದ ಹೆಂಗಸಿನ ಮರ್ಯಾದೆ ಕಳೆದು ಹಿಗ್ಗುವ ರಕ್ಕಸ ದೊರೆಗಳೆಲ್ಲಾ ನಿರ್ನಾಮವಾಗಿ, ನನ್ನಪ್ಪ, ಧರ್ಮರಾಯ ವಿಷ್ಣುವರ್ಧನ ಲೋಕಕ್ಕೆಲ್ಲಾ ದೊರೆಯಾಗಲಿ.'

—ಎಂದು ಹಳ್ಳಿ ಹಳ್ಳಿಯಲ್ಲೂ ಸಹಸ್ರಾರು ಸ್ತ್ರೀ ಹೃದಯಗಳು ವಿಷ್ಣುವರ್ಧನನನ್ನು ಹರಸಿದವು.

ಈ ವಿಷಯವನ್ನು ಕೇಳಿದ ಹತ್ತಾರು ಹಳ್ಳಿಯ ಗಾವುಂಡಗಳು, ತಮ್ಮ ಹಳ್ಳಿಯ ಬಳಿ ಬಂದ ಹೊಯ್ಸಳ ಸೇನೆಯನ್ನು ಎದುರಿಸದೆ, ಕಳಶ, ಕನ್ನಡಿಯ ಮರ್ಯಾದೆಯೊಂದಿಗೆ ಎದುರುಗೊಂಡು, ತಮ್ಮ ಹಳ್ಳಿಗಳನ್ನು ದೊರೆಗೆ ಮೆಚ್ಚುಗಾಣಿಕೆಯಾಗಿ ಕೊಟ್ಟರು. ಹೆಂಗಸರು ಕೊಡಗಟ್ಟಲೆ ಹಾಲು ತಂದು ಸೇನೆಗೆ ಹಂಚಿದರು. ವಿಷ್ಣುವರ್ಧನನ, ಗಂಗರಾಜರ ಹಣೆಗೆ ಕುಂಕುಮವಿಟ್ಟು, ಹೂಮಾಲೆ ಹಾಕಿ—

'ಭೂಮಿ ನಿಮ್ಮಂಥ ಧರ್ಮಾತ್ಮರಿಗಾಗಲಿ'

—ಎಂದು ಹರಸಿದರು.

ಶಾನ್ತಲಾದೇವಿಯ ಹೆಣ್ಣು ಹೃದಯದ ಸಹಜವಾದ ಬೇಡಿಕೆ, ತಮ್ಮ ವಿಜಯ ಯಾತ್ರೆಯಲ್ಲಿ ಮೆರೆದ ಪವಾಡವನ್ನು ಕಂಡು, ವಿಷ್ಣುವರ್ಧನನ ಕಣ್ಣಿನಲ್ಲಿ ಆನಂದದ ಕಂಬನಿ ಹೊಳೆಯಾಗಿ ಹರಿಯಿತು. ಗಂಗರಾಜರೂ—

' ತಾಯಿಯವರ ಒಂದು ಮಾತಿಗೆ, ಕೋಟಿ ಸೇನೆಗೂ ಇರದಂಥ ಬಲ ಇದೆ. ತಮ್ಮ ಪ್ರೀತಿಯಿಂದ ಅವರೇ ಚೋಳ ಸೀಮೆಯನ್ನು ಗೆದ್ದರು. ತಲಕಾಡೂ ಹೀಗೇ ಸೋತುಬಿಟ್ಟರೆ, ಮೀಸೆ ಹೊತ್ತ ಗಂಡಸರು ಮಾಡುವುದು ಏನೂ ಉಳಿಯುವುದೇ ಇಲ್ಲ.'

—ಎಂದಾಡಿ ತಮ್ಮ ಮೆಚ್ಚುಗೆಯನ್ನು ಸೂಚಿಸಿದರು.

ಮಾರ್ಗದ ಗ್ರಾಮಜನರು ತಮ್ಮಲ್ಲಿ ತೋರಿದ ಸ್ನೇಹ, ವಿಶ್ವಾಸವನ್ನು ಕಂಡ ಸೇನೆ—' ಇದೇನು—ನಾವು ಹೊರಟಿರುವುದು ಯುದ್ಧಕ್ಕೋ, ನಂಟರ ಮನೆಯ ಮದುವೆಗೋ '—ಎಂದು ಆಶ್ಚರ್ಯಪಟ್ಟಿತು.

ಇದರಿಂದಾಗಿ, ಹೆಜ್ಜೆ ಹೆಜ್ಜೆಗೂ ಹೋರಾಡುತ್ತಾ, ಪ್ರತಿಭಟನೆಯನ್ನು ಮುರಿಯುತ್ತಾ, ದಿನಕ್ಕೊಂದು ಗಾವುದ ದೂರವೂ ಸವೆಯದೆ, ಎಷ್ಟು ದಿನ ಶ್ರಮಪಟ್ಟು, ಎಷ್ಟು ಸೇನೆಯನ್ನು ಕಳೆದುಕೊಂಡು ತಲಕಾಡು ತಲುಪಬೇಕೋ ಎಂದಿದ್ದ ಗಂಗರಾಜರ ಚಿಂತೆ ಹುಸಿಯಾಗಿ, ಒಬ್ಬ ಆಳೂ ಸಾಯದೆ, ಒಂದು ಅಸ್ತ್ರ ಮುಕ್ಕಾಗದೆ, ಹೊಯ್ಸಳ ಸೇನೆ ಕಾವೇರಿಯ ಬದಿಯ ಜನನಾಥಪುರದ ಬಳಿ ತಲಪಿತು.

## ೧೧

# ಅದಿಯಮನ ಮತಿಭ್ರಾಂತಿ

ಇದಿರಾದ ಬಿದಿರುಮೆಳೆಯನ್ನು, ಅತಿ ಸುಲಭವಾಗಿ ಮುರಿದೊತ್ತಿ, ತಾನು ಮಾತ್ರ ಕೊಂಚವೂ ಅಳುಕದೆ ನಡೆಯುವ ಮದಗಜಘಟೆಯಂತೆ, ಪ್ರತಿಭಟಿಸಿದ ಚೋಳ ಚತುರಂಗ ಬಲವೆಲ್ಲವನ್ನೂ ಸೋಲಿಸಿದ ಹೊಯ್ಸಳ ಸೇನೆ, ಚೋಳ ಮಾಂಡಲಿಕನ ರಾಜಧಾನಿ ರಾಜರಾಜಪುರ—ತಲಕಾಡು—ಸಮೀಪಿಸುವ ಮೊದಲೇ, ಸಿಡಿಲು ಜಡಿವ ಮೊದಲು ಅದರ ಪ್ರಖರತೆಯನ್ನು ಲೋಕಕ್ಕೆ ಸಾರುವ ಮಿಂಚಿನ ಉಜ್ವಲ ಕಾಂತಿಯಂತೆ, ಹೊಯ್ಸಳ ಸೇನೆಯ ಕೀರ್ತಿಪ್ರಭೆ, ರಾಜರಾಜಪುರದ ಮನೆಮನೆಯಲ್ಲೂ ಮೆಚ್ಚುಗೆಯ ಮಾತಾಗಿ ಹಬ್ಬಿತ್ತು.

ಒಂದು ಕಡೆ, ಹೊಯ್ಸಳ ಸೇನೆಯ ಅರಿವಿನಾಶಕ ಶಕ್ತಿ ಚೋಳರ ಅಭಿಮಾನಿಗಳ ಹೃದಯದಲ್ಲಿ ಭಯದ ಕತ್ತಲನ್ನು ಕವಿಸಿದರೆ, ಮತ್ತೊಂದೆಡೆ, ಚೋಳರ ಪದಾಘಾತದಿಂದ ನೊಂದ ಕನ್ನಡಿಗರ ಹೃದಯದಲ್ಲಿ ಆಶೆಯ ಬೆಳಕನ್ನು ಹೊತ್ತಿಸಿತು.

ರಾಜಧಾನಿ ರಾಜರಾಜಪುರದ ಜನತೆಯಲ್ಲಿ ಹೀಗೆ ಬಗೆಬಗೆಯ ಭಾವನೆಗಳನ್ನು ಮೂಡಿಸಿದ ಹೊಯ್ಸಳ ಸೇನೆಯ ಮುನ್ನಡೆಯ ವಾರ್ತೆ, ಚೋಳ ರಾಜ ಪ್ರತಿನಿಧಿ ಅದಿಯಮನ ಹೃದಯದಲ್ಲಿ ಕನ್ನಡ ಜನತೆಯ ವಿಷಯದಲ್ಲೇ ಭಯಂಕರ ದ್ವೇಷವನ್ನು ಮೂಡಿಸಿತ್ತು.

ಆ ದ್ವೇಷದೊಂದಿಗೆ, ಅವನ ಹೃದಯದಲ್ಲೂ ಚೋಳ ರಾಜ್ಯದ ಭವಿಷ್ಯದ ವಿಷಯದಲ್ಲಿ ಸಂದೇಹ ಮೂಡಿತ್ತು.

ತಲಕಾಡಿಗೆ ಮೂವತ್ತು-ನಲವತ್ತು ಕ್ರೋಶಗಳ ದೂರದಲ್ಲಿದ್ದ ಹೊಯ್ಸಳ ರಾಜಧಾನಿ ದ್ವಾರಸಮುದ್ರದಿಂದ ಹೊಯ್ಸಳ ಸೇನೆ, ತಮ್ಮ ಸೀಮೆಯತ್ತ ದಂಡೆತ್ತಿ ಹೊರಟಿದೆ ಎಂಬ ವಾರ್ತೆ, ಹೊಯ್ಸಳ ಸೇನೆ ಚೋಳ ರಾಜ್ಯದ

ಗಡಿ ಸಮೀಪಿಸುವ ಮುನ್ನವೇ ಬೇಹುಗಾರರ ಮೂಲಕ ಅದಿಯಮನಿಗೆ ತಲುಪಿತ್ತು.

ಆ ವಾರ್ತೆ ತಲುಪಿದಾಗಲೇ, ಅದಿಯಮನ ಸಚಿವರು ಆತನಿಗೆ ಸಾಕಷ್ಟು ರಕ್ಷಣಾವ್ಯವಸ್ಥೆಯನ್ನು ಮಾಡಿಕೊಳ್ಳುವಂತೆ ಸಲಹೆ ಮಾಡಿದ್ದರು. ಆದರೆ ಆಗ ಅದಿಯಮ ಅವರ ಸಲಹೆಗಳಿಗೆ ಅಷ್ಟು ಲಕ್ಷ್ಯ ಕೊಟ್ಟಿರಲಿಲ್ಲ. 'ಹ್ಹು. ಗಂಗ, ಚಾಲುಕ್ಯರಂಥ ಅತಿರಥ, ಮಹಾರಥರನ್ನು ಮಣ್ಣುಗೂಡಿಸಿ, ಅವರ ಸಾಮ್ರಾಜ್ಯಗಳ ಸಮಾಧಿಯ ಮೇಲೆ, ತಮ್ಮ ಪರಾಕ್ರಮದ ಪಳವಿಗೆಯನ್ನು ಹಾರಿಸಿದ, ಚೋಳ ಬಲದ ಇದಿರು, ಇಂದು, ನಿನ್ನೆ ಕಣ್ಣುಬಿಡುತ್ತಿರುವ ಈ ಹೊಯ್ಸಳ ಹುಳುಗಳು ಒಂದು ಲೆಕ್ಕವೇ ? ಮಳೆಯ ಹುಳು, ತನಗೂ ರೆಕ್ಕೆ ಬಂದಿತೆಂದು ಉರಿಯೊಂದಿಗೆ ಸರಸವಾಡಲು ಹೋಗಿ ಸಾವನ್ನು ಅಪ್ಪುವಂತೆ, ಸಾವಿರ ಜನರ ಸೇನೆ ಕಲೆತಿತೆಂದು, ಈ ಹೊಯ್ಸಳರೂ ನಮ್ಮೊಡನೆ ಸೆಣಸಲು ಹೊರಟಿದಾರೆ. ಇದೊಂದು ಮಹಾ ಸೇನೆ, ಇವರದೊಂದು ದೊಡ್ಡ ದಾಳಿ ಎಂದು ನಾವು ಚಿಂತಿಸಬೇಕೆ ? ಬರಲಿ ಬಿಡಿ. ಹೊಯ್ಸಳರಿಗೀಗ ವಿನಾಶ ಕಾಲಕ್ಕೆ ವಿಪರೀತ ಬುದ್ಧಿ ಬಂದಿದೆ.'

—ಎಂದು ತಾತ್ಸಾರದಿಂದ ನಕ್ಕು ನುಡಿದಿದ್ದ.

'ಶತ್ರುವನ್ನಾಗಲಿ, ಬೆಂಕಿಯ ಕಿಡಿಯನ್ನಾಗಲಿ, ಜಾಡ್ಯವನ್ನಾಗಲಿ— ಕಿರಿದು ಎಂದು ತಾತ್ಸಾರದಿಂದ ಕಾಣಬಾರದು; ಕಿರಿದಾಗಿದ್ದಾಗಲೇ ಅದನ್ನು ಮೆಟ್ಟುವುದು ಸುಲಭ ಎಂಬುದನ್ನು ಅರಿತು, ಅದು ಸುಲಭಸಾಧ್ಯವಾಗಿರುವಾಗಲೇ ಮುರಿಯುವುದು ಜಾಣತನ. ಇದು ತಾತ್ಸಾರವೇಳೆಯಲ್ಲ. ಆದುದರಿಂದ ಹೊಯ್ಸಳಸೇನೆ ನಮ್ಮ ಸೀಮೆಯಲ್ಲಿ ಪ್ರವೇಶ ಮಾಡುವವರೆಗೂ ಅವಕಾಶ ಕೊಟ್ಟು ಕುಳಿತಿರುವುದು, ಕೊನೆಗೆ, ನಮ್ಮ ಬುದ್ಧಿಗೇಡಿತನವಾಗಿ ಪರಿಣಮಿಸಬಹುದು'

—ಎಂದು ಅವನ ಸಚಿವರು, ಅದಿಯಮನನ್ನು ಎಚ್ಚರಿಸಿದ್ದರು.

ಆದರೆ ಆ ಆಪ್ತರ ಸಲಹೆ, ರೋಗಿಯ ಬಾಯಿಗೆ ಔಷಧ ಕಹಿಯಾಗುವಂತೆ, ಅದಿಯಮನ ಪಾಲಿಗೆ ಅಹಿತವಾಗಿತ್ತು.

ತನ್ನ ತೋಳಬಲದಲ್ಲಿ ಪ್ರಚಂಡ ವಿಶ್ವಾಸ, ಚೋಳಸೇನೆಯ ಅಜೇಯನೆತೆಯ ವಿಷಯದಲ್ಲಿ ಅಚಲ ಭರವಸೆಗಳಿದ್ದ ಅದಿಯಮನಿಗೆ ಆಪ್ತರ ಮುಂಜಾಗ

ರೂಕತೆ, ಹಾಗೆಂದು ಕಾಣದೆ ಅಕಾರಣ ಭಯ, ಅಂಜುಗುಳಿತನವೆಂದೇ ಕಂಡಿತ್ತು. ಎಂತಲೇ, ಆತನ ಸಚಿವರು—

'ಶತ್ರುಸೇನೆ ನಮ್ಮ ಸೀಮೆಯಲ್ಲಿ ಕಾಲಿಡುವವರೆಗೂ ಬಿಡುವುದು ಉಚಿತವಲ್ಲ'

—ಎಂದಾಗ—

'ಹೊಯ್ಸಳರನ್ನು ಅವರ ಗಡಿಯ ಬಳಿಯೇ ತಡೆಗಟ್ಟುವುದಕ್ಕಿಂತಲೂ, ಆ ಸೇನೆಯೆಲ್ಲಾ, ಸಂಪೂರ್ಣವಾಗಿ ನಮ್ಮ ರಾಜ್ಯ ಪ್ರವೇಶ ಮಾಡುವವರೆಗೂ, ಅವರ ದಾಳಿಯ ಸುದ್ದಿಯೇ ತಿಳಿಯದವರಂತೆ ಸುಮ್ಮನಿರುವುದು ಲೇಸು. ಹಾಗಾದರೆ ಅವರಿಗೆ, ಮತ್ತೆಂದೂ ನಮ್ಮ ಸೀಮೆಯತ್ತ ದಾಳಿಮಾಡುವುದಿರಲಿ, ತಲೆಯಿಟ್ಟು ಮಲಗಲೂ ಭಯಪಡುವಂತೆ ಮಾಡಬಹುದು. ದೈವಾನುಗ್ರಹ ವಿದ್ದರೆ, ಈ ಸಮರ ಯಾತ್ರೆ, ಹೊಯ್ಸಳ ಸಾಮ್ರಾಜ್ಯದ ಸ್ಮಶಾನಯಾತ್ರೆಯೇ ಆಗಬಹುದು.'

—ಎಂದು ಅವರಿಗೇ ಭರವಸೆ ಕೊಟ್ಟಿದ್ದ.

ಅದಿಯಮನ ಆ ಭರವಸೆ, ಕೇವಲ ಪೊಳ್ಳು ಭರವಸೆಯೂ ಆಗಿರಲಿಲ್ಲ. ಅದಕ್ಕೂ ಸಾಕಷ್ಟು ಕಾರಣವಿತ್ತು. ಅದಿಯಮನ ಆಶಾಸೌಧದ ಬುನಾದಿ ಯಲ್ಲಿ ಈ ಹಂಚಿಕೆಯಿತ್ತು :

'ಚೋಳರಾಜ್ಯದ ದಂಡಯಾತ್ರೆಗಾಗಿ ಹೊಯ್ಸಳರು ಸಾಕಷ್ಟು ಸಿದ್ಧತೆ ಮಾಡಿಕೊಂಡಿರುವುದು ನಿಜ. ಬರೀ ದಾಳಿ ಮಾಡುವುದಕ್ಕಷ್ಟೇ ಅಲ್ಲ, ಸಾಧ್ಯವಾದರೆ ಸಂಪೂರ್ಣ ವಿಜಯಗಳಿಸಬಲ್ಲಷ್ಟರಮಟ್ಟಿಗೂ ಅವರೂ ಸೇನಾ ಸಂಗ್ರಹ ಮಾಡಿರಬೇಕು. ಅವರ ಬಲ ಎಷ್ಟಿದ್ದರೂ, ಚೋಳ ರಾಜಧಾನಿ ಯತ್ತ ದಾಳಿ ಹೊರಟಾಗ, ಸಂಪೂರ್ಣ ಹೊಯ್ಸಳ ಬಲವೇ ಇತ್ತ ಬರುತ್ತದೆ. ಹಾಗೆ ಬರುವ ಹೊಯ್ಸಳ ಬಲವನ್ನು, ಮೊದಲ ಹೆಜ್ಜೆಯಲ್ಲಿಯೇ, ತಾವು ಸಂಪೂರ್ಣ ಬಲದಿಂದ ಪ್ರತಿಭಟಿಸಿದರೆ, ಅಷ್ಟಿಷ್ಟು ಪೆಟ್ಟುತಿಂದ ಹೊಯ್ಸಳ ಸೇನೆ, ಮತ್ತೆ ತನ್ನ ನಾಡಿನಲ್ಲಿ ತಲೆಮರೆಸಿಕೊಳ್ಳುತ್ತದೆ.

ಹಾಗಾಗಬಾರದು. ಅದಕ್ಕೆ ಅವಕಾಶ ಕೊಡಬಾರದು.

ಗಡಿಯಲ್ಲಿ ಅಷ್ಟಿಷ್ಟು ಪ್ರತಿಭಟಿಸಿದಂತೆ ಮಾಡಿ, ಆ ಸೇನೆ, ಸಾಕಷ್ಟು ದೂರ ನಮ್ಮ ಸೀಮೆಯೊಳಗೆ ಬರುವವರೆಗೂ ಅವಕಾಶ ಕೊಡಬೇಕು.

ಒಮ್ಮೆ ಅದು ಚೋಳರಾಜ್ಯದೊಳಗೆ ಪ್ರವೇಶಿಸಿದ ಬಳಿಕ, ಆ ಸೇನೆಯನ್ನು ಎಲ್ಲ ರೀತಿಯಿಂದಲೂ ಸುತ್ತುಗಟ್ಟಿ, ಚೋಳರಾಜ್ಯ ಪ್ರವೇಶಮಾಡಿದ ಒಂದು ಹೊಯ್ಸಳ ಪಿಳ್ಳೆಯೂ ಮತ್ತೆ ಜೀವಂತವಾಗಿ ಹಿಂದಿರುಗದಂತೆ ಸಮೂಲವಾಗಿ ನಾಶಮಾಡಬೇಕು.

ಹೀಗೆ ಚೋಳಸೀಮೆಯನ್ನು ಪ್ರವೇಶಿಸಿದ ಹೊಯ್ಸಳಸೇನೆ, ಉರಿಗೆ ಬಿದ್ದ ತರಗೆಲೆಯಂತೆ, ಸುಟ್ಟು ಭಸ್ಮವಾಗುತ್ತಿರುವಾಗಲೇ, ಅತ್ತ ಹೊಯ್ಸಳ ರಾಜಧಾನಿಗೆ ಬಹು ಸಮೀಪದಲ್ಲಿದ್ದ, ಚೋಳ ಸಾಮಂತರಾದ ಚೆಂಗಾಳ್ವ, ಕೊಂಗಾಳ್ವ ಅರಸುಗಳು, ಹೊಯ್ಸಳ ರಾಜ್ಯದ ಹೃದಯದ ಮೇಲೆ ದಾಳಿ ಮಾಡಬೇಕು. ಹೊಯ್ಸಳ ಸೇನೆಯ ಬಹು ಭಾಗವೆಲ್ಲವೂ ಚೋಳ ಸೈನ್ಯದ ಮಧ್ಯೆ, ಹಿಂದಿರುಗಲೂ ಅವಕಾಶವಿಲ್ಲದಂತೆ ಸಿಲುಕಿಕೊಂಡಿರುವುದರಿಂದ, ಸಾಕಷ್ಟು ಸೇನಾ ರಕ್ಷಣೆಯಿಲ್ಲದ ಹೊಯ್ಸಳ ರಾಜಧಾನಿ, ಬುಡಕಳಚಿದ ಬಾಳೆಯಂತೆ ಮುರಿದು ಬೀಳುತ್ತದೆ.

ಹೀಗಾದರೆ, ಹೊಯ್ಸಳರ ಹೆಬ್ಬಯಕೆಯ ದಾಳಿಯಿಂದಲೇ ಅವರ ಸಾಮ್ರಾಜ್ಯದ ಸಂಪೂರ್ಣ ನಾಶ ಸಾಧಿತವಾಗುತ್ತದೆ. ಇದು ಸರಿಯಾದ ದಾರಿ.'

ಅದಿಯಮನ ಸಮರ ಹಂಚಿಕೆ ಹೀಗಿತ್ತು. ಈ ಹಂಚಿಕೆಯ ವಿವರಗಳೆಲ್ಲವನ್ನೂ ಅದಿಯಮನ ಬಾಯಿಂದ ಕೇಳಿದ ಬಳಿಕ, ಸಮರತಂತ್ರ ಪಾರಂಗತರಾದ ಆತನ ಆಪ್ತ ಸಚಿವರಿಗೂ ಆ ಹಂಚಿಕೆ ತಪ್ಪೆಂದು ತೋರಲಿಲ್ಲ. ಅದಕ್ಕೆ ಪ್ರತಿಯಾಗಿ, ಅದರಲ್ಲಿ ಸಾಕಷ್ಟು ಚಾಣಾಕ್ಷತನವಿರುವಂತೆಯೇ ತೋರಿತು. ಆ ಹಂಚಿಕೆ ಸಫಲವಾಗುವುದು ಸಂಭವವೆಂದು ತೋರಿದಾಗ, ಅದನ್ನು ಸಫಲಗೊಳಿಸಲು ಬೇಕಾದ ಉಪಾಯಗಳನ್ನು, ತಾವೂ ಉತ್ಸಾಹದಿಂದ ಆಲೋಚಿಸಿದರು.

ಆ ಹಂಚಿಕೆಗೆ ಅನುಸಾರವಾಗಿಯೇ, ಹೊಯ್ಸಳ ಸೇನೆ, ಚೋಳ ಗಡಿಯನ್ನು ಸಮೀಪಿಸಿದ ವಾರ್ತೆ ಗೂಢಚಾರರಿಂದ ತಿಳಿದುಬರುತ್ತಿದ್ದಂತೆಯೇ, ಗಡಿಯ ಕೋಟೆಗಳಲ್ಲಿದ್ದ ಚೋಳ ಸೇನೆಯ ಅಧಿಕಾರಿಗಳಿಗೆ, ಅದಿಯಮ ಅಪ್ಪಣೆ ಕಳುಹಿಸಿದ—

'ಹೊಯ್ಸಳ ಸೇನೆಯನ್ನು ಗೆಲ್ಲುವ ಉದ್ದೇಶದಿಂದಲೇ ಪ್ರತಿಭಟಿಸಬೇಡಿ. ತೋರಿಕೆಯ ಪ್ರತಿಭಟನೆ ಮಾತ್ರ ಸಾಕು. ಈ ಪ್ರಯತ್ನದಲ್ಲಿ

ಚೋಳ ಸೇನೆಗೆ ಹೆಚ್ಚು ಜನ ನಷ್ಟವಾಗದಂತೆ, ಚೋಳ ಸೇನೆಯ ಯುದ್ಧ ಸಾಮಗ್ರಿಗಳು ಶತ್ರುಗಳ ವಶವಾಗದಂತೆ, ಚೋಳ ಸೇನೆಗಳು ವ್ಯವಸ್ಥಿತವಾಗಿ ಹಿಂಜರಿಯಬೇಕು. ಹಾಗೆ ಮಾಡುವಾಗ ಹೊಯ್ಸಳ ಸೇನೆಗೆ, 'ಚೋಳ ಸೇನೆಯಲ್ಲಿ ಏನೂ ಬಲವಿಲ್ಲ. ಅವರನ್ನು ಗೆಲ್ಲುವುದು ಬಹು ಸುಲಭ' ಎಂಬ ಭಾವನೆ, ಆ ಭಾವನಾಮೂಲವಾದ ಮೈಮರೆವು ಮೂಡುವಂತೆ ಮಾಡ ಬೇಕು. ಆ ಸೇನೆ ಮುಂದುವರಿದಂತೆ, ಅದರ ಬೆಂಬದಿಯಲ್ಲಿ ಮತ್ತೆ ಚೋಳ ಸೇನೆ ಸುಸಜ್ಜಿತವಾಗಬೇಕು.'

ಸೇನೆಗೆ ಈ ಅಪ್ಪಣೆ ಮಾಡಿದಂತೆಯೇ, ಅದಿಯಮ ತಮ್ಮ ಸೀಮೆಯ ಗ್ರಾಮಗಳ ಹೆಗ್ಗಡೆ, ಗಾವುಂಡುಗಳಿಗೆ ಬೇರೊಂದು ಬಗೆಯ ಅಪ್ಪಣೆ ಮಾಡಿದ್ದ—

'ಹೊಯ್ಸಳರ ಬಲ ಒಮ್ಮೆ ಚೋಳಸೀಮೆಯನ್ನು ಪ್ರವೇಶಿಸಿದ ಬಳಿಕ, ಆ ಸೇನೆಯ ಪಶು, ಪ್ರಾಣಿಗಳಿಗೆ ಹುಲ್ಲು-ನೀರು ದೊರೆಯದಂತೆ ನಮ್ಮ ಗ್ರಾಮಗಳ ಜನ ಎಚ್ಚರ ವಹಿಸಬೇಕು. ಹೊಯ್ಸಳಸೇನೆ ನಮ್ಮ ಗ್ರಾಮಗಳನ್ನು ಸಮೀಪಿಸುತ್ತಿದ್ದಂತೆಯೇ, ಅಲ್ಲಿಯ ಜನ ತಮ್ಮಲ್ಲಿದ್ದ ಆಹಾರ ವಸ್ತುಗಳು ಆ ಸೇನೆಗೆ ಸಿಗದಂತೆ ಅಡಗಿಸಿಟ್ಟು, ಇಲ್ಲವೇ ನಾಶಮಾಡಿ, ಗ್ರಾಮದ ಭಾವಿಗಳಿಗೆ ವಿಷ ಬೆರಸಿ, ಹಳ್ಳಿಗಳನ್ನು ತೆರವುಮಾಡಿ, ದೂರವಾಗಬೇಕು. ಅಲ್ಲದೆ, ಗ್ರಾಮದ ಜನ ತಮ್ಮಲ್ಲಿಯೇ ಸಣ್ಣಸಣ್ಣ ಗುಂಪುಗಳನ್ನು ಮಾಡಿಕೊಂಡು, ಶತ್ರುಸೇನೆ ಮೈಮರೆತ ಹೊತ್ತಿನಲ್ಲಿ, ಅವರಮೇಲೆ ದಾಳಿಮಾಡಿ, ಅವರಿಗೆ ಆದಷ್ಟು ನಷ್ಟ ವನ್ನುಂಟುಮಾಡಬೇಕು. ಅಂಥ ಮರೆಗಾಳೆಗದಲ್ಲಿ ಕುದುರೆಯನ್ನು ಕೊಂದ ವನಿಗೆ ಕುದುರೆ, ಆನೆಯನ್ನು ಕೊಂದವನಿಗೆ ಆನೆ, ಒಬ್ಬ ಸೈನಿಕನನ್ನು ಕೊಂದ ವನಿಗೆ ಹತ್ತು ಗದ್ಯಾಣ, ಹತ್ತು ಸೈನಿಕರನ್ನು ಕೊಂದವನಿಗೆ ಐದು ಮತ್ತರು ಭೂಮಿ ಬಹುಮಾನವಾಗಿ ಕೊಡಲ್ಪಡುತ್ತದೆಯಲ್ಲದೆ, ಈ ಕಾರ್ಯದಿಂದ ಗ್ರಾಮಗಳಿಗಾಗಲಿ, ಗ್ರಾಮನಿವಾಸಿಗಳಿಗಾಗಲಿ, ಏನು ನಷ್ಟವಾದರೂ, ಅದನ್ನು ರಾಜ ಭಂಡಾರದಿಂದ ತುಂಬಿಸಿಕೊಡಲಾಗುತ್ತದೆ.'

ಈ ಇಬ್ಬಗೆಯ ಅಪ್ಪಣೆಗಳನ್ನು ಮಾಡಿ ಅದಿಯಮ 'ಇಷ್ಟು ಸಾಕೆಂದು' ತಟಸ್ಥನಾಗಿ ಕುಳಿತಿರಲಿಲ್ಲ.

ಶತ್ರು ಸೇನೆ ದಾಳಿಮಾಡಿದ ಸಂದರ್ಭದಲ್ಲಿ, ಸಾಮಾನ್ಯ ಜನತೆಯಲ್ಲಿ

ಅಧೈರ್ಯ, ಆಳರಸರ ಬಗ್ಗೆ ಅಪನಂಬಿಕೆಗಳು ಮೂಡಲೂ ಅವಕಾಶ ಉಂಟು ಎಂಬುದನ್ನು ಅರಿತ ಆತ, ಜನರಲ್ಲಿ ಚೋಳ ಸಾಮ್ರಾಜ್ಯದ ಅವಿನಾಶಿಯಾದ ಅಜೇಯತೆ, ಚೋಳ ಸೇನೆಯ ಶತ್ರುವಿನಾಶೀ ಸಾಮರ್ಥ್ಯದ ಬಗ್ಗೆ, ಬಗೆ ಬಗೆಯಾದ ಸುದ್ದಿಗಳನ್ನು, ಕಥೆಗಳನ್ನು ಜನತೆಯಲ್ಲಿ ಹರಡಲು, ಆ ಕಲೆಯಲ್ಲಿ ನಿಷ್ಣಾತರಾದವರನ್ನು ನಿಯೋಜಿಸಿದ್ದೇ ಅಲ್ಲದೆ, ಹೊಯ್ಸಳ ಸೇನೆಯ ದೌರ್ಬಲ್ಯ, ಪಿಶಾಚತನ, ರಕ್ತಪಿಪಾಸೆಗಳ ಬಗ್ಗೆ ವಿಧವಿಧವಾದ ವಾರ್ತೆಗಳನ್ನು ಹಬ್ಬಿಸಿ, ಹೊಯ್ಸಳ ಸೇನೆಯ ಬಗ್ಗೆ ಜನರಲ್ಲಿ ವಿರೋಧ ಭಾವನೆಯೇ ಬೆಳೆಯುವಂತೆ ಮಾಡುವುದಕ್ಕಾಗಿಯೂ, ಅದಕ್ಕೆ ತಕ್ಕ ಜನರನ್ನು ನೇಮಿಸಿದ್ದ.

ಒಂದು ವೇಳೆ—ಇದೆಲ್ಲ ಸಿದ್ಧತೆ, ಪ್ರಯತ್ನಗಳೂ ವಿಫಲವಾದಲ್ಲಿ, ಇಷ್ಟೆಲ್ಲ ಆತಂಕಗಳನ್ನು ಗೆದ್ದು ಹೊಯ್ಸಳ ಸೇನೆ ತಲಕಾಡನ್ನು ಸಮೀಪಿಸಿದಲ್ಲಿ, ಕಾವೇರಿಯ ತೀರದಲ್ಲಿ ಹೊಯ್ಸಳ ಸೇನೆಯ ಹೆಸರು ತೊಡೆದು ಹಾಕುವ ಸಲುವಾಗಿ, ತನಗೆ ಅಗತ್ಯವಾದ ಸೇನಾಸಹಾಯ ನೀಡುವಂತೆ, ನೀಲಗಿರಿ ನಾಡಿನ ಅಧಿಪತಿಯಾದ ಧರ್ಮಪುರಿಯ ಚೋಳಮಂಡಲಾಧೀಶ್ವರನಿಗೆ ಪತ್ರ ಕಳಿಸಿದ್ದ.

ಇದು, ಚೋಳನಾಡಿನ ಮೇಲೆ ದಂಡೆತ್ತಿ ಬಂದ ಹೊಯ್ಸಳ ಸೇನೆಯನ್ನು ಹುಟ್ಟಡಗಿಸಲು ಅದಿಯಮ ಮಾಡಿದ ಹಂಚಿಕೆ.

ಇದೆಲ್ಲವನ್ನು ಅರಿತವರು, ಯಾರಿಗೂ ಆ ಹಂಚಿಕೆ ಸಫಲವಾಗುವ ವಿಷಯದಲ್ಲಿ ಸಂಶಯ ಉಳಿಯಲಿಲ್ಲ.

ಇಷ್ಟೆಲ್ಲ ಸಿದ್ಧತೆಗಳನ್ನು ಮಾಡಿಕೊಂಡ, ಚೋಳ ಮಂಡಲಾಧೀಶ್ವರ ಅದಿಯಮ, ಹೊಯ್ಸಳ ಸೇನೆ ಚೋಳರಾಜ್ಯದ ಸೀಮೋಲ್ಲಂಘನೆ ಮಾಡಿದ ಘಳಿಗೆಯಿಂದಲೂ, ದಿನದಿನವೂ ಸಮರರಂಗದ ವಾರ್ತೆ ತನಗೆ ತಲುಪುವಂತೆ ವ್ಯವಸ್ಥೆಮಾಡಿ, ದಿನದಿನವೂ ಹೊಯ್ಸಳ ಸೇನೆ, ಪತನೋನ್ಮುಖವಾಗಿ, ಕೊನೆಯ ಪ್ರಾಣಹರಣದ ಆಘಾತಕ್ಕೆ ಸಿದ್ಧವಾಗಿದೆ ಎಂಬ ವಾರ್ತೆ ಬರುವುದನ್ನೇ ಕಾಯುತ್ತಾ ಕುಳಿತ—ಆ ಕೆಲಸಕ್ಕೆ ತಕ್ಕಷ್ಟು ಸೇನೆಯನ್ನು ಸಜ್ಜುಗೊಳಿಸಿಕೊಂಡು.

ಅದಿಯಮ ನಿರೀಕ್ಷಿಸಿದ ವಾರ್ತೆಯೇ ಒಂದು ಬಗೆಯದು.

ಆದರೆ ಸಮರರಂಗದಿಂದ ಅವನಿಗೆ ಬಂದ ವಾರ್ತೆಯೇ ಬೇರೊಂದು ಬಗೆಯದು.

ಅವನು ಉರುಳಿಸಿದ ದಾಳ ಬಯಸಿದ ಗರವನ್ನು ತೋರಿಸಲಿಲ್ಲ.

ಅವನು ಕೇಳ ಬಯಸಿದುದು ತನ್ನೆಲ್ಲ ಯೋಜನೆಗಳ ವಿಜಯವಾರ್ತೆ—

ಆದರೆ ಕೇಳಿದುದು, ತನ್ನ ಒಂದೊಂದು ಹಂಚಿಕೆಯೂ ಹುಸಿಯಾದ ವಿಷವಾರ್ತೆ.

ಚೋಳಸೇನೆಯೇನೊ ಅದಿಯಮನ ಅಪ್ಪಣೆಯಂತೆ ಆತನ ನಿರೀಕ್ಷೆಯಂತೆ ಕೆಲಸಮಾಡಿತ್ತು. ಆದರೆ ಜನತೆ ಮಾತ್ರ, ಆತನ ನಿರೀಕ್ಷೆಗೆ ಪ್ರತಿಯಾಗಿ ವರ್ತಿಸಿ, ಅವನ ಬಯಕೆಯ ಗೋಪುರ ಕುಸಿದು ಬೀಳುವಂತೆ ಮಾಡಿತ್ತು.

ಯಾರ ಪಾಳಯಕ್ಕೆ ಉರಿಹೊತ್ತಿಸಿ, ಯಾರ ಕುಡಿಯುವ ನೀರಿಗೆ ವಿಷ ಬೆರಸಿ, ಯಾರಿಗೆ ನೀರು-ನೆಳಲೂ ಇರದಂತೆಮಾಡಿ ವಿಧ್ವಂಸನಗೊಳಿಸಬೇಕೆಂದು ಅದಿಯಮ ಅಪ್ಪಣೆಮಾಡಿದ್ದನೋ, ಆ ಶತ್ರುಸೇನೆಯನ್ನೇ ಜನತೆ ಹಾಲು, ತುಪ್ಪದ ಹರವಿಗಳೊಂದಿಗೆ, ಹೂಹಾರ, ಹೊನ್ನು ಕಾಣಿಕೆಗಳೊಂದಿಗೆ ಇದಿರುಗೊಂಡು ಅವರ ವಿಜಯಯಾತ್ರೆಯನ್ನು ಸುಗಮಗೊಳಿಸಿದುದೇ ಅಲ್ಲದೆ, ತಾವೂ, ಇದ್ದ ಆಯುಧ ಹಿಡಿದು, ಚೋಳರ ವಿರುದ್ಧ ಆ ಸೇನೆಯಲ್ಲಿ ಸೇರಿದ್ದರು.

ಅದಿಯಮನ ರಹಸ್ಯವಾದ ಅಪ್ಪಣೆಗಳೆಲ್ಲವನ್ನೂ, ಶತ್ರುಸೇನೆಯ ನಾಯಕರಾದ ಗಂಗರಾಜರಿಗೆ ತಿಳಿಸಿದುದೇ ಅಲ್ಲದೆ, ತಾವೇ ಚೋಳಗೂಢಚಾರರನ್ನು ಬಂಧಿಸಿ, ಮತ್ತಾರೂ ಚೋಳರ ಬೇಹುಗಾರರಾಗದಂತೆ ಎಚ್ಚರಿಸುವ ಸಲುವಾಗಿ, ಸೆರೆಹಿಡಿದ ಗೂಢಚಾರರ ಕಿವಿ, ನಾಲಗೆಗಳನ್ನು ಕತ್ತರಿಸಿ, ಸಾಲುಮರಕ್ಕೆ ತೂಗಿಹಾಕಿದ್ದರು. ತಮ್ಮ ಹಳ್ಳಿಗಳಲ್ಲಿ ಅವಿತುಕೊಂಡ ಚೋಳ ಸೈನಿಕರ ತಲೆಗಳನ್ನು ತಾವೇ ಕತ್ತರಿಸಿ, ತಮ್ಮ ಗ್ರಾಮದ ಬಳಿ ಬಂದ ಹೊಯ್ಸಳ ದೊರೆಗೆ ಪಾದಗಾಣಿಕೆಯಾಗಿ ಒಪ್ಪಿಸಿದ್ದರು.

ದಿನದಿನವೂ ಸಮರಾಂಗಣದಿಂದ ಬಂದ ಈ ಬಗೆಯ ಹೃದಯ ವಿದ್ರಾವಕವಾದ ವಾರ್ತೆಗಳನ್ನು ಕೇಳಿ ಅದಿಯಮನಿಗೆ ತಾನು ಕುಳಿತ ಆಸನವೇ ಹೊಯ್ದಾಡಿದಂತಾಯಿತು. ತಾನು ಮಾಡಿದ ಯೋಜನೆಗಳೆಲ್ಲವೂ ವಿಫಲ

ವಾದುದೇ ಅಲ್ಲದೆ, ಅವೇ ತನ್ನ ವಿನಾಶಕ್ಕೂ ಕಾರಣವಾದುದು ಅರಿವಾಗಿ ಅವನ ಹೃದಯದಲ್ಲಿ ನಿರಾಶೆಯೊಂದಿಗೆ, ಕ್ರೋಧವೂ ಕಾರ್ಬೋಗೆಯಂತೆ ಹಬ್ಬಿತು.

'ಛಿ! ಈ ಹಾಳು ಕನ್ನಡಜನವೇ ಇಷ್ಟು. ತಮ್ಮ ಕಾಡು ಭಾಷೆಯಲ್ಲಿ ಮಾತನಾಡುವ ದೊರೆ ಇವರಿಗೆ ದೇವಸಮಾನ. ಕನ್ನಡದಲ್ಲಿ 'ಅಣ್ಣ' ಎಂದವನನ್ನು, ಅವನು ತಮ್ಮ ಕತ್ತನ್ನೇ ಕತ್ತರಿಸಬಂದಿದ್ದರೂ, ಅಕ್ಕರೆಯ ಸೋದರನಂತೆ ಆಲಂಗಿಸುತ್ತಾರೆ. ತಮ್ಮ ಸೀಮೆಯಲ್ಲಿ ಹುಟ್ಟಿದವನು ಎಂದರೆ, ಅವನಿಗಾಗಿ ತಮ್ಮ ಕತ್ತನ್ನು ಮೀಸಲು ಎಡೆಯಾಗಿಟ್ಟು ಒಪ್ಪಿಸುತ್ತಾರೆ. ನಾವೂ ಕನ್ನಡವಾಡುವ ಜನವಾಗಿದ್ದಿದ್ದರೆ, ಇವರು ನಮ್ಮನ್ನು ಶತ್ರುಗಳಿಗೆ ಹೀಗೆ ಸುಲಭವಾಗಿ ಬಿಟ್ಟುಕೊಡುತ್ತಿದ್ದರೇ ? ಶತ್ರುವಿನ ಹಾದಿಗೆ ಅಡ್ಡವಾಗಿ ತಮ್ಮ ಹೆಣಗಳ ಕೋಟೆಯನ್ನೇ ಕಟ್ಟುತ್ತಿದ್ದರು. ಈ ಜನರನ್ನು ನಂಬಿ ನಾನು ಮೂರ್ಖನಾದೆ. ದಾಮೋದರ ನಮಗೆ ಹೇಳುತ್ತಲೇ ಇದ್ದ—'ಎಂದಿದ್ದರೂ, ನಮಗೆ ನಮ್ಮ ಸೇನೆಗಳದೇ ನಂಬಿಕೆಯೇ ಹೊರತು, ಈ ಕನ್ನಡವಾಡುವ ಜನರದ್ದಲ್ಲ' ಎಂದು. ಅದನ್ನು ನಂಬದೆ ನಾನು ಕೆಟ್ಟೆ. ಇರಲಿರಲಿ—ಈ ಕನ್ನಡಿಗರ ಕನ್ನಡತನ ಎಷ್ಟುಕಾಲ ಈ ಹೊಯ್ಸಳ ಹುಳುವನ್ನು ಉಳಿಸಿ ಕೊಳ್ಳುತ್ತದೆಯೋ ನಾನೂ ನೋಡಿಯೇ ಬಿಡುತ್ತೇನೆ. ಈ ಕನ್ನಡಜನ, ಅವರ ದೊರೆ ಇಬ್ಬರಿಗೂ ಚೋಳ ಖಡ್ಗದ ರುಚಿ ತೋರಿಸಿ, ಬಳಿಕ ಈ ಕನ್ನಡಿಗರಿರಲಿ, ಆ ಕನ್ನಡದ ಹೆಸರೂ ಉಳಿಯದಿದ್ದಂತೆ ಮಾಡದಿದ್ದಲ್ಲಿ ನನ್ನ ಹೆಸರು ಅದಿಯಮನೇ ಅಲ್ಲ.'

—ಎಂದು ಹಟತೊಟ್ಟ.

ವಿಧಿ, ತಾನು ಹಾಳಮಾಡ ಬಯಸುವವನನ್ನು ಮೊದಲು ಬುದ್ಧಿಗುರುಡ ನನ್ನಾಗಿ ಮಾಡುತ್ತದೆ ಎಂಬ ಪ್ರಾಚೀನೋಕ್ತಿ ಅದಿಯಮನ ವಿಷಯ ದಲ್ಲಿಯೂ ಸತ್ಯವಾಯಿತು.

ತನ್ನ ಸೇನೆಯ ಸೋಲು, ತನ್ನ ಯೋಜನೆಗಳ ಅಸಾರ್ಥಕತೆ ಎಲ್ಲಕ್ಕೂ ಕನ್ನಡಿಗರ ಕನ್ನಡತನವೇ ಕಾರಣ ಎಂದು ಅರ್ಥಮಾಡಿಕೊಂಡ ಅದಿಯಮ, ಆ ಅರಿವನ್ನು ಸಾರ್ಥಕವಾದ ರೀತಿಯಲ್ಲಿ ವಿನಿಯೋಗಿಸದೆ, ಆಗಲೂ ತಪ್ಪು ಮಾರ್ಗದಲ್ಲೇ ಮುಂದುವರಿದ. 'ಒಂದು ತಪ್ಪು ಹತ್ತು ತಪ್ಪುಗಳ ತಾಯಿ' ಎನ್ನುವ ಮಾತಿನಂತೆ, ಹೊಯ್ಸಳ ಸೇನೆಯ ಅಪ್ರಯಾಸ ವಿಜಯಕ್ಕೆ ಎಲ್ಲ

ಕ್ಕಿಂತ ಹೆಚ್ಚಾಗಿ ಅವರು ತೋರಿದ ಮಾನವ ಪ್ರೇಮವೇ ಕಾರಣ ಎಂಬುದನ್ನರಿಯದೆ, ಕನ್ನಡಿಗರ ಕನ್ನಡತನವೇ ತನ್ನೆಲ್ಲ ವಿಫಲತೆಗೂ ಕಾರಣ ಎಂದು ತಪ್ಪುಕಲ್ಪನೆ ಮಾಡಿಕೊಂಡ ಅದಿಯಮ, ತಾನು ಉಳಿಯಬೇಕಾದರೆ, ಕನ್ನಡಿಗರ ಕನ್ನಡತನವನ್ನೇ ಮೂಲೋತ್ಪಾಟನ ಮಾಡಬೇಕು ಎಂಬ ವಿನಾಶದ ದಾರಿಯಲ್ಲಿ ಹೆಜ್ಜೆಹಾಕಿದ.

ಆ ದಾರಿಯಲ್ಲಿ ಅವನಿಗೆ ನೆರನಾದವನು—ಸಾಮನ್ತ ದಾಮೋದರ.

# ೧೨

## ನಿರಾಶೆಯ ಪಂಜರ

ದಾಮೋದರ, ಚೋಳ ಮಂಡಲಾಧೀಶ್ವರ ಅದಿಯಮನ ಬಲಗೈ.

ಆ ಪದವಿಗೆ ಏರಲು ಅವನಿಗಿದ್ದ ಅರ್ಹತೆ ಎರಡು: ಮೊದಲನೆಯದಾಗಿ ಅವನು 'ರಾಜ ಶ್ಯಾಲಕ'; ಎರಡನೆಯದಾಗಿ ಅವನು ಅದಿಯಮ ಏನು ಹೇಳಿದರೂ, ಏನೊಂದೂ ಯೋಚನೆಮಾಡದೆ 'ಅದೇ ಅಹುದು' ಎನ್ನುತ್ತಿದ್ದುದು.

ಅಧಿಕಾರ ಪೀಠವನ್ನೇರಿದ ಮನುಷ್ಯರಲ್ಲಿ ಇಬ್ಬಗೆಯ ಬಯಕೆಗಳು ಸದಾ ಜಾಗ್ರತವಾಗಿರುತ್ತವೆ. ಈ ಎರಡರಲ್ಲಿ ತಾನು ಒಮ್ಮೆ ಏರಿದ ಅಧಿಕಾರವನ್ನು ಶಾಶ್ವತವಾಗಿ ಉಳಿಸಿಕೊಳ್ಳಬೇಕೆಂಬ ವ್ಯಾಮೋಹಕ್ಕೆ ಅಗ್ರಸ್ಥಾನ. ಅದಾದ ಬಳಿಕ, ಎರಡನೆಯದು, ತನ್ನ ಅಧಿಕಾರ ನಿರ್ವಹಣ ರೀತಿಯನ್ನು ತನ್ನ ಸುತ್ತಲವರು ಹಾಡಿ ಹೊಗಳಬೇಕು ಎಂಬುದು.

ಅಧಿಕಾರಪೀಠ ಮನುಷ್ಯರಲ್ಲಿ ಮೂಡಿಸುವ ಈ ಬಯಕೆಗಳೇ, ಒಂದು ಕಾಲಕ್ಕೆ ಬಹು ಹಿತಕರವಾಗಿ ತೋರಿದರೂ, ಒಂದಲ್ಲ ಒಂದು ಕಾಲಕ್ಕೆ, ಅವೇ ಆ ಮನುಷ್ಯರ ವಿನಾಶಕ್ಕೂ ಕಾರಣಗಳಾಗುತ್ತವೆ. ಆದರೆ ತಕ್ಕ ಅರ್ಹತೆಗಳಿಂದ ಅಧಿಕಾರಕ್ಕೆ ಬಂದಾತ, ತನ್ನ ಅಧಿಕಾರ ಪಥದಲ್ಲಿರುವ ಈ ವಿಷ ಸುಳಿಗಳನ್ನು ಅರಿತು, ಇವುಗಳ ಸೆಳೆತಕ್ಕೆ ಸಿಲುಕದಂತೆ ಎಚ್ಚರವಾಗಿರುತ್ತಾನೆ. ಅಂಥ ಮನುಷ್ಯ ತನ್ನ ಅಧಿಕಾರ, ತನ್ನ ಪ್ರತಿಷ್ಠೆಗಳಿಗಿಂತಲೂ ಮಿಗಿಲಾಗಿ, ತನಗೆ ಯಾರಿಂದ ಅಧಿಕಾರ ಲಬ್ಧವಾಯಿತೋ ಅವರ ಹಿತದ ವಿಷಯದಲ್ಲಿ ಹೆಚ್ಚು ಜಾಗರೂಕನಾಗಿದ್ದು, ತನ್ನ ಯಜಮಾನನ ಕ್ಷೇಮ, ತನ್ನ ಅಧಿಕಾರದ ಉಳಿವು ಎರಡನ್ನೂ ಸಾಧಿಸುತ್ತಾನೆ. ಹಾಗಲ್ಲದಿದ್ದವನು, 'ತಾನು ಕೆಟ್ಟ ಕೋತಿ ವನವನ್ನೆಲ್ಲಾ ಕೆಡಿಸಿತು' ಎಂಬಂತೆ, ಕಂಭ ತಾನೂ ಉರುಳುವುದಲ್ಲದೆ, ತನ್ನನ್ನು ಆಧಾರವಾಗಿ ನೆಚ್ಚಿದ ಮನೆಯನ್ನೂ ಉರುಳಿಸುವಂತೆ, ತಾನು

ವಿನಾಶದ ಹಾದಿಯನ್ನು ಹಿಡಿಯುವುದಲ್ಲದೆ, ತನ್ನನ್ನು ನಂಬಿದ ಯಜಮಾನನನ್ನೂ ವಿನಾಶದತ್ತ ಎಳೆಯುತ್ತಾನೆ.

ದಾಮೋದರನಿಂದ ಅದಿಯಮನಿಗಾದ ಉಪಕಾರವೂ ಇಷ್ಟೆ !

ಅದಿಯಮನ ಮಡದಿಯ ಸೋದರನೆಂದು, ಆಸ್ಥಾನದಲ್ಲಿ ಸ್ಥಾನಗಳಿಸಿದ್ದ ದಾಮೋದರನಿಗೆ, ತನ್ನ ಅಂತಸ್ತಿಗೆ ಯಾವ ಪದವಿಯೂ ಹಿರಿದಾದುದಲ್ಲ ಎಂಬ ಭಾವನೆಯಿತ್ತು. ನೆಂಟಸ್ತಿಕೆ ನೀಡಿದ ಈ ದುರಭಿಮಾನದೊಂದಿಗೆ, 'ತಾನು ನೆಲದೊಡೆಯರಾದ ಚೋಳರ ಪೀಳಿಗೆಗೆ ಸೇರಿದವನು, ಆದುದರಿಂದ ತಾನು ಅಧಿಕಾರಕ್ಕೆ ಅರ್ಹ. ಚೋಳಸೇನೆಗೆ ಈ ಭೂಮಿಯನ್ನು ಸೋತ ಜನ ಕೇವಲ ದಾಸರಾಗಿರಲು ತಕ್ಕವರೇ ಹೊರತು ಯಾವ ಬಗೆಯ ಅಧಿಕಾರದಲ್ಲಿರಲೂ ಅನರ್ಹರು' ಎಂಬ ಭ್ರಮಾಮೂಲವಾದ ದುರಹಂಕಾರವೂ ಇದ್ದು ಅವು ದಿನದಿನವೂ ದಾಮೋದರನ ಬುದ್ಧಿಗೆ ಕಳ್ಳು ಕುಡಿಸುತ್ತಿದ್ದುವು.

ತನಗೆ ಸರಿ ಎಂದು ಕಂಡ ಈ ವಿಷಯಗಳನ್ನು ದಾಮೋದರ ಅದಿಯಮನಿಗೂ ಹೇಳಿ, ಅವನ ಬುದ್ಧಿಯನ್ನು ತನ್ನ ಜಾಡಿಗೇ ಎಳೆಯಲು ಯತ್ನಿಸುತ್ತಿದ್ದ. ಅಧಿಕಾರಾರೂಢನಾದ ಅದಿಯಮನ ಬುದ್ಧಿ ಅವನ ವಶದಲ್ಲೇ ಇರುವವರೆಗೂ ದಾಮೋದರನ ಸಲಹೆಗಳಿಗೆ ಆತ ಅಷ್ಟಾಗಿ ಕಿವಿ ಕೊಟ್ಟಿರಲಿಲ್ಲ. ಹಾಗೆಂದು ಅವನ ಮಾತುಗಳನ್ನು ತಾತ್ಸಾರವಾಗಿ ತಳ್ಳಿಹಾಕಿಯೂ ಇರಲಿಲ್ಲ. ತನಗೆ ತಿಳಿದುದನ್ನು ಹೇಳುತ್ತಿರಲಿ ಎಂದು ಸುಮ್ಮನಿದ್ದ. ಹೂವಿನಗಿಡಗಳನ್ನು ಬೆಳೆಸಬೇಕೆಂದರೆ, ಅದಕ್ಕೆ ತಕ್ಕ ಕೃಷಿ ಬೇಕು, ಉತ್ತಮ ನೀರು, ಗೊಬ್ಬರ–ಎಲ್ಲವೂ ಬೇಕು. ಆದರೆ ಕಳ್ಳಿ, ಮುಳ್ಳು ಪೊದರು, ಊಷರ ಕ್ಷೇತ್ರದಲ್ಲೂ ಬೆಳೆಯುವಂತೆ, ದಾಮೋದರನ ದುರಹಂಕಾರ, ಅದಿಯಮನ ಮೌನವನ್ನೇ ಪ್ರೋತ್ಸಾಹವೆಂದು ಭಾವಿಸಿ ಬೆಳೆದಿತ್ತು.

ಆ ಭಾವನೆಯಲ್ಲೇ ದಾಮೋದರ, ವಿಧಿಹತರಾಗಿ ಚೋಳರ ಆಳ್ವಿಕೆಗೆ ತಲೆಬಾಗಬೇಕಾಗಿ ಬಂದ ಕನ್ನಡ ಜನರಮೇಲೆ ತನ್ನ ಚೋಳತನದ ಅಗ್ನಿಮುದ್ರೆಯನ್ನು ಒತ್ತ ತೊಡಗಿದ. ಗಂಗವಾಡಿಯ ಜನ ತಮ್ಮ ಅಧಿಕಾರವಶರಾದುದೇ ಸಾಲದೆಂಬಂತೆ ಗಂಗವಾಡಿಯ ಹೆಸರನ್ನು ಬದಲಿಸಿ, 'ರಾಜೇಂದ್ರ ಚೋಳ ಒಳನಾಟ್ಟು' ಎಂದು ಹೆಸರಿಟ್ಟ. ಹಳ್ಳಿಹಳ್ಳಿಗಳಿಗೂ ಹೆಸರು ಬದಲಾಯಿತು. ದೇವಾಲಯದ ಅಧಿಕಾರವೆಲ್ಲಾ ಕಣಿವೆಯ ಕೆಳಗಿನಿಂದ

ಬಂದವರದಾಯಿತು. ಕನ್ನಡನುಡಿಗೆ ನೆಲೆಮನೆಯಂತಿದ್ದ ಬಸದಿಗಳು ನೆಲ ಸಮನಾದುವು. ಪೂರ್ವದ ಗಂಗ ಅರಸರು ನೀಡಿದ ದತ್ತಿ, ಮಾಡಿದ ಧರ್ಮಗಳೂ, ಆಳರಸರ ಬಾಲಬಡಕದ ಬೊಕ್ಕಸ ಸೇರಿದವು. ರಾಜಭಾಷೆಯಾದ ತಮಿಳು ದೇಶಭಾಷೆಯಾದ ಕನ್ನಡವನ್ನು ಕಬಳಿಸಿ ಮೆರೆಯಲಾರಂಭಿಸಿತು. ಈ ದುರಭಿಮಾನದ ದಬ್ಬಾಳಿಕೆಯಲ್ಲಿ, ಕನ್ನಡನಾಡಿನಲ್ಲಿ ಕನ್ನಡಿಗರೇ ಪರದೇಶಿಗಳಾಗಿ ಅಲೆಯುವಂಥ ಹೊತ್ತು ಬಂದಿತು.

ಇಷ್ಟಾಗಿಯೂ ದಾಮೋದರನ ದುರಹಂಕಾರ ಭೂತಕ್ಕೆ ತೃಪ್ತಿಯಾಗಿರಲಿಲ್ಲ.

ಚೋಳ ಅಧಿಕಾರಿಗಳು ಕೊಟ್ಟ ಉಪಟಳವನ್ನೆಲ್ಲಾ ಸಹಿಸುತ್ತ, ಅನಿವಾರ್ಯವಾಗಿ ಅಧಿಕಾರದಲ್ಲಿ ಉಳಿದ ಹಲಕೆಲವು ಕನ್ನಡ ಅಧಿಕಾರಗಳನ್ನು ಅವರ ಅಧಿಕಾರದಿಂದ ಕಿತ್ತೊಗೆದು, ಅವರನ್ನು ಊಳಿಗದ ಆಳುಗಳ ಮಟ್ಟಕ್ಕೆ ಇಳಿಸುವವರೆಗೂ ಅವನಿಗೆ ತೃಪ್ತಿ ಇರಲಿಲ್ಲ.

ಆ ಒಂದು ಬಯಕೆಯನ್ನು ಈಡೇರಿಸಿಕೊಳ್ಳಲು ದಾಮೋದರ ಸಮಯ ಕಾಯುತ್ತಿದ್ದ.

ಈಗ ಅದಿಯಮ ಕನ್ನಡಿಗರಮೇಲೆ ಪ್ರಕ್ಷುಬ್ಧನಾದುದನ್ನು ಕಂಡು, ದಾಮೋದರನಿಗೆ, ತನ್ನ ಇಚ್ಛೆಯನ್ನು ತೀರಿಸಿಕೊಳ್ಳಲು ತಕ್ಕ ಅವಕಾಶ ದೊರೆಯಿತು.

ಹೊಯ್ಸಳಸೇನೆಯ ಮುನ್ನಡೆಯನ್ನು ತಡೆಯಲು ತಾನು ಹಾಕಿದ ಹಂಚಿಕೆಗಳೆಲ್ಲವೂ ವಿಫಲವಾದುದನ್ನು ಕಂಡ ಅದಿಯಮ, ಮುಂದೆ ಹೇಗೆ ಮಾಡುವುದು ಎಂದು ಆಲೋಚಿಸ ತೊಡಗಿದ. ಉಳಿದ ಎಲ್ಲ ಉಪಾಯಗಳೂ ವಿಫಲವಾದ ಆ ಹೊತ್ತಿನಲ್ಲಿ ಆತನಿಗೆ ಉಳಿದಿದ್ದ ಏಕೈಕ ಆಶಾಕಿರಣ, ಧರ್ಮಪುರಿಯ, ನೀಲಗಿರಿನಾಡಿನ ಮಂಡಲಾಧೀಶ್ವರನಾದರೂ ತನ್ನ ನೆರವಿಗೆ ಬರಬಹುದು ಎಂಬುದು. ಅಲ್ಲಿಂದ ಸೇನಾಸಹಾಯ ಒದಗಿದರೆ, ಈಗಲೂ ಹೊಯ್ಸಳ ಸೇನೆಯನ್ನು ಮಟ್ಟಹಾಕಬಹುದು ಎಂಬ ಆಸೆಯಿತ್ತು.

ಎಂತಲೇ, ತಾನು ಧರ್ಮಪುರಿಗೆ ಅಟ್ಟಿದ ನಿಯೋಗಿಗಳು, ಅಲ್ಲಿಯ ಮಂಡಲಾಧೀಶ್ವರನ ಉತ್ತರದೊಂದಿಗೆ ಹಿಂದಿರುಗಿದರೆಂಬ ಸುದ್ದಿಯನ್ನು ಕೇಳಿದಾಗ, ಕ್ರಮೇಣ ನಿರಾಶೆಯ ಮೋಡ ಕವಿಯುತ್ತಿದ್ದ ಅದಿಯಮನ ಹೃದಯ

ದಲ್ಲಿ ಆಶೆಯ ಹೊಂಗಿರಣ ಬೆಳಗಿತು. ಆದರೆ ಆ ಆಸೆಗೂ ಬಹುಕಾಲ ಬದುಕುವ ಜಾತಕಬಲವಿರಲಿಲ್ಲ. ಉತ್ತರ ಬಂದಿತು ಎಂದು ಕೇಳಿದಾಗ ಮೂಡಿದ ಆಸೆ, ಆ ಉತ್ತರವನ್ನು ಓದುತ್ತಿದ್ದ ಹಾಗೇ ನಂದಿಹೋಯಿತು.

ಆದಿಯಮನ ಬೇಡಿಕೆಗೆ ಉತ್ತರವಾಗಿ ಧರ್ಮಪುರಿಯ ಮಂಡಲಾಧೀಶ್ವರ—

‘ ನಿಮ್ಮ ಅವಸರದ ಓಲೆ ಸೇರಿ, ಅದರಲ್ಲಿಯ ವಿಷಯಗಳೆಲ್ಲವೂ ಮನವರಿಕೆಯಾದವು. ಈ ಅವಸರದ ಪರಿಸ್ಥಿತಿಯಲ್ಲಿ ತಮಗೆ ನೆರವು ನೀಡಬೇಕೆಂಬ ಅಪೇಕ್ಷೆ ನಮಗೆ ಸಂಪೂರ್ಣವಾಗಿ ಇದ್ದರೂ, ಈಗ ಒದಗಿ ಬಂದಿರುವ ಪರಿಸ್ಥಿತಿಯಲ್ಲಿ, ನಮ್ಮ ಸೇನೆಗಳನ್ನು ಇಲ್ಲಿಂದ ಕದಲಿಸುವುದು ಅಸಾಧ್ಯವಾಗಿದೆ. ಹೊಯ್ಸಳ ಸೇನಾ ಬಲ ರಾಜರಾಜಪುರದತ್ತ ದಾಳಿ ಮಾಡಿರುವಂತೆಯೇ, ಅವರ ಸೇನೆಯ ಮತ್ತೊಂದು ಸೀಳು, ಪುಣಿಸಮಯ್ಯ ಎಂಬಾತನ ನಾಯಕತ್ವದಲ್ಲಿ ನಮ್ಮ ಸೀಮೆಯ ಮೇಲೂ ದಾಳಿ ಮಾಡಿದೆ. ಅಷ್ಟೇ ಅಲ್ಲ–ನಮಗೆ ಸೆರೆಸಿಕ್ಕ ಹೊಯ್ಸಳ ಬೇಹುಗಾರನೊಬ್ಬನಿಂದ, ರಾಜಸೋದರ ಉದಯಾದಿತ್ಯನ ದಂಡನಾಯಕತ್ವದಲ್ಲಿ ಮತ್ತೊಂದು ಸೀಳು ಸೇನೆ, ನಮ್ಮ ಪ್ರಭುಗಳಿಗೆ ಸೇರಿದ ನಿಗರಿಲಿ ಚೋಳಮಂಡಲದ ರಾಜಧಾನಿಯಾದ ಕೊವಳಾಲಪುರದ ಕಡೆಗೆ ನುಗ್ಗಿದೆ ಎಂದೂ ತಿಳಿದುಬಂದಿದೆ. ಇದೆಲ್ಲವನ್ನೂ ನೋಡಿದಲ್ಲಿ, ನಾವು ಹೊಯ್ಸಳರ ವಿಷಯದಲ್ಲಿ ತಾತ್ಸಾರದಿಂದ ಇದ್ದುದು ತಪ್ಪಾಯಿತೆಂದೇ ತೋರುತ್ತದೆ.

‘ ನಿಮ್ಮ ನಾಡಿನಲ್ಲಿ ನುಗ್ಗಿದ ಹೊಯ್ಸಳ ಸೇನೆಯ ಪರಿಣಾಮ ಈವರೆವಿಗೆ ಹೇಗಾಗಿದೆ ಎಂಬುದು ನಮಗೆ ತಿಳಿಯದು. ಆದರೆ ನಮ್ಮ ಸೀಮೆಯ ಪರಿಸ್ಥಿತಿ ಮಾತ್ರ, ವಾಸ್ತವ ಪರಿಸ್ಥಿತಿಯನ್ನು ಹೇಳಬೇಕೆಂದರೆ ಚಿಂತಾಜನಕವಾಗಿದೆ. ಅದಕ್ಕೆ ಕಾರಣ ಪುಣಿಸಮಯ್ಯನ ಸೇನಾಬಲ, ನಮ್ಮ ಸೇನಾಬಲಕ್ಕಿಂತಲೂ ಮಿಗಿಲಾಗಿರುವುದಲ್ಲ; ಅವರು ಜನತೆಯ ವಿಷಯದಲ್ಲಿ ಅನುಸರಿಸುತ್ತಿರುವ ನೀತಿ; ತಮ್ಮ ಸೇನೆಯಿಂದ, ಯುದ್ಧೋದ್ಯೋಗಿಗಳಲ್ಲದೆ, ಇತರರು ಯಾರಿಗೂ ತೊಂದರೆಯಾಗದಂತೆ ಪುಣಿಸಮಯ್ಯ ಎಚ್ಚರ ವಹಿಸಿರುವುದು; ಗ್ರಾಮದ ಅಬಲೆಯರು, ಪಶುಗಳ ವಿಷಯದಲ್ಲಿ ಗೌರವ ತೋರುತ್ತಿರುವುದು; ತಮಗೆ ವಶವಾದ ನಮ್ಮ ಬೊಕ್ಕಸದ ಹಣವೆಲ್ಲವನ್ನೂ, ಹಿಂದೆ

ನಮ್ಮ ಸೈನಿಕರಿಂದ, ಅಧಿಕಾರಿಗಳಿಂದ ನಷ್ಟಗೊಳಿಸಲ್ಪಟ್ಟ ದೇವಾಲಯ, ಬಸದಿಗಳ ಜೀರ್ಣೋದ್ಧಾರ ಕಾರ್ಯಕ್ಕೆ ವೆಚ್ಚಮಾಡುತ್ತಿರುವುದು—ಇಲ್ಲಿಯ ಜನತೆಯಲ್ಲಿ, ಹೊಯ್ಸಳ ಸೇನೆಯೆಂದರೆ ಧರ್ಮೋದ್ಧಾರಕ್ಕಾಗಿ ಬಂದ ದೇವತೆಗಳ ಪರಿವಾರ ಎಂಬ ಭಾವನೆಯನ್ನು ಮೂಡಿಸಿ, ನಮ್ಮ ಹಳ್ಳಿಗಳು ಯುದ್ಧಪ್ರಯತ್ನವನ್ನೇ ಮಾಡದೆ, ಪುಣಿಸಮಯ್ಯನ ಸೇನೆಗೆ ವಶವಾಗುತ್ತಿವೆ. ಹಿಂದೆ ಹೀಗಾದುದನ್ನು ನಾವೆಂದೂ ನೋಡಿರಲಿಲ್ಲ. ಎಂತಲೇ ಈ ವಿಚಿತ್ರ ಪರಿಸ್ಥಿತಿಯನ್ನು ಹೇಗೆ ಎದುರಿಸಬೇಕೆಂಬುದೇ ನಮಗೆ ತೋಚದಂತಾಗಿದೆ. ಆದರೂ ನಾವು, ಈ ಪುಣಿಸಮಯ್ಯನ ಪುಂಡಾಟವನ್ನು ಅಡಗಿಸಲು ಸರ್ವಪ್ರಯತ್ನವನ್ನು ಮಾಡುತ್ತಿದ್ದೇವೆ.

'ನಮ್ಮ ಮೇಲೆ ಒದಗಿಬಂದಿರುವ ಈ ಗಂಡಾಂತರವನ್ನು ಪರಿಹರಿಸಿಕೊಳ್ಳುವವರೆಗೂ, ತಾವು ಹೇಗಾದರೂ ಶತ್ರುಗಳನ್ನು ತಡೆದಲ್ಲಿ, ನಾವು ಆದಷ್ಟು ಬೇಗ ನಮ್ಮ ಸೇನೆಯನ್ನು ನಿಮ್ಮ ನೆರವಿಗೆ ಕಳುಹಿಸುತ್ತೇವೆ.

'ಅಲ್ಲದೆ—ತಮ್ಮ ಸೀಮೆಯತ್ತ ನುಗ್ಗಿರುವ ಹೊಯ್ಸಳ ಸೇನೆಯೊಂದಿಗೆ ಹೊಯ್ಸಳ ಅರಸು, ವಿಷ್ಣುವರ್ಧನನೇ ಬಂದಿದ್ದಾನೆ ಎಂಬ ವಾರ್ತೆಯನ್ನೂ ನಾವು ಕೇಳಿದೇವೆ. ಒಂದು ವೇಳೆ, ತಮ್ಮ ಪರಾಕ್ರಮದಿಂದ, ದೊರೆಯೇ ಮುನ್ನಡೆಸುತ್ತಿರುವ ಆ ಸೇನೆಗೆ ಸೋಲಾದಲ್ಲಿ, ನಮ್ಮೆಲ್ಲರ ಕಷ್ಟಗಳೂ ಒಮ್ಮೆಲೇ ಪರಿಹಾರವಾದಂತಾಗುತ್ತದೆ. ತಾವು ಈ ವಿಷಯವನ್ನು ಮನಸ್ಸಿನಲ್ಲಿಟ್ಟುಕೊಂಡು ಅಗತ್ಯ ಪ್ರಯತ್ನ ಮಾಡಬೇಕಾಗಿ ಬೇಡುತ್ತೇವೆ.

'ತಮ್ಮ ಪ್ರಯತ್ನ ಯಶಸ್ವಿಯಾಗಲಿ ಎಂದು ನಾವು ಸದಾ ತಿಲ್ಲೈ-ಚಿದಂಬರ ನಿವಾಸಿಯಾದ ಶ್ರೀ ತಾಂಡವೇಶ್ವರನನ್ನು ಪ್ರಾರ್ಥಿಸುತ್ತಿರುತ್ತೇವೆ.'

—ಎಂದು ಬರೆದಿದ್ದ.

ಆ ಪತ್ರವನ್ನು ಓದಿದ ಬಳಿಕ, ಅದಿಯಮನ ಹೃದಯದಲ್ಲಿದ್ದ ಕ್ಷೀಣ ಆಶಾಕಿರಣವೂ ಇಂಗಿ ಹೋಗಿ, ಅವನ ಹೃದಯವನ್ನು ವ್ಯಾಪಿಸಿದ್ದ ನಿರಾಶೆಯ ಕತ್ತಲು ಮತ್ತಷ್ಟು ದಟ್ಟವಾಯಿತು.

ಸುತ್ತಮುತ್ತಲಿದ್ದ ಚೋಳ ಸಾಮಂತರ ಸೇನೆಯ ಬೇಡಿ ಬಿಗಿದು, ಆ ಪಂಜರದಲ್ಲಿ ಹೊಯ್ಸಳರ ಹೆಬ್ಬಯಕೆಯ ಸಮಾಧಿಮಾಡಬೇಕೆಂದು ಅದಿಯಮ ಲೆಕ್ಕ ಹಾಕಿದ್ದ.

ಅವನ ಆ ಪ್ರಯತ್ನ ವಿಫಲವಾದುದೇ ಅಲ್ಲದೆ, ಈಗ ಅವನೇ ಪಂಜರ ಬದ್ಧ ಪಶುವಿನಂತಾಗಿದ್ದ. ಅವನು ನೆರವು ನಿರೀಕ್ಷಿಸಿದೆಡೆಯಿಂದಲೆಲ್ಲಾ ನಿರಾಶೆಯೇ ಕವಿದು ಬಂದಿತ್ತು.

ಈಗೇನು ಮಾಡುವುದು ?

ದಿನದಿನವೂ ರಾಜಧಾನಿಯನ್ನು ಸಮೀಪಿಸುತ್ತಿರುವ ಹೊಯ್ಸಳ ಸೇನಾ ವಾಹಿನಿಯನ್ನು ಹೇಗೆ ತಡೆಯುವುದು ?

ಈ ವಿಪತ್ಸಮಯದಲ್ಲಿ ತನಗೆ ಯಾರ ನೆರವು, ಯಾರ ನೆಚ್ಚಿಗೆ ?

ಎಷ್ಟೆಷ್ಟು ಚಿಂತಿಸಿದರೂ ಬಗೆಹರಿಯದ ಈ ಸಮಸ್ಯೆಯ ಬಗ್ಗೆ ಪರ್ಯಾಲೋಚನೆ ನಡೆಸಲೆಂದು ಅದಿಯಮ ತನ್ನ ಆಪ್ತರ ಸಭೆಯನ್ನು ಕರೆದ.

# ೧೩

## ಪಥ್ಯವಾಗದ ಸಲಹೆ

ತನ್ನ ಸಲಹೆಗಾರರ ಸಭೆಯನ್ನು ನೆರೆಯಿಸಿ, ಅದಿಯಮ ಅವರೆಲ್ಲರ ಮುಂದೆಯೂ, ಅಂದಿನ ವಿಷಮ ಪ್ರಸಂಗವನ್ನು ವಿವರಿಸಿ, 'ಇಂಥ ಸಮಯದಲ್ಲಿ ಮುಂದೇನು ಮಾಡಬೇಕು' ಎಂದು ಕೇಳಿದಾಗ, ತನ್ನ ಉದ್ದೇಶ ಸಾಧನೆಗಾಗಿ, ಅಂಥ ಹೊತ್ತನ್ನೇ ಕಾಯುತ್ತಿದ್ದ ದಾಮೋದರ, ಉಳಿದವರು ಇನ್ನೂ 'ಏನು ಹೇಳುವುದು' ಎಂದು ಚಿಂತಿಸುತ್ತಿರುವಾಗಲೇ, ತನ್ನ ಆಸನದಿಂದ ತಟಕ್ಕನೆ ಸಿಡಿದೆದ್ದು ಹೇಳಿದ :

'ಈ ಹೊತ್ತಿನಲ್ಲಿ ನನಗೆ ಒಂದೇ ಒಂದು ಪರಿಹಾರೋಪಾಯ ತೋರುತ್ತದೆ.'

ಅದಿಯಮನ ಬಾಯಿಂದ ಪ್ರಶ್ನೆ ಬರುತ್ತಿದ್ದ ಹಾಗೇ ದಾಮೋದರ ಉತ್ತರ ಹೇಳಲು ಎದ್ದು ನಿಂತುದನ್ನು ಕಂಡು ಉಳಿದ ಸಚಿವರಿಗೆ ಆಶ್ಚರ್ಯವಾಗಿ, ಎಲ್ಲರೂ ದಾಮೋದರನತ್ತ ನೋಡಿದರು.

'ಏನು ಹೇಳು ?'

—ಅದಿಯಮನೂ ಚಕಿತನಾಗಿ ಕೇಳಿದ.

'ನಾನು ಹೇಳಲಿರುವ ಪರಿಹಾರೋಪಾಯ, ಕೆಲವರಿಗೆ ಅಪ್ರಿಯವಾಗಿ ತೋರಬಹುದು ; ಮತ್ತೆ ಕೆಲವರಿಗೆ ಸೂಕ್ತವಲ್ಲವೆಂದೂ ತೋರಬಹುದು. ಆದರೆ—ನನಗೆ ತಿಳಿದಮಟ್ಟಿಗೆ ಹೇಳುವುದಾದರೆ, ಇಂದು ನಮಗೆ ಉಳಿದಿರುವುದು ಒಂದೇ ದಾರಿ—'.

—ಎಂದು ಹೇಳಿ, ತನ್ನ ಮಾತನ್ನು ಅಲ್ಲಿಗೇ ನಿಲ್ಲಿಸಿ, ತನ್ನ ಮಾತು ಮುಗಿಯುವ ಮೊದಲೇ ಉಳಿದವರು ಯಾರಾದರೂ, ಮತ್ತೆ ಏನಾದರೂ ಹೇಳುತ್ತಾರೊ ಏನೋ ಎಂಬಂತೆ, ಒಮ್ಮೆ ಎಲ್ಲರ ಮುಖವನ್ನೂ ದಿಟ್ಟಿಸಿ ನೋಡಿದ.

ಎಲ್ಲರೂ ಆತನ ಮುಖವನ್ನು ನೋಡುತ್ತಿದ್ದರೇ ಹೊರತು, ನಡುವೆ ಯಾರೂ ಮಾತನಾಡಲು ಪ್ರಯತ್ನಿಸಲಿಲ್ಲ.

ಅದನ್ನು ಕಂಡು ತೃಪ್ತಿಯಾದವನಂತೆ, ದಾಮೋದರ ತನ್ನ ಮಾತನ್ನು ಮುಂದುವರಿಸಿದ—

'ಇಂದು ನಮ್ಮೆಲ್ಲ ಯೋಜನೆಗಳೂ, ಹೊಯ್ಸಳ ಸೇನೆಯನ್ನು ಹೊಸಗಿಹಾಕಲು ಮಾಡಿದ ಪ್ರಯತ್ನಗಳೂ ವಿಫಲವಾಗಿವೆ, ದಿಟ. ಆದರೆ ಅದಕ್ಕೆ ಕಾರಣ—ನಮ್ಮ ಸೇನೆಗಳ ದೌರ್ಬಲ್ಯವಲ್ಲ. ಆ ಮಾತನ್ನು ಎಲ್ಲರೂ ಒಪ್ಪುತ್ತಾರೆಂದೇ ನಾನು ನಂಬಿದೇನೆ. ನಮ್ಮ ಪಟುಭಟರ ಉಕ್ಕಿನ ತೋಳುಗಳು, ಇಂದು ಹೊಯ್ಸಳರ ಹುಲುದಾಳಿಯ ಇದಿರು ಬಾಗಬೇಕಾಗಿ ಬಂದಿದ್ದರೆ ಅದಕ್ಕೆ ಕಾರಣ—ಕನ್ನಡಿಗರ ದ್ರೋಹ, ಕೃತಘ್ನತೆ; ಮಲಗಿದವನ ಕತ್ತು ಕತ್ತರಿಸುವ ಮೋಸಗಾರಿಕೆ. ಕನ್ನಡಿಗರ ಈ ವಿಶ್ವಾಸಘಾತಕತನ ಒಂದಿಲ್ಲವಾಗಿದ್ದಿದ್ದರೆ ಇಂದು ನಮ್ಮ ಪರಿಸ್ಥಿತಿ ಈ ಮಟ್ಟಕ್ಕೆ ಮುಟ್ಟದೆ, ಮಂಡಲಾಧೀಶ್ವರರ ಸಮರತಂತ್ರ ಸಫಲವಾಗಿ, ಹೊಯ್ಸಳ ಬಲ, ಎಂದೆಂದೂ ಮರೆಯಲಾಗದಂಥ ಪೆಟ್ಟು ತಿಂದು, ಈ ವೇಳೆಗೆ ತನ್ನ ರಾಜಧಾನಿಯ ದಾರಿ ಹಿಡಿಯುತ್ತಿತ್ತು. ಈ ಮಾತನ್ನು ಯಾರೂ ಅಲ್ಲಗಳೆಯುವುದಿಲ್ಲವೆಂದೇ ನಾನು ನಂಬಿದೇನೆ.'

—ಎಂದು, ಅಷ್ಟು ಹೇಳಿ ದಾಮೋದರ ಮತ್ತೊಮ್ಮೆ ತನ್ನ ಮಾತು ನಿಲ್ಲಿಸಿದ.

ಆಗಲೂ ಯಾರೂ ಆತನ ಮಾತುಗಳಿಗೆ ಇದಿರು ಹೇಳಲಿಲ್ಲ. ಹೇಗಿದ್ದವರು ಹಾಗೆ ಕುಳಿತಿದ್ದರು.

ದಾಮೋದರ, ಸಭೆಯಲ್ಲಿ ಕವಿದ ಮೌನದಲ್ಲಿ ತನ್ನ ಮಾತನ್ನು ಮುಂದುವರಿಸಿದ—

'ತಮ್ಮೆಲ್ಲರ ಮೌನ, ನನ್ನ ಇಂದಿನ ಪರಿಸ್ಥಿತಿಯ ವಿಶ್ಲೇಷಣೆ ಸರಿ ಎಂಬುದಕ್ಕೆ ಒಪ್ಪಿಗೆ ಎಂದೇ ನಾನು ತಿಳಿದಿದೇನೆ. ಅದಕ್ಕೆ ತಮ್ಮೆಲ್ಲರ ಒಪ್ಪಿಗೆಯಿದ್ದರೆ, ವ್ಯಾಧಿ ಕಾರಣ ತಿಳಿದಲ್ಲಿ ಚಿಕಿತ್ಸೋಪಾಯವೂ ತಾನೇ ಗೊತ್ತಾಗುತ್ತದೆ. ಕನ್ನಡಿಗರಿಂದ ನಮಗಿಷ್ಟು ವಿಪತ್ತು ಬಂದೊದಗಿದ್ದರೆ, ಅದಕ್ಕೆ ಪರಿಹಾರೋಪಾಯ—ಅಧಿಕಾರಸ್ಥಾನದಲ್ಲಿರುವ ಕನ್ನಡ ಜನರೆಲ್ಲ

ರನ್ನೂ ಕಿತ್ತೊಗೆದು, ಅವರ ಸ್ಥಾನಗಳಲ್ಲಿ ನಮ್ಮ ಜನರನ್ನು ನೇಮಿಸಬೇಕು; ಕನ್ನಡಿಗರಿಂದ ನಮಗಾದ ನಷ್ಟವನ್ನು ಕನ್ನಡಿಗರ ಆಸ್ತಿಗಳಿಂದ ತುಂಬಿಕೊಳ್ಳಬೇಕು. ಒಬ್ಬನ ದ್ರೋಹಕ್ಕೆ ಇಬ್ಬರ ತಲೆ ಕತ್ತರಿಸಿ, ಬುದ್ಧಿ ಕಲಿಸಬೇಕು. ನಮ್ಮ ಸೀಮೆಯಲ್ಲಿರುವ ಈ ಜನರ ಮುಖ್ಯಸ್ಥರನ್ನೆಲ್ಲಾ ಸೆರೆಗಟ್ಟಿ ಕನ್ನಡಿಗರು ತಮ್ಮ ವಿಶ್ವಾಸಘಾತಕತನವನ್ನು ಹೀಗೆ ಮುಂದುವರಿಸಿದರೆ, ಆ ಮುಖ್ಯಸ್ಥರ ಆಸ್ತಿಗಳನ್ನೆಲ್ಲಾ ಮುಟ್ಟುಗೋಲುಹಾಕಿಕೊಳ್ಳುವುದೇ ಅಲ್ಲದೇ, ಅವರನ್ನೆಲ್ಲಾ ಸಾಮೂಹಿಕವಾಗಿ ಶೂಲಕ್ಕೇರಿಸಲಾಗುವುದೆಂದು ಡಂಗುರ ಸಾರಿಸಬೇಕು. ಇಂಥ ಕಾರ್ಯಕ್ರಮದಿಂದ, ಕನ್ನಡಿಗರ ದ್ರೋಹಬುದ್ಧಿಯನ್ನು ಮಟ್ಟಹಾಕಬಹುದೇ ಅಲ್ಲದೆ, ಮುಂದೆ ಅವರು ಎಂದೂ ಈ ರೀತಿ ಮಾಡದಂತೆ ಬುದ್ಧಿ ಕಲಿಸಿದಂತಾಗುತ್ತದೆ. ಈಗಲೂ ಹಾಗಾದರೆ ನಮಗಿರುವ ನಮ್ಮ ಸೈನ್ಯ ಬಲದಿಂದಲೇ ಹೊಯ್ಸಳರ ದಾಳಿಯನ್ನು ಹಿಮ್ಮೆಟ್ಟಿಸಬಹುದು. ನನಗೆ ತಿಳಿಯುವುದು ಇದೊಂದೇ ಪರಿಹಾರೋಪಾಯ.'

ದಾಮೋದರ ಸೂಚಿಸಿದ ಈ ಉಗ್ರ ಪರಿಹಾರೋಪಾಯವನ್ನು ಕೇಳಿ, ಸಭೆಯಲ್ಲಿ ಇದ್ದದ್ದೂ ಸದ್ದಡಗಿತು.

ದಾಮೋದರನ ಮಾತು ಮುಗಿಯುವವರೆಗೂ ಏನೊಂದೂ ಮಾತಾಡದೆ ಕುಳಿತಿದ್ದ ಆದಿಯಮನಿಗೆ, ತಾನೂ ಸಿಟ್ಟಿನಲ್ಲಿ, ಭ್ರಾಂತಿಯಲ್ಲಿ ಕಣ್ಣು ಕಳೆದು ಕೊಂಡಿದ್ದುದರಿಂದ, ದಾಮೋದರನ ಮಾತು ಸರಿಯೆಂದೇ ತೋರಿತು.

'ಆ ಮಾತು, ಪರಿಹಾರೋಪಾಯ ಸರಿಯೆಂದೇ ನಮಗೆ ತೋರುತ್ತದೆ. ಅಷ್ಟಾದರೆ ಇಂದು ಬಹು ಸಡಿಲವಾಗಿರುವ ಪರಿಸ್ಥಿತಿ ಒಂದು ಬಗೆಗೆ ಬರುತ್ತದೆ.'

—ಎಂದು ಹೇಳಿದ.

ದಾಮೋದರನ ಪರಿಹಾರೋಪಾಯಕ್ಕೆ ಮಂಡಲಾಧೀಶ್ವರನ ಸಮ್ಮತಿಯ ಮುದ್ರೆ ಬಿದ್ದುದನ್ನು ಕಂಡ ಬಳಿಕ ಉಳಿದವರಿಗೆ ಬೇರೇನೂ ಹೇಳಲು ತೋಚದಂತಾಯಿತು.

ಆದಿಯಮನಂತೆಯೇ ದಾಮೋದರನ ಮಾತು ಸಭೆಯಲ್ಲಿ ನೆರೆದ ಮತ್ತೆ ಕೆಲವರಿಗೆ ಒಪ್ಪಿಗೆಯಾದರೂ, ಅದನ್ನು ಒಪ್ಪದವರೂ ಕೆಲವರು ಇರದೇ ಹೋಗಲಿಲ್ಲ. ಆದರೆ ದಾಮೋದರನ ಮಾತಿಗೆ ಆದಿಯಮನೂ ಒಪ್ಪಿದ

ಬಳಿಕ ಅಂದಿನ ವಿಷಮ ಪರಿಸ್ಥಿತಿಯಲ್ಲಿ ತಾವು ಆತನ ಮಾತಿಗೆ ಇದಿರಾಡಿದರೆ, ತಮ್ಮ ಮಾತು ಅಪಾರ್ಥಕ್ಕೆ ಗುರಿಯಾಗಿ, ಎಲ್ಲಿ ತಮ್ಮ ತಲೆಗೇ ಸಂಚಕಾರ ಬಂದೀತೋ ಎಂಬ ಭಯ, ಅವರು ಮನದ ಮಾತನ್ನು ಬಾಯಿಬಿಟ್ಟು ಆಡಲು ಅಡ್ಡಿಯಾಯಿತು. ಎಂತಲೇ ಎಲ್ಲರೂ ಸುಮ್ಮನೆ ತಲೆತಗ್ಗಿಸಿ ಕುಳಿತಿದ್ದರು.

ಅದನ್ನು ಕಂಡು ಆದಿಯಮ—

'ಸಾಮನ್ತ ದಾಮೋದರರು ಸೂಚಿಸಿರುವ ಸಲಹೆ ತಮಗೆಲ್ಲರಿಗೂ ಸಮ್ಮತವೆಂದೇ ನಾವು ತಿಳಿಯಬಹುದೇ ?'

—ಎಂದು ಕೇಳಿದ.

'ಪ್ರಭುಗಳು ಕ್ಷಮಿಸಬೇಕು. ಈಗಲೂ ನಾವು ನಮ್ಮ ಅಭಿಪ್ರಾಯವನ್ನು ಸೂಚಿಸುವ ಅವಕಾಶವಿದ್ದರೆ, ನಾನು ಮನವಿ ಮಾಡಿಕೊಳ್ಳಬೇಕಾದ ಮಾತೊಂದಿದೆ.'

ಸಭೆಯಲ್ಲಿ ನೆರೆದವರೆಲ್ಲರ ಕಣ್ಣುಗಳೂ ಆ ಮಾತು ಕೇಳಿಬಂದ ಕಡೆಗೆ ತಿರುಗಿದುವು.

ಉಳಿದವರೆಲ್ಲರೂ ಮೌನವೇ ಕ್ಷೇಮವೆಂದು ಅರಿತು ಸುಮ್ಮನಿದ್ದ ವೇಳೆಯಲ್ಲೂ, ಆ ಮಾತನ್ನಾಡಿದಾತ, ಜನನಾಥಪುರದ ಕೋಟೆಯ ಮುಖ್ಯಾಧಿಕಾರಿ ರಾಜಪೆರುಮಾಳ್.

ಆತನ ಮಾತನ್ನು ಕೇಳಿ ಆದಿಯಮ—

'ಅಭಿಪ್ರಾಯ ಸೂಚಿಸಲೆಂದೇ ತಮ್ಮೆಲ್ಲರನ್ನೂ ಕರೆಸಿರುವುದು. ಗೊಂಬೆಗಳಂತೆ ಸುಮ್ಮನೆ ಕುಳಿತು ಕೇಳುವುದಕ್ಕಲ್ಲ. ಏನಿದೆಯೋ ಹೇಳಿ ?'

—ಎಂದು ಒರಟಾಗಿ ಹೇಳಿದ.

'ನಮ್ಮ ಅಭಿಪ್ರಾಯ ತಿಳಿಯಲೆಂದೇ ಪ್ರಭುಗಳು ನಮ್ಮನ್ನು ಕರೆಸಿರುವುದು ಎಂಬುದನ್ನು ನಾನೂ ಬಲ್ಲೆ ಪ್ರಭು. ಆದರೂ ಸಭೆಯಲ್ಲಿ ಒಬ್ಬರು ತಮ್ಮ ಅಭಿಪ್ರಾಯ ಸೂಚಿಸಿ, ಆ ಅಭಿಪ್ರಾಯಕ್ಕೆ ಪ್ರಭುಗಳ ಅಂಗೀಕಾರ ಮುದ್ರೆ ಬಿದ್ದ ಬಳಿಕಲೂ, ನಮಗೆ ನಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲು ಅವಕಾಶ ಉಂಟೇ ಎಂಬ ಸಂದೇಹವಾಯಿತು. ಆದುದರಿಂದ ಆ ಪ್ರಶ್ನೆ ಕೇಳಬೇಕಾಯಿತು.'

—ರಾಜಪೆರುಮಾಳ್ ವಿನಯದಿಂದಲೇ, ಸಭೆಗೆ ಕರೆದ ಎಲ್ಲರ ಅಭಿ

ಪ್ರಾಯವನ್ನು ತಿಳಿಯುವ ಮೊದಲು, ಅದಿಯಮ ತನ್ನ ಚಿತ್ತ ಹೇಗೆಂಬುದನ್ನು ಸೂಚಿಸಿದುದು ಅಸಂಗತವಾಯಿತು ಎಂದು ಸೂಚಿಸಿ ಹೇಳಿದ.

ಅದಿಯಮನಿಗೂ ಆತನ ಮಾತಿನ ಭಾವ ಅರಿವಾಗಿ ಮೊಗ ಕೆಂಪೇರಿತು. ದಾಮೋದರನಿಗಂತೂ ಮುಳ್ಳಿನ ಮೇಲೆ ಕುಳಿತಂತಾಗಿ, ತಟಕ್ಕನೆ ಎದ್ದು ಆ ಮಾತಿಗೆ ಉತ್ತರ ಕೊಡಬೇಕು ಎನಿಸಿತು. ಆದರೆ ಆ ವೇಳೆಗೆ ಅದಿಯಮ—

'ಇದು ಔಪಚಾರಿಕ ಸಭೆಯಲ್ಲ. ಒದಗಿಬಂದಿರುವ ಗಂಡಾಂತರವನ್ನು ಹೇಗೆ ನಿವಾರಿಸುವುದು ಎಂದು ಪರ್ಯಾಲೋಚಿಸುವ ಸಲುವಾಗಿ ಸೇರಿರುವ ಸಭೆಯಾಗಿರುವುದರಿಂದ, ಈ ಸಭೆಯಲ್ಲಿ ಯಾರೂ, ಯಾರ ಮುಖ ದಾಕ್ಷಿಣ್ಯಕ್ಕೂ ಕಟ್ಟುಬಿದ್ದು ಯಾರ ಅಭಿಪ್ರಾಯವನ್ನೂ ಒಪ್ಪಬೇಕಾದ ಅಗತ್ಯ ವಿಲ್ಲ. ಪ್ರತಿಯೊಬ್ಬರೂ ಬಿಚ್ಚುಮನಸ್ಸಿನಿಂದ ತಮ್ಮ ಅಭಿಪ್ರಾಯವನ್ನು ಸೂಚಿಸ ಬಹುದು. ಆ ಅಧಿಕಾರ ತಮಗೂ ಇದೆ. ನಿಮ್ಮ ಮನಸ್ಸಿನಲ್ಲಿರುವುದನ್ನು ಹೇಳಿ.'

—ಎಂದ ಅದಿಯಮ.

ಆದರೆ, ಆ ಮಾತಿನಲ್ಲಿಯೂ ಅಭಿಪ್ರಾಯ ತಿಳಿಯುವ ಸೌಜನ್ಯವಿರದೆ, 'ನೀನು ತಪ್ಪುಮಾಡುತ್ತಿದ್ದೀಯ' ಎಂದು ಸೂಚಿಸುವ ಚುರುಕಿತ್ತು. ಆತ ಆ ರೀತಿ ಮಾತನಾಡಿದ ಬಳಿಕ ರಾಜಪೆರುಮಾಳ್ 'ನಾನು ಹೇಳುವುದು ಏನೂ ಇಲ್ಲ' ಎಂದು ಸುಮ್ಮನೆ ಕುಳಿತುಕೊಳ್ಳುತ್ತಾನೆಂದೇ ಉಳಿದವರು ನಿರೀಕ್ಷಿಸಿದ್ದರು. ಆದರೆ ರಾಜಪೆರುಮಾಳ್ ಹಾಗೆ ಮಾಡಲಿಲ್ಲ. ಅವರ ನಿರೀಕ್ಷೆಗೆ ವ್ಯತಿರಿಕ್ತವಾಗಿ ತನ್ನ ಮಾತನ್ನು ಮುಂದುವರಿಸಿ ಹೇಳಿದ:

'ಈ ಸಂದರ್ಭದಲ್ಲಿ ಪ್ರಭುಗಳ ಚಿತ್ತ ಹೇಗೆಂಬುದನ್ನು ಅರಿತು ನನಗೆ ಸಂತೋಷವಾಯಿತು. ಆ ತೃಪ್ತಿಯಲ್ಲೇ, ನನಗೆ ತಿಳಿದ ಎರಡು ಮಾತನ್ನು ಹೇಳಬಯಸುತ್ತೇನೆ.

'ನನ್ನ ಈ ದೇಹ ಚೋಳ ಚಕ್ರವರ್ತಿಗಳ ಉಪ್ಪನ್ನು ಉಂಡು ಬೆಳೆದಿದೆ. ಎಂತಲೇ, ಆ ಉಪ್ಪಿನ ಋಣ ನನ್ನ ಮೈಯಲ್ಲಿ ರಕ್ತವಾಗಿ ಹರಿಯುತ್ತಿರುವುದ ರಿಂದಲೇ, ನನ್ನ ದೇಹವನ್ನು ಪೋಷಿಸಿ, ಬೆಳೆಸಿದ ಸಾಮ್ರಾಜ್ಯದ ಹಿತದೃಷ್ಟಿ ಯಿಂದ ನನಗೆ ಸತ್ಯವೆಂದು ತೋರಿದ ಮಾತನ್ನು ಹೇಳುವುದೂ ಅನಿವಾರ್ಯ ವಾಗಿದೆ.

' ನನ್ನ ಇಂದಿನ ಪದವಿ, ನನ್ನ ಈ ದೇಹ—ಎರಡೂ ಅಶಾಶ್ವತ. ಮಂಡಲಾಧೀಶ್ವರರ ಪದವಿಯೂ ಧೃವಪಟ್ಟವಲ್ಲ. ಇದೆಲ್ಲಕ್ಕಿಂತಲೂ ಹೆಚ್ಚು ಶಾಶ್ವತವಾದದ್ದು, ಕೋಟ್ಯಾಂತರ ಜನರ ತ್ಯಾಗ, ಬಲಿದಾನ, ರಕ್ತತರ್ಪಣಗಳಿಂದ ನಿರ್ಮಿತವಾದ ಚೋಳ ಸಾಮ್ರಾಜ್ಯ. ಆದುದರಿಂದ ಈ ಸಾಮ್ರಾಜ್ಯದ ಹಿತದ ಬಗ್ಗೆ ಚಿಂತಿಸುವಾಗ, ನಾವು, ನಮ್ಮ ಅಶಾಶ್ವತ ದೇಹ, ಪದವಿ-ಪ್ರತಿಷ್ಠೆಗಳ ವ್ಯಾಮೋಹವನ್ನು ಮರೆತು ಚಿಂತಿಸುವುದು, ಆಲೋಚಿಸುವುದು ಯುಕ್ತವಾದದ್ದು. ಹಾಗಲ್ಲದೆ ಸಾಮ್ರಾಜ್ಯದ ಹಿತಕ್ಕೆ ಧಕ್ಕೆ ಬಂದ ಸಮಯದಲ್ಲಿ, ವೈಯಕ್ತಿಕ ಕ್ರೋಧ, ಲೋಭಗಳ ಚಿಂತೆಮಾಡುವುದು ರಾಜದ್ರೋಹವಷ್ಟೇ ಅಲ್ಲ ದೈವದ್ರೋಹವೂ ಅಹುದು. ಆದುದರಿಂದ ಕೇವಲ ಸಾಮ್ರಾಜ್ಯ ಹಿತದ ದೃಷ್ಟಿಯಿಂದಲೇ ನಾನು ಆಡುವ ಮಾತು, ಇಲ್ಲಿ ನೆರೆದ ಕೆಲವರಿಗೆ ತೃಪ್ತಿಯಾಗದಿರಬಹುದು; ಪ್ರಭುಗಳಿಗೂ ಅಸಂತುಷ್ಟಿಯನ್ನುಂಟುಮಾಡಬಹುದು. ಹಾಗಾದಲ್ಲಿ-ಪ್ರಭುಗಳು ನನ್ನ ಸಾಮ್ರಾಜ್ಯ ನಿಷ್ಠೆಯನ್ನು ಮಾತ್ರ ಗಮನಿಸಿ, ವೈಯಕ್ತಿಕ ಪರಿಣಾಮವನ್ನು ಮರೆತುಬಿಡಬೇಕು ಎಂದು ಪ್ರಾರ್ಥಿಸುತ್ತೇನೆ. . . . . .'

' ಅದೆಲ್ಲವೂ ಹಾಗಿರಲಿ, ಮೊದಲೇ ನಾವು ಹೇಳಿದೇವೆ. ಇದು ಔಪಚಾರಿಕ ಕೂಟವೂ ಅಲ್ಲ. ಭಾಷಣಗೋಷ್ಠಿಯೂ ಅಲ್ಲ. ನಿಮ್ಮ ಅಭಿಪ್ರಾಯವೇನೋ ಅಷ್ಟು ತಿಳಿಸಿ.'

—ಎಂದು ರಾಜಪೆರುಮಾಳ್ ತನ್ನ ಮಾತು ಮುಗಿಸುವ ಮೊದಲೇ, ನಡುವೆ ಮಾತಾಡಿ, ಒರಟಾಗಿ ಹೇಳಿದ ಆದಿಯಮ.

ಆ ಮಾತನ್ನು ಕೇಳಿ ರಾಜಪೆರುಮಾಳ್‌ನ ಮುಖ ಒಮ್ಮೆ ಕೆಂಪೇರಿ, ಗಂಭೀರವಾಯಿತು.

' ಅಪ್ಪಣೆ. ಇಂದು ನಮ್ಮ ಬಲ ಹೊಯ್ಸಳ ಸೇನೆಯ ಇದಿರು ಸೋತು ಹಿಮ್ಮೆಟ್ಟುತ್ತಿರುವುದಕ್ಕೆ, ನಮ್ಮ ಪ್ರಜೆಗಳಾಗಿಯೂ ಕನ್ನಡಿಗರು ಶತ್ರುಗಳೊಂದಿಗೆ ಕೂಡಿಕೊಳ್ಳುತ್ತಿರುವುದೇ ಕಾರಣ ಎಂದು ಪ್ರಭುಗಳು ಅಪ್ಪಣೆ ಕೊಡಿಸೋಣವಾಯಿತು. ಅದು ಸತ್ಯ . . . . .'

' ಊರಿಗೆ ತಿಳಿದುದನ್ನು ಕಿವಿಯಲ್ಲಿ ಹೇಳುವುದಕ್ಕಲ್ಲವಲ್ಲ ನಿಮ್ಮನ್ನು ಕರೆಸಿರುವುದು . . . . . ನಿಮ್ಮ ಮಾತೇನು ಹೇಳಿ '

—ದಾಮೋದರ, ರಾಜಪೆರುಮಾಳ್‌ನ ಮಾತಿನ ನಡುವೆ, ವ್ಯಂಗ್ಯ,

ಕುತ್ಸಿತತನಗಳು ತುಂಬಿದ ಧ್ವನಿಯಲ್ಲಿ ಹೇಳಿದ.

'ಅರ್ಥವಾಯಿತು. ತಾವು ಸಾವಧಾನಚಿತ್ತರಾಗಿ ನಾವು ಹೇಳುವುದನ್ನು ಲಾಲಿಸಬೇಕು.'

—ಎಂದು ದಾಮೋದರನಿಗೆ ಹೇಳಿ, ಮತ್ತೆ ಅದಿಯಮನತ್ತ ತಿರುಗಿ ರಾಜಪೆರುಮಾಳ್ ತನ್ನ ಮಾತನ್ನು ಮುಂದುವರಿಸಿದ—

'ಅಷ್ಟುದೂರ ಪ್ರಭುಗಳ ತರ್ಕ ಸರಿಯಾಯಿತು. ಆದರ ಆಧಾರದ ಮೇಲೆ ಸಾಮನ್ತ ದಾಮೋದರರು ಕನ್ನಡಿಗರ ಮೇಲೆ ಸಾಕಷ್ಟು ವಿಷಕಾರಿ, ಅವರಿಗೆ ಏನು ಮಾಡಿ ಬುದ್ಧಿ ಕಲಿಸಬೇಕು ಎಂದೂ ಹೇಳಿದರು. ಆ ದೃಷ್ಟಿ ಮಾತ್ರ ಯುಕ್ತವಲ್ಲವೆಂದೇ ನನ್ನ ಸ್ಪಷ್ಟ ಅಭಿಪ್ರಾಯ. ಸಾಮನ್ತ ದಾಮೋದರರ ಸೂಚನೆಯನ್ನು ಪ್ರಭುಗಳು ಒಪ್ಪಿದಲ್ಲಿ, ಅದರಿಂದ ಸಾಮ್ರಾಜ್ಯದ ಹಿತರಕ್ಷಣೆಯಾಗುವುದಕ್ಕಿಂತಲೂ ಮಿಗಿಲಾಗಿ, ಸಾಮ್ರಾಜ್ಯಕ್ಕೆ ಒದಗಿರುವ ಅಪಾಯ ಪರಿಸ್ಥಿತಿ ಮತ್ತಷ್ಟು ವಿಷಮಿಸುವುದೆಂದೇ ನನಗೆ ತೋರುತ್ತದೆ.

'ಈ ವಿಷಮ ಸಂದರ್ಭದಲ್ಲಿ, ಪ್ರಭುಗಳು ತಮ್ಮ ವಿವೇಚನೆಯನ್ನು ಕ್ರೋಧಕ್ಕೆ ಊಳಿಗದಾಳಾಗಿ ಮಾಡದೆ, ಸಾವಧಾನವಾಗಿ ಆಲೋಚಿಸಬೇಕು. ಸಾಮ್ರಾಜ್ಯಗಳು ಉಳಿಯುವುದು, ಅಳಿಯುವುದು ಅಧಿಕಾರಿಗಳಿಂದಲೂ ಅಲ್ಲ, ಸೇನಾಬಲದಿಂದಲೂ ಅಲ್ಲ. ಪ್ರಜೆಗಳೇ ಸಾಮ್ರಾಜ್ಯದ ಅಸ್ತಿಭಾರ. ಅವರ ತೃಪ್ತಿ, ಅಭಿಮಾನ, ವಿಶ್ವಾಸ, ನಿಷ್ಠೆಗಳೇ ಸಾಮ್ರಾಜ್ಯವನ್ನು ರಕ್ಷಿಸುವ ವಜ್ರಭಿತ್ತಿ. ಪ್ರಜೆಗಳ ವಿಶ್ವಾಸವನ್ನು ಕಳೆದುಕೊಂಡ ಅರಸರಾರೂ ಹೆಸರು ಹೇಳಲು ಬದುಕಿಲ್ಲವೆಂಬುದಕ್ಕೆ ಇತಿಹಾಸವೇ ಸಾಕ್ಷಿಯಾಗಿದೆ. ಈ ಮಾತನ್ನು ಪ್ರಭುಗಳು ದುರ್ಲಕ್ಷಿಸಬಾರದು.

'ಇಂದು, ಈ ನಾಡಿನ ಜನ ನಮ್ಮ ಆಳ್ವಿಕೆಗೆ ವಿಮುಖರಾಗಿದ್ದಾರೆ. ಅವರಿಗೆ ನಮ್ಮ ಆಳ್ವಿಕೆ ಬೇಡವಾಗಿದೆ ಎಂಬುದು ಇಂದಿನ ಸಂದರ್ಭದಿಂದ ಸ್ಪಷ್ಟವಾಗಿದೆ. ಆದುದರಿಂದ ಈ ಹೊತ್ತಿನಲ್ಲಿ ನಾವು, ಅವರ ಮೇಲೆ ಕ್ರೋಧೋದ್ದೀಪಿತರಾಗದೆ, ಯಾವ ಕಾರಣಕ್ಕಾಗಿ ನಾವು ಅವರಿಗೆ ಬೇಡವಾದೆವು ಎಂಬುದರ ಬಗ್ಗೆ ಆತ್ಮಶೋಧ ಮಾಡಿಕೊಳ್ಳಬೇಕು.

'ಈಗ ಹೊಯ್ಸಳ ಸೇನೆ ನಮ್ಮ ಮೇಲೆ ದಂಡೆತ್ತಿ ಬಂದಾಗ ಇಲ್ಲಿಯ ಜನ, ಇಂದಿನವರೆಗೂ ನಮ್ಮ ಪ್ರಜೆಗಳಾಗಿದ್ದವರು, ಈಗ ಅವರನ್ನು ಸ್ವಾಗತಿಸು

ತ್ತಿದ್ದಾರೆ. ಈ ಸೀಮೆ ನಮ್ಮ ವಶವಾಗಿ, ನೂರು ವರ್ಷಕ್ಕೆ ಬಂತು. ಹಾಗಿದ್ದೂ ಇಷ್ಟು ವರ್ಷಗಳ ಬಳಿಕವೂ ಇಲ್ಲಿಯ ಜನಕ್ಕೆ, ನಾವು ತಮ್ಮವರು ಎಂಬ ಭಾವನೆ ಬಂದಿಲ್ಲ ಎಂದರೆ, ಅದಕ್ಕೆ ಅವರ ದುರ್ಬುದ್ಧಿ ಕಾರಣ ಎನ್ನುವುದಕ್ಕಿಂತ ಹೆಚ್ಚಾಗಿ, ಅವರ ವಿಶ್ವಾಸಗಳಿಸಲು ಏನುಬೇಕೋ ಅದನ್ನು ನಾವು ಮಾಡಿಲ್ಲ ವೆಂದೇ ಅರ್ಥ. ಅದು ನಿಜವೂ ಅಹುದು. ಇಂದು ಕನ್ನಡಿಗರು, ಚೋಳರು ಹೋದರೆ ಸಾಕು ಎಂದು ಬಯಸುತ್ತಿದ್ದರೆ, ಅದಕ್ಕೆ ಕಾರಣ ನಮ್ಮ ಅಧಿಕಾರಿಗಳೇ; ಅವರ ದೇಶ, ಅವರ ಭಾಷೆ, ಅವರ ದೇವರು, ಅವರ ಸಂಪ್ರ ದಾಯಗಳನ್ನು ಮೂಲೋತ್ಪಾಟನ ಮಾಡಿ, ಪ್ರಜೆಗಳ ನೆತ್ತಿಯಮೇಲೆ, ನಮ್ಮ ಭಾಷೆ, ತಮ್ಮ ಧರ್ಮ, ತಮ್ಮ ಶ್ರದ್ಧೆಗಳನ್ನು ಹೇರಿರುವುದು.

'ಮನುಷ್ಯ ಅನ್ನಗತಪ್ರಾಣ ಎನ್ನುವುದರಲ್ಲಿ ಸಂಶಯವಿಲ್ಲ ಪ್ರಭು. ಆದರೆ, ಎಲ್ಲ ಸಂದರ್ಭಗಳಲ್ಲಿಯೂ ಅದು ಸತ್ಯವಾಗುವುದಿಲ್ಲ. ತಾನು ತಾಯ ಮೊಲೆಹಾಲು ಕುಡಿದಾಗ ಆಡಿದ ಮಾತು, ಈ ಭೂಮಿಯಲ್ಲಿ ಕಣ್ಣು ಬಿಟ್ಟಾಗ ವಂದಿಸಿದ ದೇವರು, ಬುದ್ಧಿಯ ಬಳ್ಳಿ ಮೊದಲ ಕುಡಿಬಿಟ್ಟಾಗ ಅವಲಂಬಿಸಿದ ಧರ್ಮಗಳ ಮೇಲೆ ಧಾಳಿ ನಡೆದಾಗ, ಮನುಷ್ಯ ಹುಟ್ಟಾ ಬಂದ ಅನ್ನದ ಚಿಂತೆ, ಜೀವಭೀತಿಗಳನ್ನೂ ಮರೆತು, ಅದಕ್ಕೆ ಧಕ್ಕೆ ತರಲು ಯತ್ನಿಸಿದವರನ್ನು ಮೆಟ್ಟಲು ಯತ್ನಿಸುತ್ತಾನೆ. ಅದು ಆಶ್ಚರ್ಯವೂ ಅಲ್ಲ; ಅನಿರೀಕ್ಷಿತವೂ ಅಲ್ಲ.

'ಇಂದಾಗಿರುವುದು ಅಷ್ಟೆ.

'ಕನ್ನಡಿಗರ ಹೃದಯದಲ್ಲಿ ಈ ಒಂದು ಶತಮಾನದ ಕಾಲದಿಂದಲೂ, ಈ ಕಾರಣಗಳಿಗಾಗಿ, ನಮ್ಮ ವಿರುದ್ಧ ಹೊಗೆಯಾಡುತ್ತಿದ್ದ ಅಸಮಾಧಾನ, ಇಂದು ಹೊಯ್ಸಳ ಸೇನೆಯ ದಾಳಿಯ ಅವಕಾಶ ದೊರೆತ ಸಂದರ್ಭದಲ್ಲಿ, ಜ್ವಾಲಾಮುಖಿಯಾಗಿ ಉರಿಗೆದರಿದೆ.

'ಆದುದರಿಂದ, ಈ ಹೊತ್ತಿನಲ್ಲಿ, ನಾವು ನಮ್ಮ ಸಾಮ್ರಾಜ್ಯವನ್ನು ಉಳಿಸಿಕೊಳ್ಳಬೇಕು ಎಂದರೆ, ಅದಕ್ಕೆ ಒಂದೇ ದಾರಿ—ನಮ್ಮ ಬುದ್ಧಿ, ನಡತೆ ಗಳನ್ನು ತಿದ್ದಿಕೊಂಡು, ಅವರಿಗೆ ನಮ್ಮಲ್ಲಿ ಅವಿಶ್ವಾಸ ಮೂಡಲು ಏನೇನು ಕಾರಣಗಳಿವೆಯೋ ಅವನ್ನು ನಿವಾರಿಸಿ, ಪುನಃ ಅವರ ವಿಶ್ವಾಸವನ್ನು ಗಳಿಸು ವುದು. ಅದಲ್ಲದೆಹೋದಲ್ಲಿ, ಪ್ರಜೆಗಳಿಗೇ ಬೇಡವಾದ ಸಾಮ್ರಾಜ್ಯವನ್ನು, ಇಂದು ಶತಪ್ರಯತ್ನಪಟ್ಟು ಹೊಯ್ಸಳರ ದಾಳಿಯಿಂದ ರಕ್ಷಿಸಿಕೊಂಡರೂ,

ನಮ್ಮ ಸಾಮ್ರಾಜ್ಯ ಶಾಶ್ವತವಾಗಿ ಉಳಿಯುವುದಿಲ್ಲ.

'ಇದು ವಾಸ್ತವ ಪರಿಸ್ಥಿತಿ.

'ಈ ವಿಷಯವನ್ನು ಪ್ರಭುಗಳು, ಇಂದಲ್ಲ, ಬಹು ಹಿಂದೆಯೇ ಮನವರಿಕೆ ಮಾಡಿಕೊಳ್ಳಬೇಕಾಗಿತ್ತು. ಹಾಗಾಗಿದ್ದರೆ, ಇಂದು ಈ ಪರಿಸ್ಥಿತಿಯೇ ಉದ್ಭವಿಸುತ್ತಿರಲಿಲ್ಲವೆಂದೇ ನನಗೆ ತೋರುತ್ತದೆ. ಈಗ ತಡವಾಯಿತು. ಆದರೂ ಈ ಗಳಿಗೆಯಲ್ಲಾದರೂ, ಪ್ರಭುಗಳು ತಮ್ಮ ಚಿತ್ತದ ಸಮತೋಲವನ್ನು ಕೆಡಿಸಿಕೊಳ್ಳದೆ, ಇರುವಷ್ಟು ಅವಕಾಶದಲ್ಲಿಯೇ ಕನ್ನಡಿಗರ ವಿಶ್ವಾಸ ಗಳಿಸಿಕೊಳ್ಳುವ ಪ್ರಯತ್ನ ಮಾಡಬೇಕು.

'ಹಾಗಲ್ಲದೆ, ಪ್ರಜೆಗಳ ವಿಶ್ವಾಸವನ್ನು ದಬ್ಬಾಳಿಕೆಯಿಂದ ಗೆಲ್ಲುತ್ತೇನೆ ಎಂದು ಹೊರಟಲ್ಲಿ, ಸುಣ್ಣವನ್ನು ಮಡಿಲಲ್ಲಿ ಕಟ್ಟಿಕೊಂಡು ಮಡುವಿಗೆ ಹಾರಿದಂತಾಗುತ್ತದೆ; ಕಾಲು ಕತ್ತರಿಸಿಕೊಂಡು ಬೆಟ್ಟ ಹತ್ತಿದಂತಾಗುತ್ತದೆ; ಇದ್ದ ನೀರನ್ನೆಲ್ಲ ಚೆಲ್ಲಿ, ಮರಳುಗಾಡಿನ ಪ್ರಯಾಣ ಹೊರಟಂತಾಗುತ್ತದೆ.

'ಇದು ನನ್ನ ಸ್ಪಷ್ಟ ಅಭಿಪ್ರಾಯ ಪ್ರಭು. ನನಗೆ ತೋರುವ ಪರಿಹಾರೋಪಾಯ ಇದೊಂದೇ.'

—ಎಂದು ಹೇಳಿ ರಾಜಪೆರುಮಾಳ್ ಕುಳಿತ.

ಆತನ ಮಾತು ಮುಗಿದಾಗ ಸಭೆಯಲ್ಲಿ, ಸೂಜಿ ಬಿದ್ದರೂ ಕೇಳಿಸುವಷ್ಟು ನಿಶ್ಶಬ್ದತೆ ವ್ಯಾಪಿಸಿತ್ತು. ಆದಿಯಮ ದಾಮೋದರರಿಬ್ಬರ ಮೊಗಗಳೂ, ಕಾದ ತಾಮ್ರದಂತೆ ಕೆಂಪೇರಿ, ಉಳಿದ ಸಭಿಕರ ಮೊಗಗಳು ಮುಂದೇನೋ ಎಂಬ ಶಂಕೆಯಿಂದ ಬಿಳುಪೇರಿ, ಬಿಗಿದುಕೊಂಡಿದ್ದವು.

ಅಷ್ಟು ಹೊತ್ತು ಯಾರಿಗೂ ಆ ಮೌನವನ್ನು ಮುರಿದು ಮಾತನಾಡುವ ಧೈರ್ಯವಾಗಲಿಲ್ಲ. ಕೊನೆಗೆ, ದಾಮೋದರನೇ ಎದ್ದು ನಿಂತು, ಬಹು ಗಡುಸಾದ ಧ್ವನಿಯಲ್ಲಿ—

'ಕಚ್ಚಲು ಬಂದ ಹಾವಿಗೆ ಹಾಲೆರೆಯಬೇಕು ಎಂದು ಸಾಮನ್ತರಾಜ ಪೆರುಮಾಳರು ನಮ್ಮೆಲ್ಲರಿಗೂ ಬುದ್ಧಿವಾದ ಹೇಳುತ್ತಿದ್ದಾರೆ. ಪ್ರಭುಗಳಿಗೆ ಅದು ಒಪ್ಪಿಗೆ ಇದ್ದರೆ, ಆಗಬಹುದು.'

—ಎಂದ.

'ಹಾಗಲ್ಲ ಪ್ರಭು—ಹಾವಿಗೆ ಹಾಲೆರೆಯಬೇಕೆಂದು ನಾನು ಹೇಳು

ತ್ತಿಲ್ಲ; ಉರಿಯುತ್ತಿರುವ ಬೆಂಕಿಗೆ ಎಣ್ಣೆ ಸುರಿಯಬೇಡಿ ಎಂದು ಹೇಳುತ್ತಿದ್ದೇನೆ.'

—ರಾಜಪೆರುಮಾಳ್ ಉತ್ತರವಿತ್ತ.

'ಅದು ಹೇಗಾದರಾಗಲಿ—ಕನ್ನಡಿಗರಿಗೆ ನಮ್ಮ ಆಳ್ವಿಕೆ ಸಹನೀಯವಾಗಿದೆಯೋ, ಅಸಹನೀಯುವಾಗಿದೆಯೋ, ಅಂತೂ ಸಾಮನ್ತ ರಾಜಪೆರುಮಾಳ್‌ರವರಿಗೆ ಮಾತ್ರ ನಮ್ಮ ಆಳ್ವಿಕೆಯ ಬಗ್ಗೆ ಅಸಮಾಧಾನವಿದೆ ಎಂದು ತಿಳಿಯಿತು. ಅದಾದರೂ ನಮಗೆ ಈಗಲೇ ತಿಳಿದದ್ದು ನಮಗೆ ಉಪಕಾರವಾಯಿತು.'

—ಎಂದ ಅದಿಯಮ.

'ನನ್ನ ಮಾತನ್ನು ತಾವು ತಪ್ಪು ತಿಳಿಯುತ್ತಿದ್ದೀರ ಪ್ರಭು. ನಮಗೆ ತಮ್ಮ ಬಗ್ಗೆ ಅಸಹನೆಯೂ ಇಲ್ಲ; ತಮ್ಮ ಆಳ್ವಿಕೆಯ ಬಗ್ಗೆ ಅಸಮಾಧಾನವೂ ಇಲ್ಲ. ಅದಕ್ಕೆ ಪ್ರತಿಯಾಗಿ, ನಾಳಿನ ಇತಿಹಾಸದಲ್ಲಿ, 'ತಮ್ಮ ಕಾಲದಲ್ಲಿ ಕನ್ನಡನಾಡಿನಲ್ಲಿ ಚೋಳ ಆಳ್ವಿಕೆ ಕೊನೆಗೊಂಡಿತು' ಎಂದು ಬರೆಯಲ್ಪಡಬಾರದು ಎಂಬ ಅಭಿಮಾನವಿದೆ. ಆ ಅಭಿಮಾನವೇ ನನ್ನಿಂದ ಇಷ್ಟು ಮಾತು ಆಡಿಸಿದ್ದು.'

'ನಮ್ಮ ಹಿತ ಏನು ಎಂಬುದನ್ನು ನಾವು ಬಲ್ಲೆವು; ಈ ಸಾಮ್ರಾಜ್ಯವನ್ನು ಉಳಿಸಿಕೊಳ್ಳಬಲ್ಲ ಬಲ ನಮ್ಮ ತೋಳುಗಳಿಗಿದೆ ಎಂಬ ನಂಬಿಕೆ ನಮಗೂ ಇದೆ; ಚಕ್ರವರ್ತಿಗಳಿಗೂ ಇದೆ. ನಿಮ್ಮನ್ನು ನಾವು ಕೇಳುತ್ತಿರುವುದು—ನಮ್ಮ ಯಶಸ್ಸನ್ನು ರಕ್ಷಿಸಿ ಎಂದಲ್ಲ; ಉಂಡ ಮನೆಗೆ ಎರಡು ಬಗೆಯದೆ, ನಿಮಗೆ ಒಪ್ಪಿಸಿದ ಕೆಲಸ ಮಾಡಿ ಎಂದು; ಅಷ್ಟೆ. ಆ ಕೆಲಸ ನಿಮ್ಮಿಂದ ಆದೀತೇ?'

— ಅದಿಯಮ ಏರು ಕೋಪದಲ್ಲಿ ವ್ಯಂಗ್ಯವಾಗಿ ಕೇಳಿದ.

'ಅದಕ್ಕಾಗಿ ನನ್ನ ತಲೆ ಎಂದೆಂದೂ ಮೀಸಲಾಗಿದೆ ಪ್ರಭು.'

'ಅಷ್ಟಾದರೆ–ಸರಿ. ಹಾಗೇ ಸಮರಾಂಗಣದಲ್ಲಿ ಉರುಳಬೇಕಾದ ತಲೆ, ತಲೆಗಡುಕನ ಗಂಡುಗೊಡಲಿಯ ಪಾಲಾಗದಂತೆ ಎಚ್ಚರವಾಗಿರಿ. ಅಷ್ಟು ಚಿಂತೆ ನಿಮಗಿದ್ದರೆ ಸಾಕು; ಉಳಿದ ಚಿಂತೆ ನಮಗಿರಲಿ.'

—ಅಲ್ಲಿಗೆ ಮಾತು ಮುಗಿಸುವವನಂತೆ ಹೇಳಿ, ಸಭೆಯಲ್ಲಿ ಕುಳಿತ ಉಳಿದವರ ಮುಖನೋಡಿ—

'ಬೇರೆಯವರು ಏನಾದರೂ ಹೇಳುವುದಿದೆಯೋ ?'

—ಎಂದು ಕೇಳಿದ ಅದಿಯಮ.

ಆ ಪ್ರಶ್ನೆಗೆ ಯಾರೊಬ್ಬರೂ ಉತ್ತರ ಕೊಡಲಿಲ್ಲ. ಉತ್ತರಕ್ಕೆ ಕಾಯುವ ಸಹನೆಯೂ ಅದಿಯಮನಲ್ಲಿ ಉಳಿದಿರಲಿಲ್ಲ.

'ಸರಿ–ನಿಮ್ಮ ಅಭಿಪ್ರಾಯ ತಿಳಿದಂತಾಯಿತಲ್ಲ. ನೀವೆಲ್ಲರೂ ಏನು ಮಾಡಬೇಕೆಂದು ಯೋಚನೆಮಾಡಿ ತಿಳಿಸುತ್ತೇವೆ. ನಾವು ಮಾಡಿದ ಅಪ್ಪಣೆಯನ್ನು ಕೂಡಲೇ ಕಾರ್ಯಗತ ಮಾಡಲು ಸಿದ್ಧರಾಗಿರಿ.'

—ಎಂದಷ್ಟು ಹೇಳಿ ಸಭೆಯನ್ನು ಮುಗಿಸಿದ.

ಸಭೆ ಕದಲಿತು. ಸಭೆಯಲ್ಲಿ ನೆರೆದವರೆಲ್ಲರೂ, ಸದ್ದು ಮಾಡದೆ ಹೊರಟರು. ಎಲ್ಲರೊಂದಿಗೆ ರಾಜ ಪೆರುಮಾಳನೂ ತಲೆ ತಗ್ಗಿಸಿ ಹೊರಟ.

ಅದನ್ನು ಕಂಡು ದಾಮೋದರ ವಿಷನಗೆ ನಕ್ಕು, ಎಲ್ಲರೂ ಹೋದಬಳಿಕ ಅದಿಯಮನತ್ತ ತಿರುಗಿ ಹೇಳಿದ—

'ನಮ್ಮ ವೈರಿಗಳು ಯಾರೆಂದು ತಿಳಿಯಿತಲ್ಲ ಭಾವ!'

'ತಿಳಿಯಿತು.'

'ಮುಂದೇನು ಮಾಡುತ್ತೀರ ?'

'ಅದೂ ಗೊತ್ತಿದೆ.'

—ಎಂದು, ಕೈ ಚಪ್ಪಾಳೆ ತಟ್ಟಿ, ಆ ಕರೆಗೆ ಓಗೊಟ್ಟು ಬಂದ ಅಧಿಕಾರಿಗೆ—

'ಜವನಾಥಪುರದ ಸಾಮನ್ತ ರಾಜಪೆರುಮಾಳೆಯವರು ರಾಜರಾಜಪುರವನ್ನು ಬಿಟ್ಟು ಹೊರಗೆ ಹೋಗಕೂಡದು. ಅರಮನೆಯನ್ನು ದಾಟಿ ಹೋಗುವ ಮೊದಲೇ ಅವರನ್ನು ಬಂಧಿಸಿ, ಕಾರಾಗೃಹದಲ್ಲಿಡಿ'

—ಎಂದು ಅಪ್ಪಣೆ ಮಾಡಿದ ಅದಿಯಮ.

ಆ ಮಾತನ್ನು ಕೇಳಿ ತೃಪ್ತಿಯಾದುದು ದಾಮೋದರನೊಬ್ಬನಿಗೇ. ಆ ಅಪ್ಪಣೆಯನ್ನು ಮಾಡಿದ ಅದಿಯಮನಿಗೂ ತೃಪ್ತಿ ಇರಲಿಲ್ಲ. ಕ್ರೋಧದಲ್ಲಿ ಅವನ ನಾಲಗೆ ಏನೇನೋ ನುಡಿದರೂ, ಆ ನುಡಿ ಅವನ ಹೃದಯಕ್ಕೆ ಒಪ್ಪಿಗೆಯಾಗಿರಲಿಲ್ಲ.

೧೪

# ಜನನಾಥಪುರದ ಮುತ್ತಿಗೆ

ಕನ್ನಡ ಜನತೆಯ ಉತ್ಸಾಹಪೂರ್ಣ ಸಹಕಾರದಿಂದ, ಇದಿರಾದ ಅಡಿತಡೆಗಳನ್ನು ಸುಲಭವಾಗಿ ಮುರಿದೊಗೆದು, ದಿನದಿನಕ್ಕೆ ಹೆಚ್ಚುತ್ತಿದ್ದ ಜನ ಬಲ, ಉತ್ಸಾಹಬಲಗಳಿಂದ ಕೂಡಿದ ಹೊಯ್ಸಳ ಸೇನೆ, ದಿನದಿನಕ್ಕೆ ನೆರೆಯ ನೀರಿನಿಂದ ಉಬ್ಬುವ ಕಾರ್ಗಾಲದ ಹೊಳೆಯಂತೆ ಉಕ್ಕೇರಿ, ಚೋಳ ರಾಜ ಧಾನಿ ರಾಜರಾಜಪುರದ ಪಕ್ಕದಲ್ಲಿ ಹರಿಯುತ್ತಿದ್ದ ಕಾವೇರಿ ನದಿಯ ಇದಿರು ದಂಡೆಯಲ್ಲಿದ್ದ ಜನನಾಥಪುರದ ಹೊರವಳಯದಲ್ಲಿ ಬೀಡು ಬಿಟ್ಟಿತು.

ಹೊಯ್ಸಳ ಸೇನೆ ಜನನಾಥಪುರದ ಬಳಿಗೆ ಬರುವ ವೇಳೆಗೆ, ಅದಿ ಯಮನೂ ಆ ಕೋಟೆಯ ರಕ್ಷಣೆಗೆ ಬೇಕಾದ ಸಿದ್ಧತೆಗಳನ್ನೆಲ್ಲಾ ಮಾಡಿದ್ದುದೇ ಅಲ್ಲದೆ, ಕಡೆಯ ಆಳು ಉರುಳುವವರೆಗೂ, ಜನನಾಥಪುರ ಶತ್ರುವಶವಾಗ ದಂತೆ ರಕ್ಷಿಸಬೇಕೆಂಬ ಕಟ್ಟಪ್ಪಣೆಯೊಡನೆ, ತನ್ನ ಭಾವಮೈದುನನಾದ ದಾಮೋದರನನ್ನು, ರಾಜಪೆರುಮಾಳರ ಸ್ಥಾನದಲ್ಲಿ, ಆ ಕೋಟೆಯ ಅಧಿಕಾರಿ ಯನ್ನಾಗಿ ನೇಮಿಸಿದ್ದ.

'ಅದೇನು ದೊಡ್ಡ ಕಾರ್ಯ. ಚೋಳರ ಬಲ ಎಷ್ಟೆಂಬುದನ್ನು ಈ ಹೊಯ್ಸಳರಿಗೆ ತೋರಿಸುತ್ತೇನೆ. ನೀನಿನ್ನು ನಿಶ್ಚಿಂತನಾಗಿರು ಭಾವ. ಈ ಹೊಯ್ಸಳ ಮರ್ದನದ ಕಾರ್ಯ ನನ್ನದಾಯಿತು. ಇನ್ನು ಕನಸು ಮನಸಿ ನಲ್ಲಿ ನಿನಗದರ ಚಿಂತೆ ಬೇಡ. ಮತ್ತೆ, ದ್ವಾರಸಮುದ್ರವನ್ನು ಗೆದ್ದು ಬಂದು ನಿನ್ನನ್ನು ನೋಡುತ್ತೇನೆ.'

—ಎಂದು ವೀರವೀಳಯದ ತಾಂಬೂಲವನ್ನು ಜಗಿಯುತ್ತಾ ಹೇಳಿ, ನದಿಯನ್ನು ದಾಟಲು ದೋಣಿಯನ್ನೇರಿದ ದಾಮೋದರ.

ಆದಿಯಮನಿಗೆ ಆ ಆಶ್ವಾಸನವನ್ನು ಕೊಟ್ಟುಬಂದ ದಾಮೋದರ, ಬಳಿಕ ಮೈ ಮರೆತು ಕೂಡಲಿಲ್ಲ. ಶತ್ರುಗಳನ್ನು ಸೋಲಿಸಲು ಅಗತ್ಯವಾದ

ಸಿದ್ಧತೆಗಳನ್ನು ಮಾಡತೊಡಗಿದ. ತನಗೆ ಅನುಮಾನವಿದ್ದವರನ್ನೆಲ್ಲಾ ಸೆರೆಮನೆಗೆ ಅಟ್ಟಿ, ದಾಳಿ ನಡೆದ ಕಾಲದಲ್ಲಿ ಕೋಟೆಯೊಳಗಿದ್ದ ಸೇನೆಗಾಗಲಿ, ಜನರಿಗಾಗಲಿ ಯಾವೊಂದು ವಸ್ತುವಿನ ಕೊರತೆಯೂ ಬೀಳದಂತೆ ಸಂಗ್ರಹಿಸಿ, ದಾಳಿ ಮುಕ್ತಾಯವಾಗುವವರೆಗೂ ಕೋಟೆಯಿಂದ ಯಾರೂ ಒಳ–ಹೊರಗೆ ಸುಳಿಯದಂತೆ ಕಟ್ಟಪ್ಪಣೆ ಮಾಡಿದುದೇ ಅಲ್ಲದೆ, ಕೋಟೆಯ ಹೊರಗಿರುವ ಶತ್ರುಸೇನೆಗೆ ಹುಲ್ಲು ಸಿಗದಂತೆ, ಸುತ್ತಲ ಬಯಲನ್ನೆಲ್ಲ ಸುಡಿಸಿದ.

ಇಷ್ಟು ಸಿದ್ಧತೆಗಳನ್ನು ಮಾಡಿಕೊಂಡ ಚೋಳ ಸೇನೆ, 'ಆದದ್ದಾಗಲಿ, ಹೊಯ್ಸಳರನ್ನು ಗೆದ್ದು ಹಿಮ್ಮೆಟ್ಟಿಸಲೇಬೇಕು' ಎಂಬ ಸಂಕಲ್ಪದಿಂದ ಸಿದ್ಧವಾಗಿ ನಿಂತಿತು.

ಜನನಾಥಪುರದ ಸುತ್ತಮುತ್ತಲ ನಿರ್ಜನವಾದ ದಗ್ಧಭೂಮಿಯನ್ನು ನೋಡಿಯೇ ದಂಡನಾಯಕ ಗಂಗರಾಜರಿಗೆ, ಚೋಳರು ತಮ್ಮನ್ನು ಇಲ್ಲಿ ಬಲವಾಗಿ ಎದುರಿಸಲು ಸಿದ್ಧವಾಗಿದ್ದಾರೆ ಎಂಬುದು ಅರಿವಾಯಿತು. ಅದನ್ನು ಕಂಡು, ಅವರಿಗೆ ಬರಲಿರುವ ಮಾರಣ ಹೋಮವನ್ನು ನೆನೆದು ಒಂದು ಗಳಿಗೆ ವ್ಯಥೆಯಾದರೂ, ಮರುಗಳಿಗೆಯೇ ಹುಡುಕಿ ಅಲೆಯುತ್ತಿದ್ದ ಬೇಟೆ, ಇದುರಿಗೆ ಬಂದಾಗ ಬೇಟೆಗಾರನ ಹೃದಯದಲ್ಲಿ ಮೂಡುವ ಉತ್ಸಾಹ ಮೂಡಿ—

'ಜನನಾಥಪುರವಾದರೂ ನಮ್ಮನ್ನು ಇದುರಿಸಿದುದು ಒಳಿತಾಯಿತು. ಇಲ್ಲವಾದರೆ ತಲವನಪುರವನ್ನು ತಲಪುವ ವೇಳೆಗೆ ನಮ್ಮ ಸೇನೆಗೆ ರಣವಿದ್ಯೆಯೇ ಎಲ್ಲಿ ಮರೆತುಹೋಗುತ್ತದೆಯೋ ಎಂದು ಭಯವಾಗಿತ್ತು. ಸಧ್ಯ—ಇಲ್ಲಾದರೂ ಶತ್ರುಭೇಟಿಯಾಯಿತಲ್ಲಾ. ನಮ್ಮ ಧನುರ್ಬಾಣಗಳಿಗೆ ಇಷ್ಟು ದಿನದ ಮೇಲಾದರೂ ಕೆಲಸ ಸಿಕ್ಕಿತು.'

—ಎಂದು ಹೇಳಿ, ಬಯಸಿದ ಯುದ್ಧ ಸಂದರ್ಭ ಒದಗಿಬಂದುದಕ್ಕಾಗಿ ತೃಪ್ತಿಯ ನಿಟ್ಟುಸಿರು ಬಿಟ್ಟರು.

ಗಂಗರಾಜರ ಸೂಚನೆಯಂತೆ, ಹೊಯ್ಸಳ ಸೇನೆ ಕೋಟೆಗಾಳಗಕ್ಕೆ ಸಿದ್ಧವಾಯಿತು.

ಕಬ್ಬಿಣದ ತಗಡುಗಳ ಅಂಗರಕ್ಷೆಯಿಂದ ರಕ್ಷಿತವಾದ ಗಜಪಡೆಯ ಕೋಟೆಯ ಹಿಂದೆ, ಬಗೆ ಬಗೆಯ ಶಸ್ತ್ರಗಳನ್ನು ಧರಿಸಿದ ಸೈನಿಕರೂ, ಕೋಟೆಯನ್ನು ಹತ್ತಲು ಅಗತ್ಯವಾದ ಸಾಧನಗಳನ್ನು ಹೊಂದಿದ ಭಟರೂ ಕೋಟೆ

ಯತ್ತ ಚಲಿಸಿದರು. ಕೋಟೆಯತ್ತ ನಡೆಯುತ್ತಿರುವ ಹೊಯ್ಸಳ ಸೇನೆಯ ಮೇಲೆ, ಕೋಟೆಯ ಮೇಲೆ ನಿಂತ ಚೋಳ ಸೈನಿಕರು ಬಾಣದ ಮಳೆಗರೆಯ ದಂತೆ, ಬಡಗಿಗಳು ನಿರ್ಮಿಸಿದ ಮರದ ಅಟ್ಟಲಿಗೆಗಳ ಮೇಲೆ ನಿಂತ ಹೊಯ್ಸಳ ಧನುರ್ಧರರು, ತಮ್ಮ ಪಡೆಯ ನೆತ್ತಿಯಮೇಲೆ ಬಾಣದ ಕೋಟೆ ಕಟ್ಟಿದರು.

ಈ ರಕ್ಷಣೆಯಲ್ಲಿ ಮೊರೆಯುವ ನೂರಾರು ರಣವಾದ್ಯಗಳೊಂದಿಗೆ ಸ್ಪರ್ಧಿಸಿ, ಶತ್ರುಗಳ ಎದೆ ಬಿರಿಯುವಂತೆ ರಣಕೇಕೆ ಹಾಕುತ್ತಾ ಮುಂದು ವರಿದ ಸೇನೆ, ಚೋಳ ಸೈನಿಕರ ಬಾಣ ತಗುಲಿ ಸಾಯುವವರನ್ನೂ ಲೆಕ್ಕಿಸದೆ, ಒಬ್ಬ ಸತ್ತ ಸ್ಥಳದಲ್ಲಿ ಹತ್ತು ಜನ ನಿಂತು ಕೋಟೆಯ ಬಳಿ ಸೇರಿ, ಕೋಟೆಯ ಗೋಡೆಯನ್ನು ಹತ್ತಲು ನಿಚ್ಚಣಿಗೆಗಳನ್ನು ಹಾಕಿದರು. ಆದರೆ, ಗೆಲುವಿನ ಭರವಸೆಯಿಂದ ಕೋಟೆಯನ್ನು ಹತ್ತಲು ಯತ್ನಿಸಿದ ಹೊಯ್ಸಳ ಬಲ, ನೆತ್ತಿಯಮೇಲೆ ಸುರಿದ ಹುರಿದ ಮರಳು, ಕುದಿಯುವ ಎಣ್ಣೆ, ಕಾದ ಅಂಬಲಿ, ಹಸಿದ ಹುಲಿಯಂತೆ ಬೀಳುವ ಹೆಬ್ಬಂಡೆಗಳಿಗೆ ನೂರಾರು ಜೀವಬಲಿ ಕೊಟ್ಟು ಹಿಂಜರಿಯಬೇಕಾಯಿತು.

ಒಂದು ಗಳಿಗೆ ಗೆಲುವಿನ ಕೇಕೆಗಳಿಂದ ತುಂಬಿದ ರಣಾಂಗಣ, ಮರು ಗಳಿಗೆ ಗಾಯಗೊಂಡ ಆನೆಗಳು, ಕುದುರೆಗಳು, ಕಾಲಾಳುಗಳ ನೋವಿನ ಚೀರುಧ್ವನಿಯಿಂದ, ಸಾವಿನ ಭೀತಿಯ ಆಕ್ರಂದನದಿಂದ ತುಂಬಿತು.

ಕೋಟೆಯ ಬಳಿ ಕೈಕಾಲು ಮುರಿದು, ತಲೆಯೊಡೆದು ನೆತ್ತರು ಸೂಸುವ ಹೆಣಗಳು ರಾಶಿ ರಾಶಿಯಾಗಿ, ರಣರಂಗಕ್ಕಿಕ್ಕಿದ ಭೂತಬಲಿಯಂತೆ ಬಿದ್ದವು.

ಹಗಲು ಆರಂಭವಾದ ಯುದ್ಧ ಸಂಜೆಯಾಗಿ ಕತ್ತಲು ಕವಿಯುವ ಹೊತ್ತಾದರೂ ಮುಗಿಯದೆ, ಕಡೆಗೆ ಕತ್ತಲೆಯೇ ಎರಡು ಬಲಗಳಿಗೂ ನಡುವೆ ನಿಂತು, ಆ ರಾತ್ರಿಯ ಮಟ್ಟಿಗೆ ಯುದ್ಧವನ್ನು ನಿಲ್ಲಿಸಿತು.

ಗಂಗರಾಜರೊಂದಿಗೆ ಪಾಳಯದಲ್ಲಿ ಸಂಚರಿಸಿ, ರಣವೈದ್ಯರಿಂದ ಚಿಕಿತ್ಸೆ ಪಡೆಯುತ್ತಿದ್ದ ಸೈನಿಕರ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಬಂದ ವಿಷ್ಣುವರ್ಧನ, ರಾತ್ರಿಯೆಲ್ಲಾ ಮಲಗದೆ, ಗಂಗರಾಜರೇ ಮೊದಲಾದ ದಂಡನಾಯಕರೊಂದಿಗೆ ಕುಳಿತು, ಹೆಚ್ಚು ಜೀವ ಹಾನಿಯಾಗದಂತೆ ಕೋಟೆ

ಯನ್ನು ಹಿಡಿಯುವ ಕ್ರಮಗಳನ್ನು ವಿಚಾರಿಸಿದರು.

ಒಬ್ಬೊಬ್ಬರೂ ತಮಗೆ ಸೂಕ್ತವೆಂದು ಕಂಡ ಕ್ರಮಗಳನ್ನು ವಿವರಿಸಿದರು. ಆ ಹೊತ್ತಿನಲ್ಲಿ ಬೋಕಿಮಯ್ಯ—

'ಹೆಚ್ಚು ಕಷ್ಟವಾಗದಂತೆ ಕೋಟೆಯನ್ನು ಹಿಡಿಯಲು ನನಗೊಂದು ಉಪಾಯ ತೋಚುತ್ತದೆ'

—ಎಂದ.

'ಏನು?'

'ನಾವು ಕೋಟೆಯಮೇಲೆ ದಾಳಿ ಮಾಡುವ ಹೊತ್ತಿನಲ್ಲಿ, ಕೋಟೆಯ ಒಳಗೂ ಏನಾದರು ಗದ್ದಲವಾದರೆ, ಆಗ ಚೋಳ ಸೈನಿಕರ ಗಮನ ಅತ್ತ ಕಡೆ ಎಳೆದು, ನಾವು ಕೋಟೆಯನ್ನು ಹಿಡಿಯುವುದು ಸಾಧ್ಯವಾಗುತ್ತದೆ.'

—ಎಂದು ಸೂಚಿಸಿದ.

'ಆದರೆ ಅದನ್ನು ಹೇಗೆ ಮಾಡುವುದು ಸಾಧ್ಯ? ಕೋಟೆಯೊಳಗಿನವರು ಒಬ್ಬರೂ ಹೊರಸುಳಿಯದಂತೆ ಕಟ್ಟು ಮಾಡಿದಾರೆ. ಒಳಗಿನ ಪರಿಸ್ಥಿತಿ ಹೇಗೋ ಏನೋ? ಆದುದರಿಂದ ಕೋಟೆಯೊಳಗೆ ಹೇಗೆ ಗದ್ದಲ ಎಬ್ಬಿಸುವುದು?'

—ದೊರೆಯ ಅಂಗರಕ್ಷಕ ಪಡೆಯ ನಾಯಕನಾದ ಹಟಗಾರ ಕೇತಯ ನಾಯಕ ಕೇಳಿದ.

'ನಮಗೇನೋ ಅದಕ್ಕೆ ಒಂದು ದಾರಿ ಕಾಣುತ್ತದೆ.'

—ಎಂದ ವಿಷ್ಣುವರ್ಧನ.

ದೊರೆಯಾಡಿದ ಮಾತನ್ನು ಕೇಳಿ ಗಂಗರಾಜರಿಗೆ ಆಶ್ಚರ್ಯವಾಯಿತು.

'ಏನು? ಕೋಟೆಯ ವಿಷಯ ನಿಮಗೆ ಗೊತ್ತೆ?'

'ಗೊತ್ತಿರಲಿಲ್ಲ. ಇವೊತ್ತು ಬೆಳಗ್ಗೆ ಯುದ್ಧವಾಗುತ್ತಿದ್ದಾಗ ನಾವು ಅಟ್ಟಲಗೆಯಮೇಲೆ ನಿಂತು ನೋಡುತ್ತಿದ್ದೆವಲ್ಲ, ಆಗ, ಗೌರಾಚಾರ್ಯರ 'ಆಕಾಶದರ್ಶಿ' ಒಂದು ದಾರಿ ಸೂಚಿಸಿತು. ಈ ದಿನವೇ ಯುದ್ಧ ಮುಗಿಯದಿದ್ದರೆ ಬಳಿಕ ನಿಮಗೆ ಹೇಳುವುದೆಂದು ಸುಮ್ಮನಾದೆವು.'

—ಎಂದ ವಿಷ್ಣುವರ್ಧನ.

'ಆಕಾಶದರ್ಶಿ ಏನು ತೋರಿಸಿತು?'

—ಉತ್ಸಾಹದಿಂದ ಕೇಳಿದರು ಗಂಗರಾಜರು.

'ಇದು ಭತ್ತದ ಪ್ರಾಂತವಲ್ಲವೇ? ಕೋಟೆಯೊಳಗೆ, ಮನೆ ಮನೆಯ ಮುಂದೂ ಒಂದೊಂದು ಬೆಟ್ಟದಂಥ ಹುಲ್ಲಿನ ಬಣವೆಗಳಿವೆ. ಹೇಗಾದರೂ ಅದಕ್ಕೆ ಬೆಂಕಿ ತೋರಿಸುವುದು ಸಾಧ್ಯವಾದರೆ ನಮ್ಮ ಕೆಲಸ ಅರ್ಧ ಮುಗಿದಂತಾಗುತ್ತದೆ.'

'ನಿಜ, ನಿಜ'

—ಎಂದು ಗಂಗರಾಜರು, ದೊರೆಯ ಸಲಹೆಗೆ ತಮ್ಮ ಸಮ್ಮತಿ ಸೂಚಿಸಿ—

'ನಾಳೆ ಅದರ ವ್ಯವಸ್ಥೆ ಮಾಡಿಸುತ್ತೇನೆ.'

—ಎಂದರು.

ಆ ಮಾರ್ಗ ನಿಶ್ಚಯವಾದ ಬಳಿಕ ಎಲ್ಲರಿಗೂ ಮನಸ್ಸು ಹಗುರವಾಗಿ ಗಂಗರಾಜರು ವಿಷ್ಣುವರ್ಧನನ ಮಾತಿನಂತೆ ಮಲಗಲು ಹೋದರು.

ದಂಡನಾಯಕರನ್ನು ಮಲಗಲು ಕಳಿಸಿದ ವಿಷ್ಣುವರ್ಧನ, ತಾನು ಮಾತ್ರ ಮಲಗಲಿಲ್ಲ. ತನ್ನ ಬಳಿಯಲ್ಲಿದ್ದ ಬೋಕಿಮಯ್ಯ, ಕೇತಯನಾಯಕರಕಡೆ ತಿರುಗಿ—

'ಗಂಗರಾಜರಿಗೆ ತಲಕಾಡಿನ ಯುದ್ಧ ಕಾದಿದೆ. ಈ ಪೊಳ್ಳು ಕೋಟೆಯನ್ನು ಹಿಡಿಯುವ ಕೆಲಸದಲ್ಲಿ ಅವರಿಗೇಕೆ ಶ್ರಮವಾಗಬೇಕು? ಹತ್ತು ಜನ ನಮ್ಮೊಂದಿಗೆ ಬರುವುದಾದರೆ, ಪ್ರಧಾನಿಗಳು ಏಳುವುದರೊಳಗಾಗಿ ನಾವೇ ಆ ಕೆಲಸ ಮಾಡಿ ಮುಗಿಸಬಹುದು.'

—ಎಂದ.

ಆತನ ಮಾತನ್ನು ಕೇಳಿದ ಕೇತಯನಾಯಕ, ಬೋಕಿಮಯ್ಯ ಕಾಣದ ಬೆಂಕಿಯನ್ನು ಮುಟ್ಟಿದಂತೆ ಬೆರಗಾದರು.

'ಅದೇನು ಮಾಡುವುದಿದ್ದರೂ ನಮಗೆ ಹೇಳಿ. ಯಾವುದಕ್ಕೂ ನೀವು ಮುಂದೆ ಬರುವುದು ಬೇಡ. ಯಾವ ಅಪಾಯಕ್ಕೂ ತಮ್ಮನ್ನು ಬಿಡಕೂಡದೆಂದು ಪ್ರಧಾನಿಗಳು ಕಟ್ಟಪ್ಪಣೆ ಮಾಡಿದಾರೆ.'

—ಎಂದ ಬೋಕಿಮಯ್ಯ.

'ಆ ಅಪ್ಪಣೆ ಮಾಡಿ ಅವರು ತಮ್ಮ ಕರ್ತವ್ಯ ನಿರ್ವಹಿಸಿದರು. ಆದರೆ ನಾವೂ ಮಾಡಬೇಕಾದ ಕರ್ತವ್ಯವಿದೆ. ಆದುದರಿಂದ ಯಾರೂ ಇದಿರು ಮಾತನಾಡಬೇಡಿ. ಈ ಬಾರಿಯ ಯುದ್ಧದಲ್ಲಿ ಇದು ನಾವು ಮಾಡಿದ ಕೆಲಸ ಎಂದು ಹೇಳಿಕೊಳ್ಳುವುದಕ್ಕೆ ನಮಗೆ ಏನೂ ಬೇಡವೇ? ಆದ್ದರಿಂದ ಬೋಕಿಮಯ್ಯ, ನೀವು ಹೋಗಿ, ನಮ್ಮ ವೇಳೆವಡಿಚರ ಪಡೆಯೊಳಗೆ ಬಹು ಕುಶಲರಾದ ಇಪ್ಪತ್ತು ಮಂದಿ ಬಿಲ್ಗಾರರನ್ನು ಹೊರಡಿಸಿ ಸಿದ್ಧರಾಗಿ. ಮುಂದಿನ ಕೆಲಸ ಇಲ್ಲಿಂದ ಹೋದ ಬಳಿಕ ಹೇಳುತ್ತೇವೆ. ಹಾಗೇ ಎಲ್ಲೂ ನಾವು ಹೋಗುವ ಗದ್ದಲವಾಗಬಾರದು; ಸುದ್ದಿಯ ಎಳೆಯೂ ಯಾರಿಗೂ ತಿಳಿಯಬಾರದು. ಎಚ್ಚರವಾಗಿರಿ.'

—ಎಂದು ಬೋಕಿಮಯ್ಯನಿಗೆ ಅಪ್ಪಣೆ ಮಾಡಿ—

'ಕೇತಯನಾಯಕರೇ, ನೀವು ಹೋಗಿ ಎಣ್ಣೆಯಲ್ಲಿ ಚೆನ್ನಾಗಿ ತೋಯಿಸಿದ ಒಂದು ಹೊರೆ, ತೆಳುವಾದ ಪಂಜುಗಳನ್ನು ಸಿದ್ಧಪಡಿಸಿಕೊಂಡು ಬನ್ನಿ.'

—ಎಂದು ಹೇಳಿ, ಅವರಿಬ್ಬರನ್ನೂ ಕಳುಹಿಸಿ, ಅವರು ಹಿಂದಿರುಗಿ ಬರುವುದನ್ನೇ ಕಾದು ಕುಳಿತ.

ಅನತಿ ಕಾಲದಲ್ಲಿಯೇ ಅವರಿಬ್ಬರೂ ಬಂದು, ದೊರೆ ತಮಗೊಪ್ಪಿಸಿದ ಕೆಲಸವನ್ನು ಮಾಡಿರುವುದಾಗಿ ತಿಳಿಸಿದರು.

ಕೂಡಲೇ ವಿಷ್ಣುವರ್ಧನ, ಆಳು ತೊಡಿಸಿದ ಅಂಗರಕ್ಷೆಯನ್ನು ಧರಿಸಿ, ತಾವು ಬಿಡಾರದಿಂದ ಹೊರ ತೆರಳಿದುದು ಯಾರೊಬ್ಬರಿಗೂ ತಿಳಿಯಕೂಡ ದೆಂದು ಆಳಿಗೆ ಕಟ್ಟು ಮಾಡಿ, ಕಾಲುನಡಗೆಯಲ್ಲೇ ಪಾಳಯದ ಆಚೆಯವರೆಗೂ ನಡೆದು, ಪಾಳಯದ ಕಾವಲು ಕಾಯುವ ಸೈನಿಕರಿಗೂ ಯಾರಿಗೂ ತಿಳಿಸ ಕೂಡದೆಂದು ಅಪ್ಪಣೆಮಾಡಿ, ಸಿದ್ಧವಾದ ಕುದುರೆಯನ್ನೇರಿ ತಮ್ಮನ್ನು ಹಿಂಬಾ ಲಿಸಿದ ಭಟರೊಂದಿಗೆ ಜನನಾಥಪುರದ ಕೋಟೆಯತ್ತ ತೆರಳಿದರು.

ಇರುಳಿನ ಕಾರ್ಗತ್ತಲಲ್ಲಿ ಜನನಾಥಪುರದ ಕೋಟೆ ಭೀಮಾಕಾರವಾಗಿ ಕಾಣುತ್ತಿತ್ತು. ಕೋಟೆಯ ಮೇಲೆ ಕಾವಲು ತಿರುಗುವ ಭಟರ ಕೂಗಲ್ಲದೆ, ಬೇರಾವ ಸದ್ದೂ ಇಲ್ಲದ ಗಂಭೀರಮೌನ ಎಲ್ಲೆಡೆಯಲ್ಲೂ ವ್ಯಾಪಿಸಿತ್ತು.

ಆ ಕತ್ತಲಿನಲ್ಲಿ ಚಲಿಸುವ ಕತ್ತಲೆಯ ಮರಿಗಳಂತೆ ನಡೆದ ಹೊಯ್ಸಳ ಸೈನಿಕರೂ, ಕಾಲ ನಡಗೆಯದಾಗಲಿ, ಆಡಿಸುವ ಉಸಿರಿನದಾಗಲಿ, ಸದ್ದಾಗ ದಂತೆ ವಿಷ್ಣುವರ್ಧನನನ್ನು ಹಿಂಬಾಲಿಸಿದರು.

ವಿಷ್ಣುವರ್ಧನ, ಹಗಲು 'ಆಕಾಶದರ್ಶಿ'ಯ ಮೂಲಕ ನೋಡಿ, ಗುರುತು ಮಾಡಿಕೊಂಡಿದ್ದ ಸ್ಥಳದ ಬಳಿಗೆ ಸೈನಿಕರನ್ನು ಕರೆತಂದು—

'ಇಲ್ಲಿ ಕೋಟೆಗೆ ದೂರವೆಂದು ನಾಲ್ಕಾರು ಮರಗಳನ್ನು ಚೋಳರು ಉಳಿಯಗೊಟ್ಟಿದಾರೆ. ಈ ಮರಗಳ ಮೇಲೆ ಹತ್ತಿ ತುದಿಯ ರೆಂಬೆಗಳ ಮೇಲೆ ಕುಳಿತರೆ, ಕೋಟೆಯೊಳಗಿನ ಹುಲ್ಲು ಬಣವೆಗಳನ್ನು ಕಾಣಬಹುದು. ಆ ಬಣವೆಗಳಿಗೆ ಗುರಿಯಿಟ್ಟು, ಪಂಜು ಕಟ್ಟಿದ ಬಾಣಗಳನ್ನು ಬಿಟ್ಟರೆ ಹುಲ್ಲು ಬಣವೆಗಳಿಗೆ ಉರಿ ಹೊತ್ತಿಸಬಹುದು. ಒಂದು ಪಂಜು ಕೋಟೆಯ ಮೇಲೆ ಹಾರಿದಾಗಲೂ, ನಾವು ಇರುವ ಸ್ಥಳ, ನಮ್ಮ ಉದ್ದೇಶ ಶತ್ರುಗಳಿಗೆ ಅರಿವಾಗು ವುದರಿಂದ, ಬಾಣ ಬಿಡುವವರು ಒಮ್ಮೆಗೇ ಬಿಟ್ಟು, ಅಲ್ಲಿ ಉರಿ ಹೊತ್ತಿದುದು ಕಂಡ ಕೂಡಲೇ ಇಲ್ಲಿಂದ ಮರೆಯಾಗಬೇಕು. ಒಂದು ಬಾಣವೂ ಹುಸಿ ಯಾಗಬಾರದು. ಒಂದೊಂದು ಬಣವೆಯನ್ನು ಹೊತ್ತಿಸಿದವರಿಗೆ ಒಂದೊಂದು ಗ್ರಾಮ ಬಹುಮಾನ'

—ಎಂದು ಹೇಳಿದ.

ದೊರೆಯ ಮಾತನ್ನು ಕೇಳಿದ ಬಿಲ್ಗಾರರು ಆ ಸಾಹಸಕ್ಕೆ ಸಿದ್ಧವಾದರು. ಆ ಬಳಿಕ ಬೋಕಿಮಯ್ಯ—

'ಪ್ರಭುಗಳು ನಮಗೆ ಕೆಲಸ ಒಪ್ಪಿಸಿದ್ದಾಯಿತು. ಆ ಕೆಲಸವನ್ನು ಮಾಡುವುದು ನಮ್ಮದಾಯಿತು. ತಾವಿನ್ನು ಸುರಕ್ಷಿತವಾಗಿ ಬಿಡಾರಕ್ಕೆ ಹಿಂದಿರುಗಬಹುದು'

—ಎಂದು ಬೇಡಿದ.

'ಆದಾಗದು. ನಮ್ಮ ಭಟರ ಪ್ರಾಣ ಹೋಗುವೆಡೆಯಲ್ಲಿ ನಮ್ಮದು ಹೋದರೂ ಸರಿಯೆ. ಕಂಡವರ ಪ್ರಾಣವನ್ನು, ಸಾವಿಗೆ ತಳ್ಳಿ, ಜೀವ ಉಳಿಸಿ ಕೊಳ್ಳುವ ಬಯಕೆ ನಮಗಿಲ್ಲ. ಬೋಕಿಮಯ್ಯ–ಹೇಳಿದಷ್ಟು ಕೆಲಸಮಾಡಿ. ಇದು ಮಾತಿಗೆ ವೇಳೆಯಲ್ಲ'

—ಎಂದ ವಿಷ್ಣುವರ್ಧನ.

ದೊರೆ ಆ ಮಾತನ್ನು ಹೇಳಿದ ಬಳಿಕ ಬೋಕಿಮಯ್ಯ ಬೇರೇನೂ ಮಾತಾಡಲು ಆಗದಾಗಿ, ದೈವದ ಮೇಲೆ ಭಾರ ಹಾಕಿ, ಬಿಲ್ಗಾರರಿಗೆ ದೊರೆಯ ಅಪ್ಪಣೆಯನ್ನು ನೆರವೇರಿಸುವಂತೆ ತಿಳಿಸಿದ.

ಆತನ ಸೂಚನೆಯಂತೆ ಬಿಲ್ಗಾರರು ಬಿಲ್ಲು ಬತ್ತಳಿಕೆಗಳೊಂದಿಗೆ ಮರದ ತುದಿಯನ್ನೇರಿ, ಕೊಂಬೆಗಳಿಗೆ ತೊಡೆ ಬಿಗಿದು ಕುಳಿತು, ತಮ್ಮೊಂದಿಗೆ ತಂದ ಚಕಮುಕಿಯ ಕಲ್ಲುಗಳನ್ನು ಕುಟ್ಟಿ, ಹತ್ತಿಯಲ್ಲಿ ಬೆಂಕಿ ಮಾಡಿ, ಪಂಜುಗಳನ್ನು ಹೊತ್ತಿಸಿ, ಬಾಣಗಳಿಗೆ ಬಿಗಿದ ಪಂಜುಗಳನ್ನು ಬಿಲ್ಲಿಗೆ ಹೂಡಿ, ಕತ್ತಲಿನಲ್ಲೂ ಅಸ್ಪಷ್ಟವಾಗಿ ಕಾಣುತ್ತಿದ್ದ ಹುಲ್ಲು ಬಣವೆಗಳನ್ನು ಗುರುತಿಸಿ, ಕಣ್ಣಿನಿಂದಲೇ ದೂರವನ್ನಳೆದು, ಅಷ್ಟು ದೂರ ಹೋಗುವಂತೆ ಬಿಟ್ಟರು.

ಉರಿಗಾರುತ್ತಾ ಹಾರಿ ಬಂದ ಆ ಬಾಣಗಳನ್ನು ನೋಡಿ, ಕೋಟೆಯ ಮೇಲೆ ಕಾವಲು ತಿರುಗುತ್ತಿದ್ದ ಚೋಳ ಸೈನಿಕರು ಉಲ್ಕೆಗಳು ಬೀಳುತ್ತಿವೆಯೇನೋ ಎಂದು ಭಾವಿಸಿ ಗಾಬರಿಯಾದರು.

'ಇದು ಏನೋ ? ಎಲ್ಲಿಯದೋ ?'

—ಎಂದು ಅವರು ಇನ್ನೂ ಯೋಚಿಸುತ್ತಿರುವಾಗಲೇ, ಕೋಟೆಯೊಳಗಿನ ಹತ್ತಾರು ಹುಲ್ಲು ಬಣವೆಗಳಲ್ಲಿ ಬೆಂಕಿ ಕಾಣಿಸಿಕೊಂಡು, ದಹದಹಿಸಿ ಉರಿಯಲಾರಂಭಿಸಿ, ಕೋಟೆಯಲ್ಲೆಲ್ಲಾ—

'ಬೆಂಕಿ . . . ಬೆಂಕಿ . . . ಬೆಂಕಿ . . .'

—ಎಂಬ ಹಾಹಾಕಾರ ಹರಡಿತು.

ಆ ಕೂಗನ್ನು ಅಣಕಿಸಿ ನಕ್ಕಂತೆ ಮತ್ತೆ ಹತ್ತಾರು ಕಡೆ ಬೆಂಕಿ ಕಾಣಿಸಿಕೊಂಡು, ಇರುಳು ಹಗಲಾದಷ್ಟು ಬೆಳಕಾಯಿತು.

ಗಳಿಗೆ ಗಳಿಗೆಗೂ ಕೋಟೆಯೊಳಗೆ ಕೂಗು ಹೆಚ್ಚಿತು.

ಆ ಕೂಗನ್ನು ಹುಡುಕಿಕೊಂಡು ಬಂದಂತೆ, ಸದ್ದು ಮಾಡದೆ, ಹೊಯ್ಸಳ ಪಾಳಯದ ಕಡೆಯಿಂದ ಸಹಸ್ರಾರು ಸೈನಿಕರು ಕೋಟೆಯತ್ತ ನುಗ್ಗುವುದನ್ನು ಕಂಡು, ವಿಷ್ಣುವರ್ಧನ ಚಕಿತನಾಗಿ, ಬಳಿಯಲ್ಲಿದ್ದ ಬೋಕಿಮಯ್ಯನನ್ನು—

'ಇದೇನು ?'

—ಎಂದು ಕೇಳಿದ.

'ದೊರೆಗಳು ಹೀಗೆ ಎಂದು ಹೇಳಿದಾಗಲೇ, ಪ್ರಭುಗಳ ಚಿತ್ತ ಮನ

ವರಿಕೆಯಾಗಿ, ಗಂಗರಾಜರಿಗೆ ತೊಂದರೆ ಕೊಡದಂತೆ ಹಗಲಾಗುವುದರೊಳಗೆ ಕೋಟೆಯನ್ನು ಸಾಧಿಸಬೇಕೆಂದು, ಆ ಕೂಗು ಕೇಳಿಸಿದಾಗ ನಿಚ್ಚಣಿಗೆಗಳೊಡನೆ ಕೋಟೆಯತ್ತ ನುಗ್ಗಲು ಸಿದ್ಧರಾಗಬೇಕೆಂದು ವೇಳೆವಡಿಚರ ಪಡೆಗೆ ಹೇಳಿ ಬಂದಿದ್ದೆ.'

—ಎಂದ ಬೋಕಿಮಯ್ಯ.

'ಒಳ್ಳೆಯದನ್ನೇ ಮಾಡಿದಿರಿ. ಹಗಲಾಗುವುದರೊಳಗೆ ಕೋಟೆಯನ್ನು ಹಿಡಿದೇ ಪಾಳಯಕ್ಕೆ ಹಿಂದಿರುಗೋಣ.'

—ಎಂದ ವಿಷ್ಣುವರ್ಧನನೂ ಉತ್ಸಾಹಿತನಾಗಿ.

ಕೋಟೆಯಲ್ಲಿ ಅಲ್ಲಲ್ಲಿ ಹತ್ತಾರು ಕಡೆ ಹೊತ್ತಿದ ಬೆಂಕಿಗಳನ್ನು ಆರಿಸುವುದರಲ್ಲಿ ನಿರತರಾಗಿ, ಕೋಟೆಯ ಮೇಲಿನ ಕಾವಲವರೂ ಅತ್ತ ನೋಡುತ್ತಿರುವಾಗಲೇ, ವೇಳೆವಡಿಚರ ಪಡೆ ಮಿಂಚಿನ ವೇಗದಲ್ಲಿ ಕೋಟೆಯ ಬಳಿ ಸೇರಿ, ಕೋಟೆಯ ಗೋಡೆಗೆ ನಿಚ್ಚಣಿಗೆಗಳನ್ನು ಒರಗಿಸಿ, ಕಪಿಗಳಂತೆ ವೇಗವಾಗಿ ಮೇಲೇರಿ, ಕಾವಲು ಭಟರು 'ಇದೇನು' ಎಂದು ತಿರುಗಿ ನೋಡುವಷ್ಟರಲ್ಲಿ ಅವರನ್ನು ತುಂಡರಿಸಿ, ಕೋಟೆಯೊಳಗೆ ನುಗ್ಗಿದರು. ಹತ್ತಾರು ಜನ ಕೋಟೆಯ ಬಾಗಿಲಬಳಿ ಸೇರಿ, ಅಲ್ಲಿ ಕಾವಲಿದ್ದವರನ್ನು ಕತ್ತರಿಸಿ, ಕೋಟೆಯ ಬಾಗಿಲಿಗೆ ಬಿಗಿದ ಸರಪಳಿಯನ್ನು ಬಿಚ್ಚಿ, ಲಾಳಮುಂಡಿಗೆಗಳನ್ನು ಸರಿಸಿ ಬಾಗಿಲು ತೆರೆದರು.

ಆ ಬಾಗಿಲು ಬಾಯಿ ಬಿಡುವುದನ್ನೇ ಕಾದಿದ್ದ ಕೋಟೆಯ ಹೊರಗಿನ ವೇಳೆವಡಿಚರ ಪಡೆ, ತೂಬೆತ್ತಿದ ಕೆರೆಯ ನೀರಿನಂತೆ ಕೋಟೆಯೊಳಗೆ ನುಗ್ಗಿತು.

ಹಗಲಿನ ಯುದ್ಧಾಯಾಸದಿಂದ ಮೈಮರೆತು ಮಲಗಿದ ಚೋಳ ಸೈನಿಕರು ಅಗ್ನಿಕಾಂಡದ ಅನಾಹುತದಿಂದ ದಿಗ್ಭ್ರಾಂತರಾಗಿ, ಅರೆ ಎಚ್ಚರವಾದ ಹೊತ್ತಿನಲ್ಲಿ ಕೋಟೆಯ ಒಳಗೆ ನುಗ್ಗಿದ ಹೊಯ್ಸಳ ವೇಳೆವಡಿಚರ ಪಡೆ, ಅವರು ಕತ್ತಿ ಧರಿಸುವುದಕ್ಕೂ ಅವಕಾಶ ಕೊಡದೆ ಕೊಚ್ಚಿ ಕೆಡಹಿತು.

ಇದನ್ನು ಕಂಡ ವಿಷ್ಣುವರ್ಧನನೂ ಕತ್ತಿಯನ್ನು ಒರೆಗಳಚಿ, ಹಿಂಬಾಲಿಸಿದ ಬೋಕಿಮಯ್ಯ, ಕೇತಯನಾಯಕರೊಂದಿಗೆ ಕೋಟೆಯತ್ತ ದೌಡಾಯಿಸಿ, ಸೇನೆಯೊಂದಿಗೆ ಕೋಟೆಯನ್ನು ಪ್ರವೇಶಿಸಿದ.

ಅನಿರೀಕ್ಷಿತವಾಗಿ ಶತ್ರುಸೇನೆ ಕೋಟೆಯೊಳಗೆ ನುಗ್ಗಿದುದನ್ನು ಕಂಡ

ಚೋಳಸೇನೆ, ಭಯದಿಗ್ಭ್ರಾಂತವಾಗಿ, ಯುದ್ಧ ಮಾಡುವುದನ್ನು ಮರೆತು, ಜೀವ ಉಳಿಸಿಕೊಳ್ಳಲು ದಾರಿಗಂಡತ್ತ ಓಡಿತು.

ಗೆದ್ದು ಕೋಟೆಯನ್ನು ಹಿಡಿಯಲೇಬೇಕೆಂಬ ಹಟದಿಂದ ನುಗ್ಗಿದ ಎರಡು ಸಾವಿರ ಮಂದಿ ಭಾಷೆಯಾಳುಗಳ ವಿಕಟಾಟ್ಟಹಾಸದ ಇದಿರು, ಚೋಳಸೇನೆ, ಉರಿ ಸೋಕಿದ ಬೆಣ್ಣೆಯಂತೆ ಕರಗಿತು. ಬಣವೆಗಳ ಬೆಂಕಿಯ ಕೆಂಬೆಳಕಿನಲ್ಲಿ ರಕ್ತಸ್ನಾನ ಮಾಡಿ, ವಿಕಟಾಟ್ಟಹಾಸಗೈಯುತ್ತಾ ಮುಂಬರಿಯುವ ವೇಳೆವಡಿಚರನ್ನು ಕಂಡು, ಭೂತದರ್ಶನವಾದಂತೆ ಬೆದರಿ, ಪಲಾಯನ ಮಾಡಿದರು ಚೋಳರು. ಸಾವಿರಾರು ಜನ ಉರಿಯುವ ಬಣವೆಯ ಹುಲ್ಲನ್ನೇ ಕಿತ್ತು ಬಾಯಲ್ಲಿಟ್ಟುಕೊಂಡು ಶರಣಾಗತರಾಗಿ, ಬೆತ್ತಲೆಯಾಗಿ ನಿಂತು ಜೀವದಾನ ಬೇಡಿದರು.

ಉರಿದು ನೆಲಸಮವಾದ ಹುಲ್ಲು ಬಣವೆಗಳ ಬದಲು, ಮುಗಿಲುದ್ದ ಹೆಣದ ಬಣವೆಗಳು ಬೆಳೆದವು.

ವೇಳೆವಡಿಚರಂತೆಯೇ, ವಿಷ್ಣುವರ್ಧನನ ಖಡ್ಗಕ್ಕೂ ವಿಶ್ರಾಂತಿ ಇರಲಿಲ್ಲ. ನೂರಾರು ಜನ ಚೋಳ ಸೈನಿಕರ ರಕ್ತ ಕುಡಿದು ಉನ್ಮತ್ತಳಾಗಿ ಗಹ ಗಹಿಸಿದಳು, ಆತನ ಖಡ್ಗಕಾಳಿ.

ಕೋಟೆಯಲ್ಲಾದ ಈ ಅಗಾಧ ಗದ್ದಲವನ್ನು ಕೇಳಿ ಎಚ್ಚರವಾದ ಗಂಗರಾಜರು, ಎಚ್ಚೆತ್ತು ಕಣ್ಣುಜ್ಜಿಕೊಂಡು ಕೋಟೆಯತ್ತ ನೋಡುವಾಗ, ಆ ಕಡೆಯಿಂದ—

'ಉಘೇ . . . ಉಘೇ . . . ವಿಷ್ಣುವರ್ಧನ ಮಹಾರಾಜ ಉಘೇ . . . ಉಘೇ' ಎಂಬ ಜಯಘೋಷವನ್ನು ಕೇಳಿ ಇದೇನು ಪವಾಡವೆಂದು ಚಕಿತರಾದರು. ಅವರ ಕಿವಿ ಕೇಳಿದ ಜಯಘೋಷವನ್ನು, ಎಚ್ಚೆತ್ತ ಹೊಯ್ಸಳ ಸೇನೆಯೂ ಕೇಳಿತ್ತು.

ಆ ಜಯಘೋಷದಿಂದ ಉತ್ತೇಜಿತವಾದ ಹೊಯ್ಸಳ ಸೇನೆಯೂ ಉತ್ಸಾಹದಿಂದ ಕೇಕೆ ಹಾಕಿತು. ಹೇಗಿದ್ದವರು ಹಾಗೇ, ಕೈಗೆ ಸಿಕ್ಕ ಶಸ್ತ್ರಗಳನ್ನು ಹಿಡಿದು, ಕೋಟೆಯತ್ತ ನುಗ್ಗಿದರು.

ಜೀವ ಉಳಿಸಿಕೊಳ್ಳಲೆಂದು ಕೋಟೆಯೊಳಗಿನಿಂದ ಹೊರಗೆ ಓಡಿಬಂದ ನೂರಾರು ಜನ ಚೋಳ ಸೈನಿಕರು, ಒಳನುಗ್ಗುವ ಸೇನೆಯ ಕುದುರೆ

ಗಳ ಕಾಲ ತುಳಿತಕ್ಕೆ ಸಿಕ್ಕು ಜೀವ ಕಳೆದುಕೊಂಡರು. ಸಾವಿರಾರು ಜನ, ಜೀವ ಉಳಿಸಿಕೊಳ್ಳಲು ಬೇರೆ ದಾರಿ ಕಾಣದೆ, ತುಂಬಿ ಹರಿಯುವ ಕಾವೇರಿಯ ಹೊಳೆಗೆ ಧುಮುಕಿ ತೇಲಿಹೋದರು.

ಪಾಳಯದತ್ತಣಿಂದ ನುಗ್ಗಿದ ಸೇನೆಯ ಅಗ್ರಭಾಗದಲ್ಲೇ ಕುದುರೆಯೇರಿಬಂದ ಗಂಗರಾಜರು, ಕೋಟೆಯೊಳಗೆ ಪ್ರವೇಶಿಸುವ ವೇಳೆಗೆ, ಚೋಳ ಸಾಮನ್ತ ದಾಮೋದರನ ಕತ್ತರಿಸಿದ ತಲೆಯನ್ನು, ಖಡ್ಗದ ತುದಿಯಲ್ಲಿ ತನ್ನ ಪರಾಕ್ರಮ ಪತಾಕೆಯಂತೆ ಹಿಡಿದ ವಿಷ್ಣುವರ್ಧನ ಅವರಿಗೆ ಕಾಣಿಸಿಕೊಂಡ.

‘ ಪ್ರಭೋ ’

—ಎಂದು ಕೂಗುತ್ತಾ ತನ್ನತ್ತ ಧಾವಿಸಿದ ಗಂಗರಾಜರನ್ನು ಕಂಡ ವಿಷ್ಣುವರ್ಧನ, ತನ್ನ ಕುದುರೆಯನ್ನು ಅವರತ್ತ ತಿರುಗಿಸಿ—

‘ ಜನನಾಥಪುರ ನಮ್ಮದಾಯಿತು ಗಂಗರಾಜರೇ, ಜನನಾಥಪುರ ನಮ್ಮದಾಯಿತು ’

—ಎಂದ ಉತ್ಸಾಹದಿಂದ, ಸಾಮಾನ್ಯ ಸೈನಿಕನಂತೆ ಕೇಕೆ ಹಾಕಿ.

ಆತನ ಉತ್ಸಾಹ, ಹರ್ಷವನ್ನು ಕಂಡು ಗಂಗರಾಜರಿಗೆ, ಸಂತೋಷದಿಂದ ಗಂಟಲು ಕಟ್ಟಿಹೋಯಿತು. ಕುದುರೆಯ ಮೇಲೆ ಕೂತಿದ್ದಂತೆಯೇ ದೊರೆಯನ್ನು ಆಲಿಂಗಿಸಿದರು.

ದೊರೆ, ದಂಡನಾಯಕ ಇಬ್ಬರ ಕಣ್ಣುಗಳಿಂದಲೂ ಹರ್ಷಾಶ್ರು ಧಾರೆಧಾರೆಯಾಗಿ ಉರುಳಿತು. ಆ ಹರ್ಷದ ನೆರೆ ಇಳಿದ ಬಳಿಕ ಈ ಅದ್ಭುತ ಹೇಗೆ ಸಾಧ್ಯವಾಯಿತೆಂಬುದನ್ನು ಕೇತಯನಾಯಕನಿಂದ ಅರಿತು ವೈಮರೆತರು ಗಂಗರಾಜರು.

ಜನನಾಥಪುರದ ಕೋಟೆಯನ್ನೇರಿ, ಹೊಳೆಯಾಚೆಯ ತಲಕಾಡನ್ನು ಬಯಕೆಗಣ್ಣುಗಳಿಂದ ದಿಟ್ಟಿಸಿ ನೋಡಿದ ಗಂಗರಾಜರು—

‘ ಅರ್ಧಸೀಮೆ ತಾಯಿಯವರ ಪ್ರೀತಿಗೆ ಸೋತಿತು ; ಜನನಾಥಪುರ ನಿಮ್ಮ ತೋಳಿಗಾಯಿತು. ಅದೊಂದನ್ನಾದರೂ ನಮ್ಮ ಪಾಲಿಗೆ ಬಿಡಿ. ನಾವು ಬಂದದ್ದು ಬರಡಾಗದಿರಲಿ ’

—ಎಂದು ತಲಕಾಡಿನತ್ತ ಕೈದೋರಿ, ವಿಷ್ಣುವರ್ಧನನನ್ನು ಬೇಡಿದರು.

' ಅದಿಯಮನ ತಲೆ ನಿಮ್ಮ ಮೀಸಲು ಎಡೆ ಎಂಬುದನ್ನು ನಾವು ಮರೆತಿಲ್ಲ ಪ್ರಧಾನರೇ. ಅದು ನಿಮ್ಮದೇ.'

—ಎಂದು ಆಶ್ವಾಸನವಿತ್ತ ವಿಷ್ಣುವರ್ಧನ.

' ನಿಮ್ಮನ್ನು ನಮ್ಮೊಂದಿಗೆ ಕರೆತಂದುದು ಕಡೆಗೂ ನಮ್ಮ ತಪ್ಪಾಯಿತು. ಅವಕಾಶ ಕೊಟ್ಟರೆ ನೀವು ತಲಕಾಡನ್ನೂ ನಮ್ಮ ಪಾಲಿಗೆ ಉಳಿಸುವುದಿಲ್ಲ.'

—ಎಂದು ಹೇಳಿದ ಗಂಗರಾಜರು, ಆ ಗಳಿಗೆಯಲ್ಲೇ ತಲಕಾಡಿನತ್ತ ನುಗ್ಗುವ ದಾರಿ ಏನೆಂದು ಯೋಚಿಸ ತೊಡಗಿದರು.

೧೫

# ಕನ್ನಡಿಗರ ಕಾವೇರಿ!

ಜನನಾಥಪುರ ಕೈವಶವಾಯಿತು!

ಹೊಯ್ಸಳರ ಸಮರಯಾತ್ರೆಯಲ್ಲಿ ಪ್ರಥಮ ಪ್ರಧಾನ ವಿಜಯವದು. ಆ ಗೆಲವು ಎಷ್ಟು ಸಂತೋಷದಾಯಕವಾಗಿತ್ತೋ, ಆ ಗೆಲವು ದೊರೆತ ಅನಿರೀಕ್ಷಿತ ರೀತಿ, ಆ ಹರ್ಷವನ್ನು ಹತ್ತು ಮಡಿ ಹಿಗ್ಗಿಸಿತ್ತು.

ಜನನಾಥಪುರದ ಬಲವಾದ ಕೋಟೆಯನ್ನು ಕೈವಶಮಾಡಿಕೊಳ್ಳಲು ಎಷ್ಟು ದಿನ ಬೇಕಾಗಬಹುದೊ, ಎಷ್ಟು ಜನರ ಬಲಿ ಕೊಡಬೇಕಾಗುವುದೊ ಎಂಬ ಚಿಂತೆಗೊಳಗಾಗಿದ್ದ ದಂಡನಾಯಕ ಗಂಗರಾಜರು, ಅದುವರೆಗೂ, ತಲವನಪುರದ ಮುತ್ತಿಗೆಯ ಬಗ್ಗೆ ಆಲೋಚಿಸಿರಲಿಲ್ಲ.

ಜನನಾಥಪುರದಲ್ಲಿ ದೊರೆತ ಅನಿರೀಕ್ಷಿತ ಯಶಸ್ಸು, ಈಗ ತಲವನಪುರದ ಮುತ್ತಿಗೆಯ ಸಮಸ್ಯೆಯನ್ನು ಅವರ ಕಣ್ಣುಮುಂದೆ ನಿಲ್ಲಿಸಿತ್ತು.

ರಾಜರಾಜಪುರವೆಂದು ನಾಮಾಂಕಿತವಾದ ತಲವನಪುರ—

ಕನ್ನಡನಾಡಿನ ಮೇಲೆ ದಾಸ್ಯದ ಕಲಂಕ ಹೇರಿದ ಚೋಳ ಆಳರಸುಗಳ ರಾಜಧಾನಿ.

ಯಾವುದರ ವಶದಿಂದ, ಗಂಗರಾಜರ ಬಾಳಿನ ಹೆಬ್ಬಯಕೆ ಸಫಲವಾಗಲಿತ್ತೊ-ಆ ಮಹಾನಗರಿ ತಲವನಪುರಿ—

ಯಾವ ಒಂದು ಗೆಲುವಿನಿಂದ, ಹೊಯ್ಸಳ ಚಕ್ರವರ್ತಿ ವಿಷ್ಣುವರ್ಧನ, ಮೃತ್ಯುಶಯ್ಯೆಯಲ್ಲಿದ್ದ ತನ್ನ ಸಹೋದರ ಬಲ್ಲಾಳರಾಯನಿಗಿತ್ತ ವಚನದ ಪ್ರಥಮಾರ್ಧ ಪೂರ್ಣವಾಗಲಿತ್ತೋ, ಆ ಸುಯೋಗವನ್ನು ಒದಗಿಸಿಕೊಡುವ ತಲಕಾಡು—

ಕೈ ಚಾಚಿದರೆ ಎಟಕುವುದೇನೋ ಎಂಬಷ್ಟು ಹತ್ತಿರವಾಗಿ, ಕಾವೇರಿಯ ಆಚೆಯ ದಡದಲ್ಲಿ ನಿಂತು, ಗಂಗರಾಜರತ್ತ ಕೈಬೀಸಿ ಕರೆಯುತ್ತ ನಿಂತಿತ್ತು.

ಜನನಾಥಪುರದ ಕೋಟೆಯ ಬತೇರಿಯೊಂದರ ಮೇಲೆ ನಿಂತು ನೋಡುತ್ತಿದ್ದ ಗಂಗರಾಜರ ಕಣ್ಣುಗಳಿಗೆ, ದಟ್ಟವಾಗಿ ಹಬ್ಬಿದ ನಟ್ಟಿರುಳಿನ ಕತ್ತಲಿನಲ್ಲೂ, ಅಸ್ಪಷ್ಟವಾಗಿ, ತಲವನಪುರದ ಕೋಟೆ ಕೊತ್ತಲುಗಳು, ಉನ್ನತ ಗೃಹಗಳು, ದೇವಾಲಯದ ಗೋಪುರಗಳು ಕಾಣಿಸುತ್ತಿದ್ದವು.

ಅದನ್ನು ನೋಡ ನೋಡುತ್ತಾ, ಅವರ ತೋಳಲ್ಲಿ ಉತ್ಸಾಹದ ನೆರೆ ತುಂಬಿ, ಆ ಉತ್ಸಾಹದಲ್ಲಿ, ಅರ್ಧಮೈಲಿ ಅಗಲದ ಕಾವೇರಿಯೂ ಕಿರು ಗಾಲುವೆಯಂತೆ ಕಂಡು, ಒಂದೇ ಹಾರಿಗೆ ಈ ದಡದಿಂದ ಆ ದಡಕ್ಕೆ ಹಾರಿ ತಲವನಪುರವನ್ನು ಪ್ರವೇಶಿಸಬಹುದು ಎನ್ನಿಸಿತು.

ತಲವನಪುರ ಅಷ್ಟು ಹತ್ತಿರ!

ಆದರೆ ಅದನ್ನು ತಲಪುವುದು ಅಷ್ಟು ಸುಲಭವೇ ?

ತಲವನಪುರವನ್ನು ಸೇರಲು ಎಷ್ಟು ಅಡ್ಡಿ ಆತಂಕಗಳಿದ್ದವೆಂಬ ವಿಷಯ ಅವರಿಗೆ ಚೆನ್ನಾಗಿ ತಿಳಿದಿತ್ತು.

ಅವರ ಮಾರ್ಗದಲ್ಲಿದ್ದ ಮೊದಲ ಅಡ್ಡಿ–ತುಂಬು ಪ್ರವಾಹದಿಂದ ಮೊರೆಯುತ್ತ ಹರಿಯುತ್ತಿದ್ದ ಕಾವೇರಿಯ ನದಿ. ಆ ನದಿಯನ್ನು ಅವರು ಸುಲಭವಾಗಿ ದಾಟಲು ಸಾಧ್ಯವಾಗದಂತೆ, ನದಿಯ ಪಾತ್ರ ಕಿರಿದಾಗಿದ್ದು, ಕಡವುಗಳಿದ್ದ ಎಡೆಗಳಲ್ಲಿ ಆದಿಯಮ, ಅಲ್ಲಿದ್ದ ದೋಣಿಗಳೆಲ್ಲವನ್ನೂ ನಾಶಪಡಿಸಿದುದೇ ಅಲ್ಲದೆ, ಆ ಕಡೆಗಳಿಂದ ನದಿಯನ್ನು ದಾಟಲೆತ್ನಿಸಿದ ಹೊಯ್ಸಳ ಸೇನೆಗೆ ಜಲಸಮಾಧಿ ಮಾಡಲು ಬೇಕಾದ ಸಿದ್ಧತೆಗಳನ್ನೆಲ್ಲಾ ಮಾಡಿದ್ದನೆಂಬುದು, ಜನನಾಥಪುರದ ಬಳಿ ಬರುತ್ತಿದ್ದ ಹಾಗೇ ಬೇಹುಗಾರರಿಂದ ಗಂಗರಾಜರಿಗೆ ತಿಳಿದಿತ್ತು.

ಆ ಬದಿಯಲ್ಲಿದ್ದ ದೋಣಿಗಳು ಹೊಯ್ಸಳರ ಕೈಗೆ ಸಿಗದಂತೆ ನಾಶಪಡಿಸಿದುದೇ ಅಲ್ಲದೆ, ಹೊಯ್ಸಳರಿಗೆ ನೆರವಾಗಬಹುದಾದ ಬೆಸ್ತರನ್ನು ಸೆರೆಹಿಡಿದು, ತಲವನಪುರದ ಕಾರಾಗೃಹದಲ್ಲಿ ತುಂಬಿದ್ದ ಆದಿಯಮ.

ಅಷ್ಟೇ ಅಲ್ಲ, ಬಹು ಪ್ರಯಾಸದಿಂದ, ಹೊಯ್ಸಳ ಸೇನೆ, ಕಾವೇರಿಯನ್ನು ದಾಟಲು ಬೇಕಾದ ತೆಪ್ಪ, ಹರಿಗೋಲುಗಳನ್ನು ಸಿದ್ಧಪಡಿಸಿಕೊಂಡು, ತಲವನಪುರದ ಕೋಟೆಯ ಬಳಿ ಸಮೀಪಿಸಿದರೂ, ಆ ದಂಡೆಯಲ್ಲಿ ಸೈನಿಕರು ಇಳಿಯದಂತೆ, ತೆಪ್ಪಗಳ ಮೇಲೆ ಕಲ್ಲು, ಗುಂಡುಗಳ ಮಳೆಗರೆದು, ಆ ದೋಣಿ

ಗಳನ್ನೂ, ಅದನ್ನು ನೆಚ್ಚಿದ ಸೈನಿಕರನ್ನೂ ನಾಶಗೊಳಿಸಲು ಅಗತ್ಯವಾದ ಸಿದ್ಧತೆಗಳನ್ನೆಲ್ಲಾ ಚೋಳರು ಮಾಡಿಕೊಂಡಿದ್ದಾರೆ ಎಂಬುದೂ ಗಂಗರಾಜರಿಗೆ ತಿಳಿದಿತ್ತು.

ಎಲ್ಲದಕ್ಕಿಂತಲೂ ಹೆಚ್ಚಾಗಿ, ಜನನಾಥಪುರ ತಮ್ಮ ಕೈವಶವಾದಷ್ಟು ಸುಲಭವಾಗಿ ತಲವನಪುರ ತಮಗೆ ವಶವಾಗುವುದಿಲ್ಲ; ವಿಧಿಹತವಾಗಿ ಬಹು ಅನಿರೀಕ್ಷಿತವಾಗಿ ಜನನಾಥಪುರ ಶತ್ರುವಶವಾದುದನ್ನು ಕಂಡ ಆದಿಯಮ, ತಲವನಪುರದ ರಕ್ಷಣೆಗೆ ಶತ ಪ್ರಯತ್ನಮಾಡಿ, ಕೊನೆಯ ಸೈನಿಕ ಇರುವ ವರೆಗೂ ಹೋರಾಡುವನೆಂಬುದೂ ಅವರಿಗೆ ಅರ್ಥವಾಗಿತ್ತು.

ಈ ಅಡ್ಡಿ ಆತಂಕಗಳ ಅರಿವಿದ್ದುದರಿಂದಲೇ, ಸಮರತಂತ್ರದಲ್ಲಿ ಅರಿತು-ನುರಿತ ಗಂಗರಾಜರಿಗೆ, ಜನನಾಥಪುರದ ಅನಿರೀಕ್ಷಿತ ಪತನದಿಂದ ಆದಿಯಮ ದಿಗ್ಭ್ರಾಂತನಾಗಿರುವಾಗಲೇ, ಆ ಆಘಾತದಿಂದ ಆತನ ಬುದ್ಧಿ ಚೇತರಿಸಿಕೊಂಡು ಮುಂದಿನ ಆಘಾತವನ್ನು ತಡೆಯಲು ಬೇಕಾದ ಪ್ರಯತ್ನಗಳತ್ತ ಚಿಂತಿಸುವ ಮುನ್ನವೇ, ತಾವು ದಾಳಿ ನಡೆಸಿದಲ್ಲಿ, ತಲವನಪುರದ ಮುತ್ತಿಗೆಯಲ್ಲೂ ಶೀಘ್ರ ವಿಜಯ ದೊರೆಯುವ ನಂಬಿಕೆ ಇತ್ತು.

ಅದರೊಂದಿಗೆ ಜನನಾಥಪುರದ ಗೆಲುವಿನ ಉತ್ಸಾಹ ಹೊಯ್ಸಳ ಸೈನಿಕರ ತೋಳುಗಳಲ್ಲಿ ತುಳುಕುತ್ತಿರುವಾಗಲೇ, ಅವರನ್ನು ಶತ್ರುಗಳಮೇಲೆ ನುಗ್ಗಿಸಿದರೆ, ಪರಾಕ್ರಮಕ್ಕಿಂತ ಇಮ್ಮಡಿಯಾಗಿ ಉತ್ಸಾಹವೇ ತಮ್ಮ ಗೆಲುವಿನ ದ್ವಾರವನ್ನು ತೆರೆಯುವುದು ಎಂಬುದೂ ಅವರಿಗೆ ತಿಳಿದಿತ್ತು.

ಶತ್ರುವಿನ ದಿಗ್ಭ್ರಾಂತಿ—ತಮ್ಮ ಸೈನಿಕರ ವಿಜಯೋತ್ಸಾಹ—

ಸಮರದಲ್ಲಿ ಗೆಲವು ತಮಗಾಗಲು ಇದಕ್ಕಿಂತ ಬೇರೇನು ಶುಭಸೂಚನೆಗಳು ಬೇಕು.

ಆದರೆ ಜನನಾಥಪುರ—ತಲವನಪುರಗಳ ನಡುವೆ ಹರಿಯುತ್ತಿದ್ದ ಕಾವೇರಿಯ ಪ್ರವಾಹ, ಆ ಎಲ್ಲ ಶುಭಸೂಚನೆಗಳನ್ನೂ ಅಣಕಿಸಿ ನಗುವಂತೆ ಭೋರ್ಗರಿಸಿ ಹರಿಯುತ್ತಿತ್ತು.

ಆ ನದಿಯೊಂದು ಇಲ್ಲವಾಗಿದ್ದರೆ—

ಆ ನದಿ ತಮ್ಮ ಸೈನಿಕರ ಚಲನೆಗೆ ಅಡ್ಡಿಯಾಗದಂತೆ, ಸೈನಿಕರ ತೋಳುಗಳಿಗೆ ರೆಕ್ಕೆತೊಡಿಸಿ, ಅವರು ಹಾರಿ, ತಲವನಪುರದ ಕೋಟೆಯಮೇಲೆ

ಇಳಿಯುವಂತೆ ಮಾಡುವುದು ಸಾಧ್ಯವಿದ್ದಿದ್ದರೆ—

ತಾವು ಪೂಜಿಸಿದ ದೇವರುಗಳಲ್ಲಿ ಯಾವುದಾದರೊಂದು ದೇವತೆಯ ಅನುಗ್ರಹವಾಗಿ, ವಸುದೇವ ಶಿಶು ಕೃಷ್ಣನನ್ನು ಗೋಕುಲಕ್ಕೆ ತರುವಾಗ ಯಮುನೆ ಇಬ್ಭಾಗವಾಗಿ ದಾರಿ ಬಿಟ್ಟಂತೆ, ಇಂದು ಕಾವೇರಿಯೂ ನಡುವೆ ಬತ್ತಿ ತಮಗೆ ದಾರಿ ನೀಡಿದರೆ—

ಹೀಗೇ ಕಾವೇರಿಯನ್ನು ದಾಟಿ, ಶೀಘ್ರವಾಗಿ ತಲವನಪುರವನ್ನು ಸೇರುವ ವಿಷಯದಲ್ಲಿ ನೂರಾರು ಚಿಂತೆಗಳು ಗಂಗರಾಜರ ಚಿತ್ತವನ್ನು ಕವಿದು ಅವರ ಹೃದಯದಲ್ಲಿ ವಿಜೃಂಭಿಸುತ್ತಿದ್ದ ಜನನಾಥಪುರದ ಗೆಲುವಿನ ಉತ್ಸಾಹ ವನ್ನು ಬತ್ತಿಸಿತು. ಆ ಚಿಂತೆಯಲ್ಲೇ, ಕತ್ತಲಿನಲ್ಲೂ, ತಣ್ಣಗೆ, ನಕ್ಷತ್ರಗಳ ಕಾಂತಿಯನ್ನು ಪ್ರತಿಬಿಂಬಿಸುತ್ತ ಹರಿಯುತ್ತಿದ್ದ ಹೊಳೆಯನ್ನು ನೋಡುತ್ತ ನಿಂತರು. ಆ ಹೊತ್ತಿನಲ್ಲಿ ಅವರ ಹೃದಯ, ತಮ್ಮ ಗೆಲುವಿನ ದಾರಿಗೆ ಅಡ್ಡ ವಾದ ಕಾವೇರಿಯನ್ನು ಪ್ರಾರ್ಥಿಸುತ್ತಿತ್ತು—

'ತಾಯಿ, ಕಾವೇರಿ, ನೀನೂ ನನ್ನಂತೆಯೇ ಕನ್ನಡನಾಡಿನ ಪುಣ್ಯ ಗರ್ಭದಲ್ಲುದಿಸಿದ ಕನ್ಯೆ. ಕನ್ನಡಿಗರು ನಿನ್ನನ್ನು ಗಂಗೆಗಿಂತಲೂ ಪವಿತ್ರಳಾದ ಪುಣ್ಯವಾಹಿನಿ ಎಂದು ಪೂಜಿಸುತ್ತಾರೆ. ನಿನ್ನ ಪವಿತ್ರವಾರಿಯ ಪೀಯೂಷವ ನ್ನೀಂಟಿ, ಕನ್ನಡ ಜನರ ಮೈ ಬೆಳೆದಿದೆ; ಅವರ ಬದುಕು ಅರಳಿದೆ. ನಿನ್ನ ಪುಣ್ಯ ತರಂಗಗಳ ಪವಿತ್ರ ಸ್ಪರ್ಶ, ಕನ್ನಡಿಗರ ಪಾಲಿಗೆ ನರಕವನ್ನು ಗೆದ್ದು, ಸ್ವರ್ಗ ದ್ವಾರವನ್ನು ತೆರೆಸಿದೆ. ಅಂಥ ಮಹಾತಾಯಿ, ಪರಮ ಕರುಣಾಮಯಿ ನೀನು. ಅಂಥ ನೀನೇ ಇಂದು ನಮಗೆ ಅಡ್ಡಿಯಾಗುತ್ತೀಯಾ ?

'ನಿನ್ನ ಮಕ್ಕಳ ಮೇಲೆ ಚೋಳರ ದಾಳಿ ನಡೆದಾಗ, ಅವರ ಪಾಶವೀ ಪಾದಗಳು ನಿನ್ನ ಕಂದರ ತಲೆಯನ್ನು ಮೆಟ್ಟಿದಾಗ, ಅವರ ಕೋಟಿ ಕೋಟಿ ಹೃದಯಗಳಿಂದ ಮೂಡಿದ ಆಕ್ರಂದನ ನಿನಗೆ ಕೇಳಿಸಿಲ್ಲವೇ ? ನೀನೂ ನಿನ್ನ ಮಕ್ಕಳನ್ನು ಮರೆತಿದ್ದೀಯಾ ? ನಿನ್ನ ಮಕ್ಕಳ ನೆತ್ತರಿನಿಂದ ನಿನ್ನ ಪವಿತ್ರ ಜಲವನ್ನು ಕಲಂಕಿತಗೊಳಿಸಿದ ಚೋಳರ ಪಕ್ಷಪಾತಿಯೇ ನೀನು ?

'ತಾಯೀ, ಕೋಟಿ ಕೋಟಿ ಕನ್ನಡಿಗರ ಬಿಡುಗಡೆಯ ಬಯಕೆ, ಕನ್ನಡಿಗರ ಭಾಷೆ, ಸಂಸ್ಕೃತಿ, ಧರ್ಮಗಳನ್ನು ವಿರೂಪಗೊಳಿಸಿದ ವಿದೇಶಿಯ ರನ್ನು ಮುರಿದು ಮುಕ್ಕುವ ಉತ್ಸಾಹ ಇಂದು ಹೊಯ್ಸಳ ಸೇನೆಯಾಗಿ, ನನ್ನ

ದೊರೆಯಾಗಿ, ನಾನಾಗಿ ಬಂದಿರುವುದು ನಿನಗೆ ತಿಳಿಯದೇ? ನಮ್ಮೆಲ್ಲರ ತಾಯಿ ನೀನು. ನೀನು ನಮ್ಮ ವಿರುದ್ಧ ಮುನಿದರೆ, ನೀನು ನಮ್ಮ ಶತ್ರು ಪಕ್ಷಪಾತಿಯಾದರೆ, ನೀನು ನಮ್ಮ ಕರೆಗೆ ಕಿವುಡಳಾದರೆ, ನೀನೇ ನಮ್ಮ ದುಃಖಕ್ಕೆ ಕುರುಡಳಾದರೆ—ನಿನ್ನ ಮಕ್ಕಳನ್ನು ಸಲಹುವವರು ಯಾರು?

'ನಿನಗೆ ತಿಳಿಯದೆ ತಾಯಿ—ನನ್ನ ಕೀರ್ತಿ, ಪ್ರತಿಷ್ಠೆಯನ್ನು ಬೆಳಿಸಲೆಂದು ನಾನೀಗ ದಂಡನಾಯಕನಾಗಿ ಬಂದಿಲ್ಲ; ತನ್ನ ರಾಜ್ಯ ವಿಸ್ತರಿಸಬೇಕೆಂಬ ಹುಲುಬಯಕೆಯಿಂದ ನನ್ನ ದೊರೆ ದಂಡೆತ್ತಿ ಬಂದಿಲ್ಲ. ನಿನ್ನ ಮಕ್ಕಳನ್ನು ಕವಿದಿರುವ ವಿದೇಶಿ ರಾಹುವನ್ನು ಹೊಡೆದಟ್ಟಬೇಕೆಂಬುದೊಂದೇ ನಮಗಿರುವ ಹೆಬ್ಬಯಕೆ.

'ಈ ಬಯಕೆಯನ್ನು ಎಷ್ಟು ಜನ ತಾಯಂದಿರು, ಮಡದಿಮಕ್ಕಳು, ಸೋದರಿಯರು ಹರಸಿದಾರೆ—ನಿನಗೆ ತಿಳಿಯದೆ? ಎಷ್ಟು ಜನ ಈ ಬಯಕೆಯನ್ನು ಸಫಲವಾಗಿಸಲು ತಮ್ಮ ಬದುಕನ್ನು ಧಾರೆ ಎರೆದಿದ್ದಾರೆಂಬುದು ನಿನಗೆ ಅರಿವಿಲ್ಲವೇ ತಾಯಿ? ಇಂದು ನೀನು ಮುನಿದು, ಆ ಎಲ್ಲ ತಾಯಂದಿರ ಹರಕೆಯನ್ನು, ಆ ಎಲ್ಲ ಜನರ ಬಲಿದಾನವನ್ನು, ಕೋಟಿ ಕೋಟಿ ಕನ್ನಡಿಗರ ಬಾಳ ಬಯಕೆಯನ್ನು ಬರಡು ಮಾಡುತ್ತೀಯಾ ತಾಯಿ?

'ಮುನಿಯಬೇಡ, ಕಾವೇರಿತಾಯಿ, ನಿನ್ನ ಕಂದರಲ್ಲಿ ಪ್ರಸನ್ನಳಾಗು.

'ದಾರಿ ಬಿಡು ತಾಯಿ, ನಿನ್ನ ತೋಳತೆಕ್ಕೆಯಲ್ಲಿ ನಮ್ಮನ್ನಿಟ್ಟು ಅತ್ತ ದಾಟಿಸು. ತಾಯಿ, ಕಾವೇರಿ, ಕರುಣಾಮಯಿ—ನನ್ನ ಮೊರೆ ಕೇಳು ಮಾತೆ—ಇಂದು ಕಿವುಡಳಾಗಬೇಡ.'

—ಹೀಗೆ ಗಂಗರಾಜರ ಹೃದಯ ಹಲುಬುತ್ತಿತ್ತು.

ನಕ್ಷತ್ರಕಾಂತಿಯನ್ನು ಬಿಂಬಿಸುತ್ತ ಕಾವೇರಿಯ ಹೊಳೆ ಹರಿಯುತ್ತಿತ್ತು.

ಅದನ್ನು ಕಂಡು ಗಂಗರಾಜರ ಕಣ್ಣುಗಳಿಂದಲೂ ಕಂಬನಿ ಹರಿಯಿತು.

ಗಂಗರಾಜರ ಹೃದಯ ಹೀಗೆ ಹಂಬಲಿಸಿ, ಕಾವೇರಿಯನ್ನು ಪ್ರಾರ್ಥಿಸುತ್ತಿರುವಾಗಲೇ, ಅವರ ಬೆಂಬದಿಯಲ್ಲಿ ಯಾರೊ,—

'ದಂಡನಾಯಕರೇ. . . .ದಂಡನಾಯಕರೇ. . . .'

—ಎಂದು ಕೂಗಿದುದು ಕೇಳಿಸಿ, ತಟಕ್ಕನೆ ಅತ್ತ ತಿರುಗಿ ನೋಡಿದರು.

ಗರುಡ ಬೋಕಿಮಯ್ಯ ಮತಿಭ್ರಾಂತನಾದವನಂತೆ ಕೂಗುತ್ತಾ, ಕೇಕೆ

ಹಾಕುತ್ತಾ ಅವರತ್ತ ಓಡಿಬರುತ್ತಿದ್ದ. ಅದನ್ನು ಕಂಡು ಗಂಗರಾಜರ ಹೃದಯದಲ್ಲಿ ಒಂದು ಕ್ಷಣಕಾಲ 'ಏನಾಯಿತೋ' ಎಂಬ ಭೀತಿ ಕವಿದು, ತಾವೂ ಅವನತ್ತಧಾವಿಸಿ—

'ಏನು . . . . ಏನು . . . . ಏನಾಯಿತು ?'

—ಎಂದು ಬೋಕಿಮಯ್ಯನ ತೋಳುಗಳನ್ನು ಹಿಡಿದು ಕುಲುಕಿ ಕೇಳಿದರು.

'ತಲಕಾಡು . . . . ತಲಕಾಡು . . . . ನಮ್ಮದೇ . . . . .'

—ಎಂದ ಬೋಕಿಮಯ್ಯ, ಉಸಿರು ಕಟ್ಟಿಸುವ ಉತ್ಸಾಹದಲ್ಲಿ ತೊದಲುತ್ತಾ.

'ಅಂದರೆ . . . . ಅಂದರೆ . . . . ಅದೇನದು ಬಿಡಿಸಿ ಹೇಳು ಬೋಕಿಮಯ್ಯ ?'

—ಬೋಕಿಮಯ್ಯನ ಮಾತು, ವರ್ತನೆ ಯಾವುದೂ ಅರ್ಥವಾಗದೆ ಕೇಳಿದರು ಗಂಗರಾಜರು.

'ತಲಕಾಡು ನಮ್ಮದು ದಂಡನಾಯಕರೇ—ನಮ್ಮದು.'

—ಎದೆ ತುಂಬಿದ ಉತ್ಸಾಹದಲ್ಲೇ ಬೀಗುತ್ತಾ ಹೇಳಿದ ಬೋಕಿಮಯ್ಯ.

ಆ ಮಾತುಗಳನ್ನು ಕೇಳಿ ಗಂಗರಾಜರಿಗೆ, ತಮ್ಮ ಕಣ್ಣುಗಳ ಎದುರಿಗೆ ಬಹು ಪ್ರಖರವಾದ ಮಿಂಚು ಕೋರೈಸಿದಂತಾಗಿ, ಮರುಗಳಿಗೆಯೇ ಅವರ ಹೃದಯದಲ್ಲಿ ಕತ್ತಲು ಕವಿದಂತಾಯಿತು. ಆ ಬಗೆಯ ಭಾವಾನುಭವದಿಂದ ಭಾರವಾದ ಧ್ವನಿಯಲ್ಲೇ—

'ಅಂದರೆ . . . . ಅಂದರೆ . . . . ಆ ಪುಣ್ಯವೂ ನಮ್ಮ ಪಾಲಿಗೆ ಇಲ್ಲವಾಯಿತೇ ? ನಾವಿಲ್ಲದೆಯೇ ತಲಕಾಡೂ ಉರುಳಿ, ನಾವು ತುಂಬಿದ ಸಭೆಯಲ್ಲಿ ಮಾಡಿದ ಭಾಷೆ ಬರಡಾಯಿತೇ ?'

—ಎಂದು ಕೇಳಿದರು.

ಅವರ ಮಾತಿನ ಜಡವಾದ ಧ್ವನಿಯನ್ನು ಕೇಳಿ, ಕಾದ ನೀರಿನಂತೆ ಪುಟಿಯುತ್ತಿದ್ದ ಬೋಕಿಮಯ್ಯನ ಉತ್ಸಾಹದ ಮೇಲೆ ತಣ್ಣೀರು ಎರಚಿದಂತಾಯಿತು. ಅವರ ಆ ಮಾತುಗಳ ಹಿಂಬದಿಯಲ್ಲಿ ಹುದುಗಿದ ಘೋರ ನಿರಾಶೆ ಅವನಿಗೆ ಅರ್ಥವಾಗಿ, ತನ್ನ ಉತ್ಸಾಹವನ್ನು ತಡೆಹಿಡಿದು ಹೇಳಿದ—

‘ ಊಹೂ . . . . ನನ್ನ ಮಾತಿನ ಅರ್ಥ ಹಾಗಲ್ಲ. ತಲಕಾಡು ಇನ್ನೂ ಉರುಳಲಿಲ್ಲ. ಆದರೆ ಉರುಳಲು ಬಹಳ ಹೊತ್ತು ಬೇಕಿಲ್ಲ.’

‘ ಅಂದರೆ . . . .’

‘ ಪ್ರಭುಗಳ ಜಾಣ್ಮೆಯಿಂದ ಜನನಾಥಪುರ ನಮ್ಮದಾದ ಬಳಿಕ, ‘ ಈ ತಲಕಾಡು ಇಷ್ಟು ಹತ್ತಿರ, ಈ ಹಾಳು ಹೊಳೆಯೊಂದು ನಡುವೆ ಇರದಿದ್ದರೆ, ಈ ದಿನವೇ ತಲಕಾಡನ್ನು ಹಿಡಿಯಬಹುದಿತ್ತಲ್ಲಾ ’ ಎಂದು ಯೋಚಿಸಿ, ಅದಕ್ಕೇನೂ ದಾರಿಯೇ ಇಲ್ಲವೇ ಎಂದು ಯೋಚಿಸುತ್ತಿದ್ದೆ. ನಾನು ಹಾಗೆ ಯೋಚಿಸುತ್ತಿರುವಾಗಲೇ, ನಮ್ಮ ಕಡೆಯ ಸೈನಿಕನೊಬ್ಬ ‘ ತಿಗುಳರು ಜೀವ ಉಳಿಸಿಕೊಂಡು ಓಡುವ ಅವಸರದಲ್ಲಿ, ತಾವು ತಮ್ಮೊಂದಿಗೆ ತಲವನಪುರದಿಂದ ತಂದಿದ್ದ ‘ ಬೆಟ್ಟದೆಪ್ಪ’ಗಳನ್ನು ನಾಶಗೊಳಿಸದೆ ಓಡಿಹೋಗಿದ್ದಾರೆ. ಬೇಕಾದರೆ ಈಗಲೇ ಹೊಳೆ ದಾಟಬಹುದು ಎಂಬ ಸುದ್ದಿಯನ್ನು ತಂದ. ಅದನ್ನು ಕೇಳಿ, ಆ ಸಂತೋಷವಾರ್ತೆಯನ್ನು ನಿಮಗೆ ತಿಳಿಸಲೆಂದು ಓಡಿಬಂದೆ ’

—ಎಂದು ತನ್ನ ಸಂತೋಷಕ್ಕೆ ಕಾರಣವನ್ನು ವಿವರಿಸಿದ ಬೋಕಿಮಯ್ಯ.

ಆ ಮಾತುಗಳನ್ನು ಕೇಳಿ ಗಂಗರಾಜರಿಗೆ, ಒಂದು ಗಳಿಗೆ ತಮ್ಮ ಕಿವಿಗಳನ್ನೇ ನಂಬುವುದೂ ಆಗಲಿಲ್ಲ. ಎರಡು ಮೂರು ಬಾರಿ, ‘ ಹೌದೇ, ಹೌದೇ ’ ಎಂದು ಕೇಳಿ, ತಾವು ಕೇಳಿದುದು ಸುಳ್ಳಲ್ಲ ಎಂದು ಖಚಿತಪಡಿಸಿಕೊಂಡರು. ಅವರ ಮನದಲ್ಲಿ ನಂಬಿಕೆ ಬೆಳೆಯುತ್ತಾ ಬೆಳೆಯುತ್ತಾ, ಅವರ ಹೃದಯದಲ್ಲಿ ಏನೋ ಒಂದು ಬಗೆಯ ಅನಿರ್ವಚನೀಯವಾದ ಆನಂದ ಮೂಡಿ, ಫಲಭಾರವಾದ ರೆಂಬೆ, ತನಗೆ ಆ ಭಾಗ್ಯವನ್ನು ನೀಡಿದ ಭೂಮಾತೆಯತ್ತ ಮಣಿಯುವಂತೆ, ಅವರ ಹೃದಯ ಭಾರವಾಗಿ ಬಾಗಿತು. ಆ ಅನಿರೀಕ್ಷಿತವಾದ ಆನಂದ ಮೂಡಿಸಿದ ಕಂಬನಿಗಳಿಂದ ಆರೆಗುರುಡಾದ ಕಣ್ಣುಗಳಲ್ಲೇ ಕಾವೇರಿಯತ್ತ ನೋಡಿ—

‘ ತಾಯೀ . . . ತಾಯೀ . . . ನಿನಗೆ ನನ್ನ ಪ್ರಾರ್ಥನೆ ಕೇಳಿಸಿತೇ ತಾಯೀ ? ನಿನ್ನ ಕೃಪೆಯ ಕಣ್ತೆರೆದು, ಕನ್ನಡಿಗರು ಕಾಲು ತೋಯಿಸಿಕೊಳ್ಳದಂತೆ ನಿನ್ನನ್ನು ದಾಟುವ ದಾರಿಯನ್ನು ತೋರಿಸಿದೆಯಾ ಮಹಾ

ತಾಯಿ. ಇಂದು—ಎಂದೆಂದೂ ಇದೇ ರೀತಿ ಕನ್ನಡಿಗರ ತಲೆಗಳಮೇಲೆ ನಿನ್ನ ಕೃಪೆಯ ಅಮೃತವರ್ಷ ಕರೆಯುತ್ತಿರು ತಾಯೀ. ಎಂದೆಂದೂ ಅವರಿಗೆ ನಿನ್ನ ಕರುಣೆಯ ವಜ್ರಕವಚದ ರಕ್ಷೆ ತಪ್ಪದಿರಲಿ '

—ಎಂದು ತಲೆಬಾಗಿ ಬೇಡಿ, ಬೋಕಿಮಯ್ಯನತ್ತ ತಿರುಗಿ—

' ಇಂದು ಕಾವೇರಿ ಕಣ್ಣು ತೆರೆದಳು ಬೋಕಿಮಯ್ಯ. ಇಷ್ಟು ದಿನ ಕನ್ನಡಿಗರ ವಿಷಯದಲ್ಲಿ ಏಕೋ ಮುನಿಸಿಕೊಂಡಿದ್ದ ತಾಯಿ ಕೃಪೆಯ ಕಣ್ಣು ತೆರೆದಳು. ಇಷ್ಟು ಹೊತ್ತೂ ಆಕೆಗೆ ಬೇಡಿಕೊಳ್ಳುತ್ತಿದ್ದೆ—ದಾರಿ ತೋರು ಎಂದು. ಆ ತಾಯಿಯ ಮೇಲೆ ಸಿಟ್ಟಾಗಿ, 'ನಿನಗೆ ಕಣ್ಣಿಲ್ಲವೇ ? ಹೃದಯ ವಿಲ್ಲವೇ' ಎಂದು ಬೈದೆ. ನಾನು ಮೂರ್ಖ, ಶತಮೂರ್ಖ; ಆಡಬಾರದು ದನ್ನೆಲ್ಲಾ ಆಡಿದೆ. ಆದರೆ ಅಷ್ಟಾದರೂ ತಾಯಿ ನಮ್ಮ ಕೈ ಬಿಡಲಿಲ್ಲ. ಕಾವೇರಿ ಕನ್ನಡಿಗರ ತಾಯಿ ಬೋಕಿಮಯ್ಯ. ಆಕೆಯೇ ಆ ತಿಗುಳರಿಗೆ ತೆಪ್ಪಗಳನ್ನು ನಾಶಮಾಡದಂತೆ ಅವರ ಬುದ್ಧಿಗೆ ಮಂಕು ಕವಿಸಿದಳು. ಅವರು ಆಕೆಯ ಹೃದಯವನ್ನು ದಿನದಿನವೂ ಸೀಳುತ್ತಿದ್ದ ಹುಟ್ಟುಗಳಿಂದಲೇ, ತೆಪ್ಪಗ ಳಿಂದಲೇ ಅವರು ನಾಶವಾಗುವಂತೆ ಮಾಡಿದಳು. ನಡೆ, ನಡೆ . . . ನಮ್ಮನ್ನು ಅನುಗ್ರಹಿಸಿದ ತಾಯಿಯನ್ನು ಪೂಜಿಸಿ ತಲಕಾಡಿನತ್ತ ನುಗ್ಗೋಣ. ಕಾವೇರಿ ತಾಯಿ ಇಂದು ಕನ್ನಡಿಗರನ್ನು ಗೆಲಿಸಿದಳು; ನನ್ನ ಮಾತನ್ನು ಉಳಿಸಿದಳು. ನಡೆ, ನಡೆ . . . ಈ ಸುದ್ದಿಯನ್ನು ಪ್ರಭುಗಳಿಗೆ ತಿಳಿಸೋಣ.'

—ಎಂದರು.

ಅವರು ಹೇಳಿದುದೆಲ್ಲವನ್ನೂ, ಬೆಕ್ಕಸಬೆರಗಾಗಿ, ನಡುವೆ ಏನೊಂದೂ ಆಡದೆ ಕೇಳಿದ ಬೋಕಿಮಯ್ಯನಿಗೂ ಅವರು ಆಡಿದುದು ಸತ್ಯವೆಂದೇ ತೋರಿ, ಆತನೂ—

' ನಿಜ, ನಿಜ, ಕಾವೇರಿ ಕನ್ನಡಿಗರ ತಾಯಿ '

—ಎಂದ.

ಕಾವೇರಿಯ ಬಗ್ಗೆ ತಮ್ಮ ಹೃದಯಗಳಲ್ಲಿ ಮೂಡಿದ ಕೃತಜ್ಞತಾಭಾವ ದಿಂದ ಇಬ್ಬರೂ ಅಷ್ಟು ಹೊತ್ತು ಮೂಕರಾಗಿ, ಮುಗಿಲಲ್ಲಿ ಮಿನುಗುವ ನಕ್ಷತ್ರ ಕಾಂತಿಯನ್ನು ಬಿಂಬಿಸಿ ಥಳಥಳಿಸುತ್ತಾ ಹರಿಯುವ ಹೊಳೆಯನ್ನು ನೋಡುತ್ತಾ ನಿಂತಿದ್ದರು. ಹಾಗೆ ನೋಡುತ್ತಿರುವಾಗ ಗಂಗರಾಜರಿಗೆ, ಕಾವೇರಿ ಮಾತೆ,

ತನ್ನ ತಣ್ಣನೆಯ ತೆರೆಕೈಗಳಿಂದ ತಮ್ಮ ಮಸ್ತಕವನ್ನು ನೇವರಿಸಿ ಹರಸಿದಂತೆ ಭಾಸವಾಯಿತು.

ಅವರು ಹಾಗೇ ನದಿಯನ್ನು ನೋಡುತ್ತ ನಿಂತಿರುವಾಗ, ನದಿಯ ಕಪ್ಪು ನೀರಿನಲ್ಲೂ ಮಸುಕಾಗಿ ಬಿಂಬಿಸಿದ ತಲವನಪುರದ ಕೋಟೆಗಳ ಪ್ರತಿಬಿಂಬ ಕಾಣಿಸಿ, ಗಂಗರಾಜರಿಗೆ ತಮ್ಮ ಮುಂದಿದ್ದ ಕರ್ತವ್ಯ ನೆನಪಾಗಿ—

'ನಡೆ ಬೋಕಿಮಯ್ಯ, ಮೊದಲು ಪ್ರಭುಗಳಿಗೆ ಈ ಆನಂದವಾರ್ತೆಯನ್ನು ತಿಳುಹಿ, ನಂತರ ದಾಳಿಯ ವ್ಯವಸ್ಥೆ ಮಾಡೋಣ'

—ಎಂದರು.

ಅವರ ಮಾತನ್ನು ಕೇಳಿ, ಬೋಕಿಮಯ್ಯನೂ ಮೈತಿಳಿದು—

'ಇಲ್ಲಿಗೆ ಬರುವ ಮೊದಲೇ ಈ ವಾರ್ತೆಯನ್ನು ಪ್ರಭುಗಳಿಗೆ ತಿಳಿಸಿ ಬಂದೆ.'

—ಎಂದು ಹೇಳಿದ.

'ಹೌದೇ ?'

'ನಿಜ, ಎಲ್ಲರಿಗೂ ಮೊದಲು, ಅವರಿಗೆ ಈ ವಿಷಯವನ್ನು ತಿಳಿಸಬೇಕಾದುದು ನನ್ನ ಕರ್ತವ್ಯವಾಗಿತ್ತು.'

'ಅದೂ ಸರಿಯೆ, ಆದರೆ . . . . ಆದರೆ . . . . .'

'ಏನು ?'

'ದೊರೆಗಳಿಗೆ ಈ ಸುದ್ದಿ ತಿಳಿದೂ . . . . . ನದಿಯಮೇಲೆ . . . . . ದೋಣಿಗಳು ಕಾಣುತ್ತಿಲ್ಲ . . . . ?'

—ಗಂಗರಾಜರು ಏನೋ ಸಂಶಯ ತುಂಬಿದ ನೋಟದಲ್ಲಿ ಹೊಳೆಯನ್ನು ದಿಟ್ಟಿಸಿ ನೋಡುತ್ತಾ ಕೇಳಿದರು.

ಗಂಗರಾಜರು ಆ ಮಾತುಗಳನ್ನಾಡಿದ ರೀತಿಯಲ್ಲೇ ಬೋಕಿಮಯ್ಯನಿಗೆ ಅವರ ಹೃದಯದ ಭಾವ ಅರಿವಾಗಿ—

'ಆದರೆ—ಈ ವಾರ್ತೆ ದೊರೆಗಳಿಗಲ್ಲದೆ, ಬೇರೆ ಯಾರಿಗೂ ತಿಳಿಯದು. ಅವರಿಗೆ ನಾನು ತಿಳಿಸಿದಾಗ 'ಮೊದಲು ಈ ವಾರ್ತೆಯನ್ನು ದಂಡನಾಯಕರಿಗೆ ತಿಳಿಸು. ಏನಿದ್ದರೂ ತಲಕಾಡಿನ ಸಮರಕ್ಕೆ ಗಂಗರಾಜರೇ ದಂಡನಾಯಕರು. ನಾವು ಅವರ ಸೈನಿಕರು ಮಾತ್ರ'.' ಎಂದರು.

—ಎಂದ ಬೋಕಿಮಯ್ಯ.

ಬೋಕಿಮಯ್ಯ ಹೇಳಿದುದನ್ನು ಕೇಳಿ ಗಂಗರಾಜರಿಗೆ, ಸ್ವಲ್ಪವೇಳೆಯ ಹಿಂದೆ ತಾವು ವಿಷ್ಣುವರ್ಧನನನ್ನು—'ತಲಕಾಡನ್ನಾದರೂ ನಮ್ಮ ಪಾಲಿಗೆ ಬಿಡಿ. ನಾವು ಬಂದದ್ದು ಬರಡಾಗದಿರಲಿ.'

—ಎಂದು ಬೇಡಿದಾಗ, ಆತ—

'ಅದಿಯಮನ ತಲೆ ನಿಮ್ಮ ಮೀಸಲು ಎಡೆ ಎಂಬುದನ್ನು ನಾವು ಮರೆತಿಲ್ಲ ಪ್ರಧಾನಿಗಳೇ. ಅದು ನಿಮ್ಮದೇ.'

—ಎಂದು ಹೇಳಿದುದು ನೆನಪಾಯಿತು.

ಯಾರು ಸತ್ತು ಗೆದ್ದರೂ, ಗೆಲವು ತಮ್ಮದೇ ಎಂದು ವಿಜಯಪ್ರಶಸ್ತಿ ಬರೆಸಿಕೊಳ್ಳುವ ದೊರೆಗಳನ್ನು ಕಂಡಿದ್ದ ಗಂಗರಾಜರಿಗೆ, ದೈವಾನುಗ್ರಹದಿಂದ ತಾವೇ ಸೇನೆಯನ್ನು ನಡೆಸಿ, ವಿಜಯವನ್ನು ಸಾಧಿಸಬಹುದಾದ ಹೊತ್ತಿನಲ್ಲೂ, ತಾನಿತ್ತ ವಚನವನ್ನು ನೆನೆದ ವಿಷ್ಣುವರ್ಧನನ ಮನಸ್ಸಿನ ಔದಾರ್ಯ ಅರಿವಾಗಿ, ಅವರ ಕಣ್ಣು ತೇವವಾಯಿತು. ಆ ಭಾವದಿಂದ ಬಿಗಿದ ಧ್ವನಿಯಲ್ಲಿ—

'ಇನ್ನು ಹತ್ತು ಜನ್ಮಕ್ಕೆ ಇಂಥ ಅರಸು ನನ್ನ ದೊರೆಯಾಗಬೇಕು ಬೋಕಿಮಯ್ಯ. ಇಂಥ ದೊರೆಯ ಸೇವೆಯಲ್ಲಿ ದೇಹ ಸವೆಸಿದರೆ, ದೇವರ ಪೂಜೆಗೆ ಗಂಧದ ಕೊರಡು ಸವೆದಷ್ಟು ಪುಣ್ಯ ಬರುತ್ತದೆ. ಬನ್ನಿ—ಆ ದೊರೆ ದೇವರ ಹರಕೆ ಪಡೆದು ಮುಂದಿನ ಕೆಲಸ ಮಾಡೋಣ.'

—ಎಂದರು, ವಿಷ್ಣುವರ್ಧನನಿದ್ದ ತಾವಿನತ್ತ ಹೆಜ್ಜೆ ಹಾಕಿ.

'ನಿಜ, ನಿಜ, ಈ ದೊರೆ ದೇವರೇ. ಅದಕ್ಕೇ ಅವರು ಬಯಸಿದುದೆಲ್ಲಾ ಹೂವೆತ್ತಿದಷ್ಟು ಹಗುರವಾಗಿ ಸಾಧ್ಯವಾಗುತ್ತದೆ.'

—ಎನ್ನುತ್ತ ಬೋಕಿಮಯ್ಯನೂ ಗಂಗರಾಜರನ್ನು ಹಿಂಬಾಲಿಸಿದ.

'ವಿಷ್ಣುವರ್ಧನನಂಥ ದೊರೆ, ಕಾವೇರಿಯಂಥ ತಾಯಿ ಇದ್ದರೆ, ತಲವನಪುರವೇನು, ಇಡೀ ಜಗತ್ತೂ ನಮ್ಮನ್ನು ಇದುರಿಸಲಾರದು. ಈ ಬಲದ ಮುಂದೆ ಚೋಳರು ಯಾವ ಗಿಡದ ತೊಪ್ಪಲು.'

—ಎಂದು ತಮಗೆ ತಾವೇ ಹೇಳಿಕೊಂಡರು, ಬೋಕಿಮಯ್ಯನ ಮಾತನ್ನು ಕೇಳಿದ ಗಂಗರಾಜರು.

## ೧೬

# ತಲಕಾಡಿನ ವಿಜಯ

ದೊರೆಯನ್ನು ಕಂಡು, ಆತನಿಂದ ದಾಳಿಮಾಡಲು ಅನುಮತಿಯನ್ನು—

'ಗೆದ್ದು ಬನ್ನಿ ದಂಡನಾಯಕರೇ. ಪರದೇಶೀಯರ ಬಂಧನದಿಂದ ಕನ್ನಡನಾಡನ್ನೂ, ಕನ್ನಡ ನುಡಿಯನ್ನೂ ಬಿಡಿಸಿದ ಕೀರ್ತಿ ನಿಮ್ಮದಾಗಿ, ನಿಮ್ಮ ಹೆಸರು ಧೃವತಾರೆಯಂತೆ, ಶಾಶ್ವತವಾಗಿ ರಾರಾಜಿಸಲಿ.'

—ಎಂಬ ಹರಕೆಯನ್ನು ಪಡೆದು—

'ಪ್ರಭೋ—ನಮ್ಮ ಕೀರ್ತಿ, ನಿಮ್ಮ ನಾಮ ಕುಸುಮದೊಂದಿಗೆ, ಕನ್ನಡ ತಾಯ ಮುಡಿಯನ್ನಲಂಕರಿಸುವ ನಾರಾಗಲಿ ಎಂಬುದೊಂದೇ ನಾವು ಬಯಸುವ ಭಾಗ್ಯ.'

—ಎಂದು ನುಡಿದು, ಗಂಗರಾಜರು ಸೇನೆಗಳಿಗೆ ತಲಕಾಡಿನ ಧಾಳಿಗೆ ಸಿದ್ಧರಾಗಲು ಅಪ್ಪಣೆಮಾಡಿ, ಮಿಂಚಿನ ವೇಗದಲ್ಲಿ ಸಿದ್ಧವಾದ ಸೇನೆಯೊಂದಿಗೆ, ಬೆಟ್ಟದೆಪ್ಪಗಳಿದ್ದ ಹೊಳೆ ಕರೆಗೆ ಧಾವಿಸಿದರು.

ಮೊದಲೇ ಜನನಾಥಪುರದ ಗೆಲುವಿನಿಂದ ಹರ್ಷೋನ್ಮತ್ತವಾದ ಹೊಯ್ಸಳ ಸೇನೆ, ತಲವನಪುರವನ್ನೂ ಆ ರಾತ್ರಿಯೇ ಗೆಲ್ಲುವ ಉತ್ಸಾಹದಿಂದ ಕೇಕೆ ಹಾಕತೊಡಗಿತು.

ಒಂದು ಗಳಿಗೆ ಗಂಗರಾಜರೂ ತಮ್ಮ ಸೈನಿಕರಂತೇ ಉತ್ಸಾಹದ ಕೇಕೆ ಹಾಕಿದರು.

ಬಹುದಿನ ದಾಸ್ಯಶೃಂಖಲೆಯಲ್ಲಿ ಸಿಲುಕಿ ನಿಟ್ಟುಸಿರುಗರೆಯುತ್ತಿದ್ದ, ತನ್ನ ಮಕ್ಕಳ ಗೆಲುವಿನ ಕೇಕೆಯನ್ನು ಕೇಳಿ, ಕಾವೇರಿಯ ಮೈ ಪುಲಕಿತವಾದಂತೆ, ನದಿಯ ತೆರೆಗಳು ಹೊಯ್ದಾಡಿದವು.

ಒಂದು ಗಳಿಗೆ, ಉಳಿದವರಂತೆಯೇ ಉತ್ಸಾಹದಲ್ಲಿ ಮೈಮರೆತ ಗಂಗ ರಾಜರಿಗೆ, ಮರುಗಳಿಗೆಯೇ ಉತ್ಸಾಹದ ಉನ್ಮತ್ತ ಪ್ರದರ್ಶನದಿಂದ, ತಾವೇ

ಶತ್ರುವಿಗೆ ತಮ್ಮ ದಾಳಿಯ ಮುನ್ಸೂಚನೆ ಕೊಡುತ್ತಿದ್ದೇವೆ ಎಂಬುದರ ಅರಿವಾಗಿ, ಕೂಡಲೇ ಆ ಕೇಕೆಯ ಸದ್ದನ್ನು ನಿಲ್ಲಿಸುವಂತೆ ಅಪ್ಪಣೆಮಾಡಿದುದಲ್ಲದೆ, ಸೈನಿಕರು ತಮ್ಮೊಂದಿಗೆ ಹೊತ್ತಿಸಿ ತಂದಿದ್ದ ಪಂಜುಗಳನ್ನು ಆರಿಸುವಂತೆ ಅಪ್ಪಣೆ ಮಾಡಿ—

'ಆದಷ್ಟು ಸದ್ದಾಗದಿರಲಿ. ನಾವು ತಲವನಪುರವನ್ನು ಸಮೀಪಿಸುವವರೆವಿಗೂ ಶತ್ರುವಿಗೆ ನಾವು ನುಗ್ಗುತ್ತಿರುವುದು ತಿಳಿಯದಿರಲಿ. ಎರಡು ಗಳಿಗೆ ತಡವಾದರೂ ಚಿಂತೆಯಿಲ್ಲ. ಹುಟ್ಟುಗಳಿಗೆ ತೈಲವನ್ನು ಲೇಪಿಸಿ. ನೀರು ಸೀಳುವ ಸದ್ದೂ ಆದಷ್ಟು ಕಡಿಮೆಯಾಗಲಿ. ತಲಕಾಡಿನ ಕೋಟೆಯನ್ನು ಪ್ರವೇಶಿಸುವವರೆಗೂ, ಎಲ್ಲ ಕಾರ್ಯವೂ ಕತ್ತಲಿನಲ್ಲೇ ನಡೆಯಲಿ. ಯಾರೂ ಪಂಜು ಹೊತ್ತಿಸಬಾರದು. ಕೊಂಚ ಸದ್ದಾದರೂ ನಮ್ಮ ಪ್ರಯತ್ನ ಅಸಫಲವಾಗಬಹುದು.'

—ಎಂದು ಅಪ್ಪಣೆ ಮಾಡಿದರು.

ಆ ಅಪ್ಪಣೆ ಕೇಳಿಬರುತ್ತಿದ್ದ ಹಾಗೇ ಸೇನೆಯಲ್ಲಿ ಮೌನ ವ್ಯಾಪಿಸಿ, ಮತ್ತೆ ಕತ್ತಲಾವರಿಸಿತು.

ಆ ಕತ್ತಲಿನಲ್ಲೇ, ಹೊಳೆಯ ಇದಿರು ಬದಿಯ ತಲವನಪುರದ ಕೋಟೆಯ ಗೋಡೆಯ ಮೇಲೆ ಎಲ್ಲಿಯಾದರೂ ಸೈನಿಕರ ಚಲನವಲನ ಕಂಡು ಬರುತ್ತದೆಯೇನೋ ಎಂದು ದಿಟ್ಟಿಸಿ ನೋಡಿದರು.

ಆದರೆ ತಲವನಪುರ ಕೃಷ್ಣಪಕ್ಷದ ಕತ್ತಲೆಯಲ್ಲಿ, ಹೆಪ್ಪುಗಟ್ಟಿದ ಕತ್ತಲ ಖಂದದಂತೆ ಅಚಲವಾಗಿ ನಿಂತಿತ್ತು. ಹೆಚ್ಚು ಜನ ಚಲಿಸುವ ಸುಳಿವಿರಲಿ, ಸಾಮಾನ್ಯವಾಗಿ ಕೋಟೆಯ ಮೇಲೆ ಸುತ್ತುವ ಕಾವಲುಗಾರರ ಚಲನೆಯ ಸುಳಿವೂ ಕಾಣದೆ, ಗಂಗರಾಜರ ಮನಸ್ಸಿನಲ್ಲಿ ಸಣ್ಣ ಸಂಶಯವೊಂದು ಸುಳಿಯಿತು :

'ಈ ತಿಗುಳರು ಸಾಮಾನ್ಯರಲ್ಲ ; ಮಹಾ ಮಾಯಾವಿಗಳು. ತಲವನಪುರಕ್ಕೂ ಜನನಾಥಪುರಕ್ಕೂ ಹೆಚ್ಚು ದೂರವಿಲ್ಲ. ಹೊಳೆಯೊಂದೇ ನಡುವೆ ಇರುವುದು. ಇರುಳಿನ ನಿಶ್ಶಬ್ದತೆಯಲ್ಲಿ, ಇಲ್ಲಿಂದ ಕೂಗು ಹಾಕಿದರೂ ಅಲ್ಲಿಗೆ ಕೇಳಬೇಕು. ಹೀಗಿರುವಾಗ—ಜನನಾಥಪುರದಲ್ಲಿ ಮೂರುನಾಲ್ಕು ಕ್ರೋಶ ದೂರಕ್ಕೂ ಕೇಳುವಷ್ಟು ಗದ್ದಲವಾಗಿವೆ. ಹರಿದಾರಿ ದೂರಕ್ಕೂ ಕಾಣುವಂಥ

ಉರಿ ಹೊತ್ತಿದೆ. ಆದರೆ ಇವಾವುದೂ ಕಂಡು ಕೇಳದಂಥ ವೈಮರೆವು ಈ ದಿನ ಅವರಿಗೆ ವ್ಯಾಪಿಸಿದೆಯೇ ? ಅದೂ ಜನನಾಥಪುರದಮೇಲೆ ನಮ್ಮ ದಾಳಿ ನಡೆಯುತ್ತಿದೆಯೆಂದು ತಿಳಿದ ಸಮಯದಲ್ಲೂ, ಯಾರಾದರೂ ಹೀಗೆ ವೈಮರೆತು ಕೂಡುವುದು ಸಾಧ್ಯವೇ ? ಅದು ಅಸಂಭವ.

'ಹಾಗಿದ್ದರೆ ಈ ಮೌನ, ಕಾವಲುಗಾರರ ಸುಳಿವೂ ಇಲ್ಲದಿರುವುದಕ್ಕೆ ಏನು ಕಾರಣವಿರಬಹುದು.

'ನಾವು ಉತ್ಸಾಹದಲ್ಲಿ ತೆಪ್ಪಗಳಲ್ಲಿ ನದಿಯನ್ನು ದಾಟಲು ಯತ್ನಿಸಿದಾಗ ಕತ್ತಲಿನಲ್ಲಿ ನಮ್ಮ ಜಲಸಮಾಧಿ ಮಾಡುವುದು ಸುಲಭವೆಂದು ಲೆಕ್ಕಹಾಕಿ, ನಮ್ಮನ್ನು ಮೋಸಗೊಳಿಸುವ ಸಲುವಾಗಿ, ಈ ಮೌನದ ಸಂಚು ಹೂಡಿರಬಹುದೇ ?

'ಹಾಗಿದ್ದರೆ ಈಗ ನಾವು ನದಿಯನ್ನು ದಾಟಲೆತ್ನಿಸಿದರೆ, ನಮ್ಮ ಸಾವನ್ನು ನಾವೇ ಆಹ್ವಾನಿಸಿದಂತಾಗುವುದಿಲ್ಲವೇ ?

'ಹಾಗಿದ್ದರೆ ಈಗೇನು ಮಾಡುವುದು ?'

'ಈಗ ಸಿದ್ಧಗೊಳಿಸಿದ ದಾಳಿಯನ್ನು ನಿಲ್ಲಿಸಿ, ತಾನಾಗಿ ಒದಗಿಬಂದ ಸುಯೋಗವನ್ನು ಕಳೆದುಕೊಳ್ಳುವುದೇ ? ಸಂಶಯಕ್ಕೆ ಹೆದರಿ ಹಿಂಜರಿಯುವುದೇ ? ಅಥವಾ ದೈವೇಚ್ಛೆ ಇದ್ದಂತಾಗಲಿ ಎಂದು ಮುಂದೆ ನುಗ್ಗುವುದೇ ?'

ಈ ಸಂದೇಹದ ಸುಳಿಯಲ್ಲಿ ಸಿಲುಕಿ ಗಂಗರಾಜರು, ಸಿದ್ಧವಾದ ಸೇನೆಗೆ ಮುಂದುವರಿಯಲೂ ಅಪ್ಪಣೆ ಮಾಡಲಾಗದೆ ಯೋಚಿಸುತ್ತಾ ನಿಂತರು.

ಅಷ್ಟು ಹೊತ್ತು ಯೋಚಿಸಿದ ಬಳಿಕ ಏನೋ ಒಂದು ಆಲೋಚನೆ ಹೊಳೆದು, ತಮ್ಮ ಬದಿಯಲ್ಲಿದ್ದ ಬೋಕಿಮಯ್ಯನಿಗೆ—

'ಜನನಾಥಪುರದಲ್ಲಿ, ಹೊಳೆಯ ಆಚೆಯ ಬದಿಯ ಕೋಟೆಯ ರಚನೆ ಹೇಗೆ ಏನೆಂಬ ವಿಷಯಗಳು ತಿಳಿದವರು ಯಾರಾದರೂ ಇದ್ದರೆ ಕರೆತಾ.'

—ಎಂದು ಹೇಳಿದರು.

ಅವರ ಅಪ್ಪಣೆಯಂತೆ ವಿಚಾರಿಸಲು ಹೋದ ಬೋಕಿಮಯ್ಯ ಕೆಲವೇ ಗಳಿಗೆಗಳಲ್ಲಿ ಹತ್ತಾರು ಜನರೊಂದಿಗೆ ಹಿಂದಿರುಗಿದ.

ಬೋಕಿಮಯ್ಯನೊಂದಿಗೆ ಬಂದವರು, ಜನನಾಥಪುರದ ನಿವಾಸಿಗಳು. ಅವರು ಗಂಗರಾಜರ ಪ್ರಶ್ನೆಗೆ ಉತ್ತರವಾಗಿ—

'ನಾವು ದೋಣಿ ನಡೆಸುವ ಪರಿವಾರದ ಜನ. ನಮಗೆ ಆ ಕಡೆಯ ಕೋಟೆಯ ವಿಷಯವೆಲ್ಲಾ ಗೊತ್ತು. ನಿಮಗೆ ಏನು ಬೇಕಾದರೂ ಹೇಳ ಬಲ್ಲೆವು.'

—ಎಂದರು.

ತಮಗೆ ಬೇಕಾದ ವಿಷಯ ತಿಳಿಸಲು ಅವರು ಅಷ್ಟು ಬೇಗ ಸಿದ್ಧರಾದುದನ್ನು ಕಂಡೂ ಗಂಗರಾಜರಿಗೆ ಸಂಶಯವಾಗಿ—

'ನಿಮ್ಮನ್ನು ನಾವು ನಂಬಬಹುದೇ ?'

—ಎಂದು ಕೇಳಿದರು.

ಅದಕ್ಕೆ ಉತ್ತರವಾಗಿ, ಬೋಕಿಮಯ್ಯನೊಂದಿಗೆ ಬಂದ ಪರಿವಾರ ಕುಲದ ಮುಖ್ಯಸ್ಥನೊಬ್ಬ—

'ಬುದ್ಧಿ, ನಾವೂ ಕನ್ನಡ ಆಡೋ ಜನ. ಅಡಪಡ ಅನ್ನೋ ತಿಗುಳರಲ್ಲ. ನಾವೂ ಸದ್ಯ ನಮ್ಮ ಸೀಮೆಯಿಂದ ಈ ಶನಿಗಳನ್ನು ತೊಲಗಿಸೊ ಪುಣ್ಯಾತ್ಮರು ಯಾರಾದರೂ ಹುಟ್ಟಿಯಾರೇ ಅಂತ ಹಾರೈಸುತ್ತಿದ್ದೆವು. ಅದಕ್ಕೇ ನಿಮ್ಮ ಸೇನೆ, ನಮ್ಮ ಕೋಟೆ ಹಿಡಿದಾಗ, ಈ ಚೋಳ ಕಳ್ಳರು, ಈ ದೋಣಿಗಳನ್ನು ಮುಳುಗಿಸದ ಹಾಗೆ ನಾವೇ ದೋಣಿಗಳಿಗೆ ಕಾವಲಿದ್ದವರನ್ನು ಕೊಂದುಹಾಕಿ, ನಿಮ್ಮವರಿಗೆ ಈ ದೋಣಿಗಳಿವೆ ಅಂತ ಸುದ್ದಿ ಕೊಟ್ಟೆವು. ಹಾಗಿರೋವಾಗ ನಾವೇ ನಂಬಿಸಿ, ನಮ್ಮವರ ಕುತ್ತಿಗೆ ಕೊಯ್ಯುತ್ತೇವೆಯೇ ? ತಾವು ನಮ್ಮಲ್ಲಿ ಅನುಮಾನಪಟ್ಟರೆ ಅದು ಅನುಮಾನವಲ್ಲ, ನಮಗೆ, ನಮ್ಮ ಕುಲಕ್ಕೆ, ನಮ್ಮ ತಾಯಿ ಗಂಗೆಗೆ ಅಪಮಾನ. ಹಾಗೂ ನಿಮಗೆ ನಮ್ಮಲ್ಲಿ ಅನುಮಾನವಾದರೆ ಹೇಳಿ—ನಾವೇ ಮೊದಲು ದೋಣಿ ನಡೆಸಿಕೊಂಡು ಹೋಗುತ್ತೇವೆ. ನೀವು ಅಷ್ಟು ದೂರ ನಮ್ಮ ಹಿಂದೆ ಬನ್ನಿ. ಅದರ ಫಲ ಏನಿದ್ದರೂ ನಮಗೇ ಇರಲಿ.'

—ಎಂದು ತಾನೇ ಸೇನೆಯನ್ನು ನಡೆಸುವ ಹೊಣೆ ಹೊತ್ತು ಹೇಳಿದ. ಆತನ ಮಾತನ್ನು ಕೇಳಿ ಗಂಗರಾಜರಿಗೆ ಅವನನ್ನು ನಂಬಬಹುದು ಎಂದು ತೋರಿ—

'ಆಯಿತು—ನಿಮ್ಮನ್ನು ನಂಬುತ್ತೇವೆ. ದಾರಿ ತೋರಿಸಿ.'

—ಎಂದು ಅವನಿಗೆ ಹೇಳಿ, ಗಂಗರಾಜರು ಸೇನೆಯ ಮುಖ್ಯಸ್ಥರನ್ನು

ತಮ್ಮ ಬಳಿಗೆ ಕರೆಸಿಕೊಂಡು, ಸೇನೆ ಹೇಗೆ, ಯಾವ ಕ್ರಮದಲ್ಲಿ ಹೊಳೆಯನ್ನು ದಾಟಬೇಕು ಎಂಬುದನ್ನು ವಿವರಿಸಿ,—

‘ನದಿಯನ್ನು ದಾಟಿದ ಸೇನೆಗಳು ಸದ್ದುಮಾಡದೆ, ಇದಿರು ದಂಡೆಯಲ್ಲಿ ಕಲೆಯಬೇಕು. ಈ ದಾಳಿಗೆ ಗೊತ್ತಾದ ಸೇನೆಯೆಲ್ಲವೂ ಸುರಕ್ಷಿತವಾಗಿ ನದಿಯನ್ನು ದಾಟಿದ ಬಳಿಕ, ನಾವು ಅಪ್ಪಣೆ ಮಾಡಿದಂತೆ ದಾಳಿಯನ್ನು ಆರಂಭಿಸಬೇಕು.’

—ಎಂದು ಅಪ್ಪಣೆ ಮಾಡಿದರು.

ಅವರ ಅಪ್ಪಣೆಯಂತೆ ಸೇನೆ ನದಿಯನ್ನು ದಾಟಲು ಸಿದ್ಧವಾಯಿತು.

ಆದಷ್ಟು ಬೇಗ ತಲಕಾಡಿನ ತೀರವನ್ನು ಸೇರಬೇಕೆಂಬ ಉತ್ಸಾಹದಿಂದ, ಉಕ್ಕಿನ ತೋಳಿನ ಸೈನಿಕರು, ತಮ್ಮ ತೋಳುಗಳಿಗೆ ರೆಕ್ಕೆ ಬಂದಂತೆ ವೇಗ ವಾಗಿ ಹುಟ್ಟುಗಳನ್ನು ಮೀಟಿ ಬೆಟ್ಟದೆಪ್ಪಗಳನ್ನು ನಡೆಸಿದರು.

ಕನ್ನಡಿಗರಾದ, ದೋಣಿಗಳನ್ನು ನಡೆಸುವ ಪರಿವಾರದ ಜನವೂ ಉತ್ಸಾಹ ದಿಂದ ಹೊಯ್ಸಳ ಸೇನೆಗೆ ನೆರವಾದರು.

ಚೋಳ ಬಲವನ್ನು ತುಳಿಯುವ ಮದ್ದಾನೆಗಳಂತೆ ಬೆಟ್ಟದೆಪ್ಪಗಳು ತೋರಿದವು.

ತೆಪ್ಪಗಳಲ್ಲಿ ಎಡೆ ದೊರೆತವರು, ಅದರಲ್ಲಿ ಕುಳಿತರೆ, ಎಷ್ಟೋ ಜನ ಸಾಹಸಿಗಳು ಈಜಿಯೇ ಬರುತ್ತೇವೆಂದು ತುಂಬು ಹೊಳೆಯಲ್ಲಿ ಧುಮುಕಿದರು. ಎಷ್ಟೋ ಜನ ಎದೆಗಾರರು ಚೋಳ ಸೈನಿಕರ ಹೆಣಗಳನ್ನು ಹೊಳೆ ನೀರಿನಲ್ಲಿ ಹಾಕಿ, ತೇಲುವ ಶವಗಳನ್ನೇ ಹಿಡಿದು ಹೊಳೆಯನ್ನು ದಾಟಿದರು.

ಉಳಿದವರು ಜನನಾಥಪುರದವರಿಂದ ಹೊಳೆಯ ನೀರಿನ ಆಳ ಎಲ್ಲಿ ಕಡಮೆಯೆಂದು ತಿಳಿದುಕೊಂಡು, ಆನೆಗಳನ್ನು ದಾಟಿಸಬಹುದಾದ ಕಡೆಗಳಲ್ಲಿ ಅವನ್ನು ದಾಟಿಸಿದರು.

ಒಮ್ಮೆ ತಲಕಾಡಿನ ಬಳಿ ತಲುಪಿದ ತೆಪ್ಪಗಳು, ಅಲ್ಲಿ ಸೈನಿಕರನ್ನಿಳಿಸಿ, ಮತ್ತೆ ಹಿಂದಿರುಗಿ—ಹೀಗೇ ಹತ್ತಾರು ಬಾರಿ ಸೈನಿಕರನ್ನು, ಹಗುರವಾದ ರಥಗಳನ್ನು, ಅಸ್ತ್ರಗಳನ್ನು ಸಾಗಿಸಿದರು.

ತಮಗೆ ನೆರವಾದ ಜನನಾಥಪುರದ ಬೆಸ್ತ ಜನರಿಂದ ತಲಕಾಡಿನ ಹೊಳೆ ಬದಿಯ ಕೋಟೆಯ ವಿವರಗಳನ್ನು ಅರಿತುಕೊಂಡ ಗಂಗರಾಜರು, ಅವರು

ತಿಳುಹಿಸಿದ ನಾಲ್ಕಾರು ಎಡೆಗಳಲ್ಲಿ ಉಚಿತವಾದುದನ್ನು ಆರಿಸಿ, ಆ ಕಡೆ ಸೇನೆಯನ್ನು ನಡೆಯಿಸಿದರು.

ಹೊಯ್ಸಳ ಸೇನೆ ತಲಕಾಡಿನ ಮೇಲೆ ದಾಳಿ ಮಾಡುವ ವೇಳೆಗೆ, ತಲಕಾಡಿನ ನಗರದಲ್ಲೂ ಕೋಲಾಹಲವಾಗಿತ್ತು.

ಅದಿಯಮ ಏನಾದರೂ ಜನನಾಥಪುರ ಒಂದು ವಾರದ ಕಾಲವಾದರೂ, ಹೊಯ್ಸಳರ ದಾಳಿಯನ್ನು ತಡೆಯಬಹುದೆಂದೂ, ಒಂದುವೇಳೆ ಆ ಕೋಟೆ ಉರುಳಿದರೂ, ಕಾವೇರಿಯ ಪ್ರವಾಹ ತನಗೆ ಒಂದೆರಡು ದಿನ ರಕ್ಷಣೆ ನೀಡಬಹುದೆಂದೂ ನಂಬಿದ್ದ.

ಆದರೆ ಆ ನಂಬಿಕೆ ಭರವಸೆಗಳೆಲ್ಲವೂ, ಜನನಾಥಪುರದಲ್ಲಿ ಹಬ್ಬಿದ ಬೆಂಕಿಯಲ್ಲಿ ಭಸ್ಮವಾಗಿ, ಒಂದೇದಿನದಲ್ಲಿ, ಜನನಾಥಪುರ ಉರುಳಿ, ಹೊಯ್ಸಳ ಸೇನೆ, ಆ ದಿನವೇ ತಲಕಾಡಿನ ಮೇಲೆ ನುಗ್ಗಿದುದನ್ನು ಕಂಡು, ಅದಿಯಮ ದಿಗ್ಭ್ರಾಂತನಾಗಿದ್ದ.

ಜನನಾಥಪುರದ ಬೆಂಕಿಯನ್ನು ನೋಡಿದ ತಲಕಾಡಿನ ಜನವೂ 'ಹೊಯ್ಸಳರ ಪಡೆಯಲ್ಲಿ ಕೊಳ್ಳಿಯ ದೆವ್ವಗಳ ಪಡೆಯೇ ಇರಬೇಕು. ಇಲ್ಲವಾದರೆ ಆ ಕಲ್ಲಿನ ಕೋಟೆಯನ್ನು ಕರ್ಪೂರದ ಹಾಗೆ ಉರಿಸಿ, ವಶಮಾಡಿಕೊಳ್ಳುವುದು ಸಾಧ್ಯವೇ ?' ಎಂದು ಕಥೆಕಟ್ಟಿ, ತಾನು ಕಟ್ಟಿದ ಕಥೆಗೆ ತಾನೇ ಹೆದರಿ, 'ಆ ಭೂತ ಪಡೆಯ ಮುಂದೆ ಅದಿಯಮ ಏನು ರಕ್ಷಣೆ ನೀಡಿಯಾನು' ಎಂದು, ದಿಕ್ಕಾಪಾಲಾಗಿ ಓಡತೊಡಗಿದ್ದರು.

ಒಬ್ಬೊಬ್ಬರಿಗೂ ಈ ಅನಿರೀಕ್ಷಿತ ದಾಳಿಯ ಹೊತ್ತಿನಲ್ಲಿ ತಮ್ಮ ಜೀವ ಉಳಿಸಿಕೊಳ್ಳುವುದು ಹೇಗೆಂಬ ಚಿಂತೆಯೇ ಹಿರಿದಾಗಿ, ಕೆಲವರು ತಮ್ಮ ಧನ ಕನಕಗಳನ್ನು ರಕ್ಷಿಸಿಕೊಳ್ಳುವ ಆತುರದಲ್ಲಿ ಕಳ್ಳದಾರಿಗಳನ್ನು ತೆರೆದು, ಹೊಯ್ಸಳ ಸೇನೆಗೆ ಅನುಕೂಲ ಮಾಡಿಕೊಟ್ಟರು.

ಹೀಗಾಗಿ ಹೊಯ್ಸಳ ಸೇನೆ, ಹೆಚ್ಚು ಶ್ರಮವಿಲ್ಲದೆ ತಲಕಾಡನ್ನು ಪ್ರವೇಶಿಸುವುದು ಸಾಧ್ಯವಾಯಿತು.

ಮೊದಲೇ ಜನನಾಥಪುರದಲ್ಲಾದ ಅನಿರೀಕ್ಷಿತ ಗೆಲುವಿನಿಂದ ಉತ್ಸಾಹಿತರಾದ ಹೊಯ್ಸಳ ಸೈನಿಕರು, ತಲಕಾಡು ಪ್ರವೇಶವೂ ಸುಲಭವಾದುದನ್ನು ಕಂಡು, ದೈವವೇ ತಮಗೆ ಬೆಂಬಲವಾಗಿದೆಯೆಂದು ನಂಬಿ, ನೂರ್ಮಡಿ ಉತ್ಸಾಹ

ದಿಂದ, ಇದಿರಾದ ಚೋಳ ಬಲವನ್ನು ಸದೆಯತೊಡಗಿದರು.

ಹಗಲಿನ ಕೆಂಬೆಳಕು ಮುಗಿಲಿನಲ್ಲಿ ಹರಡುವ ಹೊತ್ತಿಗೆ, ತಲಕಾಡಿನ ಬೀದಿ ಬೀದಿಯಲ್ಲೂ ರಕ್ತದ ಹೊಳೆ ಹರಿಯಿತು.

ಉಳಿದ ಸೈನಿಕರಿಗೆ ನಗರವನ್ನು ವಶಪಡಿಸಿಕೊಳ್ಳುವುದನ್ನು ಒಪ್ಪಿಸಿದ ಗಂಗರಾಜರು, ಆರಿಸಿದ ಆಳುಗಳೊಂದಿಗೆ, ಇದಿರಾದವರನ್ನು ಕೊಚ್ಚಿ ಕೆಡ ಹುತ್ತಾ ತಮ್ಮ ಬೇಟೆಯಾದ ಅದಿಯಮನನ್ನು ಹುಡುಕಿಕೊಂಡು ಅಲೆಯ ತೊಡಗಿದರು. ಅವರ ತೋಳುಗಳಿಗೆ ಆ ದಿನ ದೈತ್ಯಬಲ ಬಂದಂತಿತ್ತು. ಅವರ ಪ್ರಚಂಡ ಕ್ರೋಧದ ಇದಿರು, ಇದಿರಾದ ಸೇನೆ ಮಂಜಿನಂತೆ ಕರಗಿತು.

ನಖಶಿಖಾಂತವಾಗಿ, ಚೋಳ ರಕ್ತಸ್ನಾನ ಮಾಡಿದ ಗಂಗರಾಜರು, ಅದಿಯಮನನ್ನು ಅರಸುತ್ತಾ ಅವನು ಅವಿತಿದ್ದ ಅರಮನೆಗೇ ನುಗ್ಗಿದರು.

ನಗರವನ್ನು ಉಳಿಸುವುದಾಗದಿದ್ದರೆ ಹೋಗಲಿ, ತಮ್ಮ ಪ್ರಭುವಿನ ತಲೆಯನ್ನಾದರೂ ಉಳಿಸಬೇಕು ಎಂಬ ಹಟದಿಂದ ಅರಮನೆಯನ್ನು ಕಾಯುತ್ತಿದ್ದ ಚೋಳಪಡೆ, ಗಂಗರಾಜರನ್ನು ಎದುರಿಸಿತು. ಆದರೆ ಗಂಗ ರಾಜರ ಹಿಂದೆ ಬಂದ ಪಡೆಯವರ ಪೌರುಷದ ಇದಿರು, ಚೋಳ ಸೈನಿಕರು ಬೆಂಕಿಯನ್ನು ಮುತ್ತಲೆತ್ನಿಸಿದ ಪತಂಗಗಳಾದರು.

ಚೋಳರ ಬಯಕೆ ಮುರಿದು ಬಿದ್ದಂತೆ ಅರಮನೆಯ ಹೆಬ್ಬಾಗಿಲು ಮುರಿದು ಬಿತ್ತು.

'ಅದಿಯಮಾ, ಕುನ್ನಿ, ಎಲ್ಲಿ ಅಡಗಿದ್ದೀಯೆ ಹೇಡಿ?'

—ಎಂದು ತನ್ನ ಹೆಸರು ಹಿಡಿದು, ಅರಮನೆಯ ಗೋಡೆಗಳೂ ನಡು ಗುವಂತೆ ಅಬ್ಬರಿಸುತ್ತಾ, ಬಿರುಗಾಳಿಯಂತೆ ನುಗ್ಗಿದ ಗಂಗರಾಜರನ್ನು ಕಂಡ ಅದಿಯಮ, ಸಮೀಪಕ್ಕೆ ಸಾರುತ್ತಿರುವ ಮೃತ್ಯುವನ್ನು ಕಂಡಂತೆ ಬೆದರಿ, ಹೇಗಾದರೂ ಜೀವ ಉಳಿಸಿಕೊಳ್ಳಬೇಕೆಂದು ಕೋಣೆಯಿಂದ ಕೋಣೆಗೆ ಓಡತೊಡಗಿದ.

ಅಂತಃಪುರದ ರಾಜಸ್ತ್ರೀಯರು, ದಾಸದಾಸಿಯರು, ಭಯದಿಂದ ಬೆದರಿ ಚೀತ್ಕರಿಸಿದರು. ಅದಿಯಮನ ಮಡದಿಯರು ಗಂಗರಾಜನ ಕಾಲಿಗೆ ಬಿದ್ದು ಪತಿಯನ್ನುಳಿಸುವಂತೆ ಬೇಡಿದರು. ತಮ್ಮ ಓಲೆ ಕಂಕಣಗಳನ್ನು ತೆಗೆದು

ಅವರ ಪಾದದ ಬಳಿ ಇಟ್ಟರು. 'ನಮ್ಮನ್ನು ಕೊಂದು ಸಿಟ್ಟು ತೀರಿಸಿ ಕೊಳ್ಳಿ' ಎಂದು ಅವರ ಕಾಲಿಗೆರಗಿದರು.

ಕ್ರೋಧದಿಂದ ಕುರುಡಾಗಿ, ಪ್ರತೀಕಾರ ತೃಷೆಯಿಂದ ಹುಚ್ಚಾಗಿದ್ದ ಗಂಗರಾಜರಿಗೂ, ಆ ಹೆಣ್ಣುಗಳ ಹಾಹಾಕಾರವನ್ನು ಕೇಳಿ ಎದೆಗರಗಿತು.

'ತಾಯಿ, ನಿಮಗಿಂದು ಅವನ ಜೀವದಾನ ಮಾಡಿದ್ದೇನೆ. ಹೆಣ್ಣಿನ ಕಣ್ಣೀರು ನಮಗೆ ಗಂಗಾಜಲದಷ್ಟು ಪವಿತ್ರ. ಅದು ಎಂದೂ ನಮ್ಮಿದಿರು ವ್ಯರ್ಥವಾಗುವುದಿಲ್ಲ.'

—ಎಂದು ನುಡಿದು, ಅಂತಃಪುರದ ಶಯ್ಯಾಗಾರದಲ್ಲಿ, ಹೆಣ್ಣುಗಳ ಹಿಂದೆ, ಭಯದಿಂದ ಹಲ್ಲುಗಿರಿಯುತ್ತಾ ಹುದುಗಿದ ಅದಿಯಮನನ್ನು, ಜುಟ್ಟು ಹಿಡಿದು, ಹೊರಗೆಳೆದು ಅವನ ತಲೆಯ ಮೇಲೆ ತಮ್ಮ ಪಾದವನ್ನಿಟ್ಟು—

'ಹೆಂಗಸರ ಹಿಂದೆ ಅವಿತು ಬದುಕುವ ಹೇಡಿ, ನಮ್ಮ ಪಾದಲಾಂಛನ ಹೊತ್ತು ಬದುಕು'

—ಎಂದು, ಭೂತದರ್ಶನವಾದಂತೆ ಗಡಗಡ ನಡುಗುತ್ತಿದ್ದ ಅದಿಯಮನನ್ನು ಅವನ ಹೆಂಡಿರತ್ತ ದೂಡಿದರು. ಅವರು ದೂಡಿದ ರಭಸಕ್ಕೆ ನಿಲ್ಲಲಾಗದೆ, ತನ್ನ ಹೆಂಡಿರ ಕಾಲಡಿಯಲ್ಲೇ ಬಿದ್ದು ಹೊರಳಿದ ಅದಿಯಮ.

ಅವನೊಂದಿಗೆ ತಲಕಾಡಿನ ಕೋಟೆಯ ಮೇಲೆ ಹಾರಾಡುತ್ತಿದ್ದ ಚೋಳಧ್ವಜವೂ ಉರುಳಿ, ಹೊಯ್ಸಳ ಪತಾಕೆ ಹೆಮ್ಮೆಯಿಂದ ಹಾರಿತು.

# ೧೭

# ಕೀರ್ತಿನಾರಾಯಣ

ಶಕವರ್ಷ ಸಾವಿರದ ಮೂವತ್ತೊಂಬತ್ತನೆಯ ಹೇವಿಳಂಬಿ ಸಂವತ್ಸರದ ಪುಷ್ಯಮಾಸದ ಪಾಡ್ಯಮಿ ಸೋಮವಾರ.

ರಾಜಧಾನಿ ತಲವನಪುರದ ಸಹಸ್ರಾರು ವರ್ಷದ ಬಾಳಿನಲ್ಲಿ, ಹಿಂದೆಂದೂ ಕಾಣದ, ಮುಂದೆ ಎಂದೆಂದೂ ಮರೆಯಲಾಗದಂಥ ದಿವ್ಯ ದಿನ.

ಅಂದು—

ಗಂಗವಾಡಿಯ ಕನ್ನಡಿಗರ ಬಿಡುಗಡೆಯ ಹಬ್ಬ !

ಸರಿಸುಮಾರು ಒಂದುನೂರು ಹದಿನೈದು ವರ್ಷಗಳ ಹಿಂದೆ, ಚೋಳ ಚಕ್ರವರ್ತಿ ರಾಜರಾಜನಕಾಲ ತುಳಿತಕ್ಕೆ ಸಿಲುಕಿ, ತನ್ನ ನೆತ್ತಿಯಮೇಲೆ ಆತನ ವ್ಯಾಘ್ರಲಾಂಛನದ ಕಲಂಕವನ್ನು ಹೊತ್ತು, ಒಂದು ಶತಮಾನ ಕಾಲ ನಿಟ್ಟುಸಿರುಗರೆಯುತ್ತಾ ಬಾಳಿದ ಗಂಗವಾಡಿ ಇಂದು ಮುಕ್ತನಾಗಿ ತನ್ನ ಹೆಸರಿಗೆ ಹತ್ತಿದ 'ರಾಜೇಂದ್ರ ಒಳನಾಟ್ಟು' ಎಂಬ ಅಪರ ನಾಮಧೇಯದ ಅಪಮಾನವನ್ನು ಕಳೆದುಕೊಂಡು ಮತ್ತೆ ಗಂಗವಾಡಿಯಾಗಿದೆ.

'ಅಡೇ' ಎಂದು ತಾತ್ಸಾರವಾಗಿ ಕರೆಯುತ್ತಿದ್ದವರ ಆಳ್ವಿಕೆ ತೊಲಗಿ, ಮತ್ತೆ ವಿಶ್ವಾಸದಿಂದ 'ಅಣ್ಣಾ' ಎಂದು ಕರೆಯುವ ತಮ್ಮವರೇ, ಹಿಂದಿನ ಗಂಗದೊರೆಗಳ ಸಂತತಿಯವರೇ ತಮ್ಮ ಅರಸುಗಳಾಗಿದ್ದಾರೆ.

ಇಂದು, ಆ ದೊರೆಯ—

ಕನ್ನಡಿಗರ ಕೀರ್ತಿ ಪತಾಕೆ ಮುಗಿಲತಾರೆಗಳೊಂದಿಗೆ ಸರಸವಾಡುವಂತೆ ಮಾಡಿದ ಕನ್ನಡ ಕುವರ, ವೀರ ವಿಷ್ಣುವರ್ಧನನ ಮೊದಲ ಓಲಗದ ದಿನ—

ಇನ್ನೂ ಅದಕ್ಕಿಂತ ಹೆಚ್ಚಿನ ಹರ್ಷ ಬೇಕೇ ? ಅದಕ್ಕಿಂತ ದೊಡ್ಡ ಹಬ್ಬ ಉಂಟೆ ? ಬಿಡುಗಡೆಯ ಹಬ್ಬದ ದಿನಕ್ಕಿಂತ ಹಿರಿದಾದ, ಪವಿತ್ರವಾದ ಪರ್ವ ದಿನ ಬೇರೊಂದುಂಟೆ ?

ಗಜಾರಣ್ಯಕ್ಷೇತ್ರವೆಂದು ಪುರಾಣಕಾಲದಿಂದಲೂ ಪ್ರಸಿದ್ಧವಾದ ತಲವನಪುರದಲ್ಲಿ, ಹನ್ನೆರಡು ವರ್ಷಗಳಿಗೊಮ್ಮೆ ಪಂಚಲಿಂಗದರ್ಶನದ ಜಾತ್ರೆಯಾಗುತ್ತದೆ. ಆ ದಿನ, ಲಕ್ಷ ಲಕ್ಷ ಜನ, ಕಾವೇರಿಯ ಪುಣ್ಯವಾರಿಯಲ್ಲಿ ಮಿಂದು, ತಮಗೆ ಅಕ್ಷಯ ಪುಣ್ಯಪ್ರಾಪ್ತಿಯಾಗಲೆಂದು ದೇವತಾದರ್ಶನ ಮಾಡುತ್ತಾರೆ.

ಆದರೆ ಈ ದಿನ ಜನಕ್ಕೆ ಅನಿಸುತ್ತಿದೆ—

ಒಂದು ಶತಮಾನದ ಬಳಿಕ, ತಮಗೆ ಬಿಡುಗಡೆಯನ್ನು ತಂದುಕೊಟ್ಟ ಕನ್ನಡಮಾತೆಯ ಧೀರ ಕುವರರ ದರ್ಶನ ಮಾಡುವುದು, ಅದಕ್ಕಿಂತಲೂ ಪವಿತ್ರವಾದ ದರ್ಶನವೆಂದು.

ಎಂತಲೇ ಲಕ್ಷ ಜನರ ನಿವಾಸವಾದ ತಲವನಪುರಿಯಲ್ಲಿಂದು ದಶ ಲಕ್ಷಕ್ಕೂ ಮಿಕ್ಕ ಜನ ಕಲೆತಿದೆ. ಕಾವೇರಿಯ ಮಳಲ ದಂಡೆ, ನಗರದ ಸಮೀಪದ ಕೆರೆ, ಕೊಳಗಳ ಬಳಿಯ ತೋಪುಗಳು, ನೂರಾರು ಹಳ್ಳಿಗಳಿಂದ ಬಂದ ಬಂಡಿಗಳಿಂದ ಕಿಕ್ಕಿರಿದಿದೆ. ಬಿಡುಗಡೆಯ ಉತ್ಸಾಹದಿಂದ ಉಬ್ಬಿದ ಜನ ಹಾರುತ್ತ, ಕುಣಿಯುತ್ತ, ಕೋಲು ಹುಯ್ಯುತ್ತ, ತಮಗೆ ಬಿಡುಗಡೆಯನ್ನು ತಂದಿತ್ತ ದೊರೆಯನ್ನು, ಆತನ ದಂಡನಾಯಕ ಗಂಗರಾಜರನ್ನು ಹರಸಿ, ಹೊಗಳುತ್ತಿದ್ದಾರೆ. ಅವರ ಗೆಲುವನ್ನು ಪವಾಡವೆಂಬಂತೆ ಬಣ್ಣಿಸಿ, ಕಥೆ ಕಟ್ಟಿ ತಮಗೆ ತಾವೇ ಹೇಳಿಕೊಳ್ಳುತ್ತಿದ್ದಾರೆ.

ಒಬ್ಬ—

'ನಿನಗೆ ತಿಳಿಯದೇ. ಆ ರಾತ್ರಿ ಗಂಗರಾಜರು ತುಂಬಿ ಹರಿಯುವ ಕಾವೇರಿಯನ್ನು ಪ್ರಾರ್ಥಿಸಿದಾಗ, ಕಾವೇರಿ ತಾಯಿ, ಆ ಧರ್ಮಾತ್ಮನ ಗೆಲುವಿನ ದಾರಿಯಲ್ಲಿ ಅಡ್ಡವಾಗಿ ನಿಲ್ಲದೆ, ತಾನೇ ಸರಿದು ದಾರಿಮಾಡಿಕೊಟ್ಟಳಂತೆ. ಅಂಥ ದೈವಬಲವಿಲ್ಲದಿದ್ದರೆ, ನೂರು ವರ್ಷಕಾಲ ಬೇರು ಬಿಟ್ಟು ಬಲಿತ ಈ ಚೋಳರ ಸೊಕ್ಕು ಒಂದೇ ರಾತ್ರಿಯಲ್ಲಿ ಮುರಿಯುತ್ತಿತ್ತೆ ?'

—ಎಂದು ಗಂಗರಾಜರ ಧರ್ಮ ಧೀರತೆಯನ್ನು ಹೊಗಳಿದರೆ, ಮತ್ತೊಬ್ಬ—

'ಇನ್ನೊಂದು ಸುದ್ದಿ ನಿನಗೆ ತಿಳಿಯದೆ—ನಮ್ಮ ಸೈನಿಕರು ಆ ದಿನ ಚೋಳ ಸೈನಿಕರನ್ನು ಕೊಚ್ಚಿ ಕೆಡಹಿ ಕಾವೇರಿಗೆ ತಳ್ಳಿದರಲ್ಲಾ, ಅದರ ಫಲ ಏನಾಯಿತಂತೆ ಗೊತ್ತೇ ? ಈ ಚೋಳರಿಗೆ ಕುಡಿಯಲು ಕಾವೇರಿಯ ನೀರೇ

ಗತಿಯಿಲ್ಲ. ತಮ್ಮವರ ಹೆಣ ತೇಲಿಬಂದ ಈ ಕಾವೇರಿಯ ನೀರನ್ನು ಕುಡಿಯ ಲಾಗದೆ, ರಾಜೇಂದ್ರ ಚೋಳ, ಈಗ ಕುಡಿಯುವ ನೀರಿಗೆ ಬೇರೆ ಭಾವಿ ತೋಡಿಸುತ್ತಿದ್ದಾನಂತೆ.'

—ಎಂದು ಕನ್ನಡಿಗರು ತಲಕಾಡನ್ನು ಹಿಡಿದ ರಾತ್ರಿ, ಅಲ್ಲಿ ನಡೆದ ಕಗ್ಗೊಲೆಯನ್ನು ಪರ್ಯಾಯವಾಗಿ ಬಣ್ಣಿಸಿದ.

ಹೀಗೇ ಬಗೆ ಬಗೆಯ ಕಥೆಗಳು, ನೂರು ರೀತಿಯ ಬಣ್ಣನೆಗಳು—ಲಕ್ಷ ನಾಲಗೆಗಳ ಹಂದರಗಳಮೇಲೆ, ಬಗೆ ಬಗೆಯ ಬಣ್ಣನೆಯ ಹೂವರಳಿಸಿ ಹಬ್ಬಿತ್ತು, ಹೊಯ್ಸಳರ ಕೀರ್ತಿಲತೆ.

ಆದರೆ ಹೀಗೇ ಹೊಗಳುವವರ ಮಧ್ಯೆ ಅಸಮಾಧಾನದ ಮಾತನಾಡು ವವರೂ ಒಬ್ಬಿಬ್ಬರು ಇಲ್ಲದೆ ಹೋಗಲಿಲ್ಲ. ಅವರ ಅಸಮಾಧಾನಕ್ಕೆ ಕಾರಣ ಹೀಗೆ :

'ಆದದ್ದು ಎಲ್ಲಾ ಸರಿಯೆ. ತ್ರಯೋದಶಿಯ ರಾತ್ರಿ ತಾನೇ ಅದಿ ಯಮನ ಪರಾಜಯವಾದದ್ದು. ಆದಿನ ನಾವೆಲ್ಲಾ, ಆ ಚೋಳ ರಾಜರಾಜ ತನ್ನ ಗಂಗವಾಡಿಯ ಗೆಲುವಿನ ಗುರುತಾಗಿ ಕಟ್ಟಿಸಿದ ರಾಜರಾಜೇಶ್ವರಾಲಯ ವನ್ನು ಸುಟ್ಟು, ಅದರ ಉರಿಯಲ್ಲೇ ಇಲ್ಲಿರುವ ಚೋಳರನ್ನೆಲ್ಲಾ ಹಾಕಿ, ಬೇಯಿಸಿ ಬಿಡಬೇಕು ಎಂದು ಮಾಡಿದ್ದೆವು. ಆದರೆ ಈ ಪುಣ್ಯಾತ್ಮ ನಮಗೆ ಅದಕ್ಕೆ ಅವಕಾಶವನ್ನೇ ಕೊಡಲಿಲ್ಲ. ಹಗಲು ಹರಿಯುತ್ತಿದ್ದ ಹಾಗೇ, ನಮ್ಮ ಸೈನಿಕರೇ ಆ ದೇವಾಲಯಕ್ಕೆ, ಈ ನಗರದಲ್ಲಿರುವ ಚೋಳದೇಶದ ಜನರ ಮನೆಗಳಿಗೆ ಕಾವಲು ನಿಂತು ಉಳಿಸಿದರು. ಎಲ್ಲಿಯಾದರೂ ಇಂಥ ಅನ್ಯಾಯ ಉಂಟೇ ? ಅವರೇ ಕೊಲ್ಲಬೇಕಾದವರನ್ನು, ನಾವೇ ಕೊಲ್ಲುತ್ತಿದ್ದರೆ ತಡೆಯ ಬಹುದೆ ? ಅದೇಕೆ ಹಾಗೆ ಮಾಡಿದರೋ ; ಅವಕಾಶ ದೊರೆತರೆ, ದೊರೆಗ ಳನ್ನೋ, ದಂಡನಾಯಕರನ್ನೋ ಕೇಳಬೇಕು.'

ಆದರೆ ಆ ಅಸಮಾಧಾನದ ಭಾವನೆಯೂ, ಆ ಜನವೂ, ಸಂತೋಷ ದಿಂದ ಬೀಗಲು ಅಡ್ಡಿಯಾಗಲಿಲ್ಲ. ಅವರ ಕಣ್ಣುಗಳೂ ವಿಷ್ಣುವರ್ಧನನನ್ನು ಕಾಣಲು ಕಾತರಿಸುತ್ತಿದ್ದವು.

ಆ ದಿನ ತಲವನಪುರದಲ್ಲಿ ಕಿಕ್ಕಿರಿದ ಜನತೆಯ ಹೃದಯದಲ್ಲಿ ಮಿಡಿ ಯುತ್ತಿದ್ದ ರಾಜದರ್ಶನಾಕಾಂಕ್ಷೆಯನ್ನು ಅರಿತ ಗಂಗರಾಜರು, 'ಸಭೆಗೆ

ಬರಬೇಕೆನಿಸಿದವರೆಲ್ಲರೂ ಬರಲಿ; ಬಂದವರು ಯಾರಿಗೂ ಸಭೆಯಲ್ಲಿ ಎಡೆ ಇಲ್ಲದೆ ನಿರಾಶೆಯಾಗದಿರಲಿ' ಎಂಬ ಉದ್ದೇಶದಿಂದ, ಅರಮನೆಯಲ್ಲಿ ಓಲಗ ವನ್ನು ನೆರೆಯಿಸದೆ, ಅದಕ್ಕಾಗಿಯೇ ವಿಶಾಲವಾದ ಬಯಲಿನಲ್ಲಿ ಪ್ರತ್ಯೇಕವಾದ ಚಪ್ಪರವನ್ನು ನಿರ್ಮಿಸಿದ್ದರು.

ಇಂದ್ರನ ಓಲಗದಂತೆ ವೈಭವೋಪೇತವಾಗಿ ನಿರ್ಮಿತವಾದ ಓಲಗದ ಚಪ್ಪರದ ನಡುವೆ, ನಕ್ಷತ್ರಕಾಂತಿಯಿಂದ ನಿರ್ಮಿತವಾದಂತೆ ಥಳಥಳಿಸುತ್ತಿದ್ದ, ಶ್ವೇತಚ್ಛತ್ರಾಲಂಕೃತವಾದ ಮಿಸುನಿಯ ಸಿಂಹಪೀಠ ವಿರಾಜಮಾನವಾಗಿತ್ತು. ಗಳಿಗೆಗೊಮ್ಮೆ 'ಉಘೇ, ಉಘೇ' ಎಂದು ನೆಲ ಅದುರುವಂತೆ, ಮುಗಿಲು ಬಿರಿಯುವಂತೆ ಕೂಗುತ್ತಿದ್ದ ಜನತೆಯ ಕಣ್ಣೆಲ್ಲವೂ ಬರಿದಾದ ಆ ಸಿಂಹಾಸನ ದತ್ತಲೇ ನೋಡುತ್ತಿತ್ತು.

ಓಲಗಕ್ಕೆಂದು ಪುರೋಹಿತರು ಗೊತ್ತುಮಾಡಿದ ಶುಭಮುಹೂರ್ತಕ್ಕೆ ಸರಿಯಾಗಿ, ನೂರಾರು ಕಹಳೆ, ಭೇರಿಗಳು ಮೊರೆದು, ಓಲಗಸಾಲೆಗೆ ದೊರೆ ಆಗಮಿಸುತ್ತಿದ್ದಾನೆಂಬ ಹರ್ಷವಾರ್ತೆಯನ್ನು ಸಾರಿದುವು.

ಪುರಜನರ ಪುಷ್ಪವೃಷ್ಟಿಯಿಂದ ಮುಚ್ಚಿಹೋದ, ಹತ್ತು ಶ್ವೇತಾಶ್ವ ಗಳನ್ನು ಹೂಡಿದ ಹೊನ್ನರಥದಲ್ಲಿ, ಕಿರುನಗೆ ಮಿನುಗಿಸುತ್ತಾ ಕುಳಿತು, ಓಲಗ ಸಾಲೆಗೆ ಬಿಜಯಮಾಡಿದ ವಿಷ್ಣುವರ್ಧನನ ಧೀರ ಪುರುಷಾಕಾರವನ್ನು ಕಂಡು, ನೋಡಿದ ಜನ, 'ದೇವರು ನಮಗೆ ಕಣ್ಣು ಕೊಟ್ಟದ್ದು ಸಾರ್ಥಕ ವಾಯಿತು' ಎಂದುಕೊಂಡರೆ, ವಂದಿಮಾಗಧರಿಂದ—

'ಸ್ವಸ್ತಿ ಸಮಧಿಗತ ಪಂಚಮಹಾಶಬ್ದ, ಮಹಾಮಂಡಲೇಶ್ವರ, ದ್ವಾರಾ ವತೀ ಪುರವರಾಧೀಶ್ವರ, ಯದುವಂಶಾಂಬರದ್ಯುಮಣಿ, ಸಮ್ಯಕ್ತ್ವ ಚೂಡಾ ಮಣಿ, ಮಲೆಪರೊಳ್‌ಗಂಡ, **ತಲಕಾಡುಗೊಂಡ** ಭುಜಬಲಗಂಗ ಶ್ರೀಮತು ತ್ರಿಭುವನಮಲ್ಲ ವಿಷ್ಣುವರ್ಧನ ಹೊಯ್ಸಳೇಶ್ವರ'

—ಎಂದು ಪರಾಕು ಹೇಳಿಸಿಕೊಳ್ಳುತ್ತಾ, ಸಿಂಹಾಸನವನ್ನೇರಿದ ದೊರೆ ಯನ್ನು ಕಂಡು, ಗಂಗರಾಜರ ಕಣ್ಣಲ್ಲಿ ಹರ್ಷಾಶ್ರು ತುಂಬಿತು. ಆ ಆನಂದೋ ದ್ರೇಕದಿಂದ ಕಂಪಿಸುತ್ತಿದ್ದ ಕೈಗಳಿಂದ, ಚೋಳ ವಿಜಯದ ಕುರುಹಾಗಿ, ವಿಷ್ಣುವರ್ಧನನಿಗೆ, ಆದಿಯಮನ ರಾಜಮುಕುಟ, ಖಡ್ಗ, ಸುವರ್ಣರಾಜಧ್ವಜ ಗಳನ್ನು ಪಾದಕಾಣಿಕೆಯಾಗಿ ಒಪ್ಪಿಸಿ, ಗದ್ಗದವಾದ ಸ್ವರದಲ್ಲಿ—

'ಪ್ರಭೋ, ಇಂದು ನನ್ನ ಬಾಳು ಸಾರ್ಥಕವಾಯಿತು. ಚೋಳರ ಪಾಶವೀಪಾದಧೂಳಿಯಿಂದ ಕಲಂಕಿತವಾದ ಗಂಗದೊರೆಗಳ ಅರಮನೆ, ಚೋಳರ ರಕ್ತಸ್ನಾನದಿಂದಲೇ ಮಿಂದು ಮಡಿಯಾಗಿ, ತಮ್ಮ ಸಿಂಹಾಸನಾರೋಹಣದಿಂದ ಪುನೀತವಾದುದನ್ನು ಕಂಡು, ನನಗಿಂದು ಪರಮಪದ ದೊರೆತಷ್ಟು ಹರ್ಷವಾಗಿದೆ. ಪ್ರಭುಗಳ ಪುಣ್ಯ, ಪರಾಕ್ರಮ, ನನ್ನ ಬಾಳಿನ ಏಕೈಕ ಬಯಕೆಯನ್ನು ಸಫಲಗೊಳಿಸಿತು. ಕೋಟಿ ಕೋಟಿ ಕನ್ನಡಿಗರ ಹೃದಯಾಂತರ್ಗತವಾದ ಬಯಕೆಯೂ ಇಂದು, ನನ್ನ ಬಯಕೆಯೊಂದಿಗೇ ಸಫಲವಾಯಿತು. ದಾಸ್ಯದ ಭಾರದಿಂದ ಅವನತವಾದ ಕನ್ನಡಿಗರ ಶಿರಗಳು ಮತ್ತೆ ಹೆಮ್ಮೆಯಿಂದ ನಿಮಿರಿ ನಿಲ್ಲುವಂತೆ ಮಾಡಿದ, ಈ ಪ್ರಭುವಿನ ಪಾದಕ್ಕೆ ಈ ಖಡ್ಗ—ನನ್ನ ಬಾಳು ಎರಡನ್ನೂ ಇಂದು ಸಮರ್ಪಿಸುತ್ತೇನೆ. ಈ ಎರಡೂ ಪ್ರಭುವಿನ ನಿತ್ಯ ವಿಜಯ ಯಾತ್ರೆಗೆ ವಿನಿಯೋಗವಾಗಲಿ. ಮಹಾಪ್ರಭುಗಳು ಈ ಅರ್ಪಣೆಯನ್ನು ಒಪ್ಪಿಸಿಕೊಳ್ಳಬೇಕು. ಇದು ನನ್ನ ಪ್ರಾರ್ಥನೆಯಷ್ಟೇ ಅಲ್ಲ, ಕನ್ನಡಿಗರೆಲ್ಲರ ಪ್ರಾರ್ಥನೆ. ಈ ಅರ್ಪಣೆಯನ್ನು ಒಪ್ಪಿಸಿಕೊಂಡು, ಕನ್ನಡಿಗರನ್ನು ಪ್ರಭುಗಳು, ಶಾಶ್ವತ ಸ್ವಾತಂತ್ರ್ಯ, ನಿತ್ಯಕೀರ್ತಿಯ ಪಥದಲ್ಲಿ ನಡೆಯಿಸಬೇಕು.'

—ಎಂದು ಬೇಡಿದರು.

ಆ ಮಾತನ್ನು ಕೇಳಿದ ಜನತೆ 'ಉಘೇ ಉಘೇ' ಎಂದು ಕೂಗಿ ಅವರ ಮಾತಿಗೆ ತನ್ನ ಸಮ್ಮತಿಯನ್ನು ಸೂಚಿಸಿತು.

ಅದನ್ನು ಕಂಡು, ಕೇಳಿದ ವಿಷ್ಣುವರ್ಧನನ ಕಣ್ಣುಗಳೂ ತೇವವಾದವು. ಕೃತಜ್ಞತೆಯ ಭಾವ ಗಂಟಲನ್ನು ಕಟ್ಟಿ ಬಿಗಿಯಿತು.

ಆ ಭಾವಾತಿರೇಕದಲ್ಲೇ ಎದ್ದು ನಿಂತು, ಸಭೆಗೆ ತಲೆಬಾಗಿ ನುಡಿದ—

'ಗಂಗವಾಡಿಯ ನಮ್ಮ ಕನ್ನಡ ಬಂಧುಗಳೇ—

'ಈ ದಿನ ನಮ್ಮ ಬಾಳಿನಲ್ಲಿ ಸ್ಮರಣಾರ್ಹವಾದ ಅತ್ಯಂತ ಪವಿತ್ರ ದಿನ. ಈ ದಿನ ತಾವು ನನ್ನಲ್ಲಿ ತೋರಿದ ಮಮತೆ, ಅಭಿಮಾನಗಳ ನೆನಹು ನಮ್ಮ ಹೃದಯದಲ್ಲಿ ಶಾಶ್ವತವಾಗಿರುವುದೇ ಅಲ್ಲದೆ, ಆ ನೆನಪು ನಮ್ಮ ಬಾಳನ್ನು ನಡೆಯಿಸುವ ಬೆಳಕಾಗುವುದೆಂಬ ವಚನವನ್ನು ನಾವು ತಮಗೆ ನೀಡುತ್ತೇವೆ. ತಮ್ಮೆಲ್ಲರ ಬಯಕೆಗಳೇ ನಮಗೆ ಬದುಕಿನ ದಾರಿ ತೋರುವ ದೀಪ; ತಮ್ಮ

ತೃಪ್ತಿಯೊಂದೇ ನಾವು ಬಯಸುವ ಸಾರ್ವಭೌಮ ಪದವಿ. ಅದಕ್ಕಿಂತ ಹಿ.ು ದಾದುದೇನನ್ನೂ ನಾವು ಬಯಸುವುದಿಲ್ಲ.

'ಈ ದಿನ, ಇಂದು ಕನ್ನಡನಾಡಿಗಾದ ಗೆಲುವಿಗಾಗಿ, ನಮ್ಮನ್ನು ಈ ಸಿಂಹಾಸನದ ಮೇಲೆ ಏರಿಸಿ ಗೌರವಿಸಿದ್ದೀರ. ನಮ್ಮ ನೆತ್ತಿಯ ಮೇಲೆ ಪುಷ್ಪ ವೃಷ್ಟಿಯನ್ನು ಕರೆದಿದ್ದೀರ. ಆದರೆ ಈ ಮನ್ನಣೆಗೆ ನಾವು ಅರ್ಹರಲ್ಲ. ಇಂದಿನ ಗೆಲವು ನಮ್ಮ ಹೆಬ್ಬಯಕೆಯ ಶಿಶುವೂ ಅಲ್ಲ, ವೈಯಕ್ತಿಕ ಕ್ಷಾತ್ರದ ಫಲವೂ ಅಲ್ಲ. ನಾವು ಖಡ್ಗ ಮಾತ್ರ. ಈ ಖಡ್ಗವನ್ನು ನಡೆಸಿದ ತೋಳು ಕನ್ನಡ ಜನತೆ. ತಮ್ಮೆಲ್ಲರ ಬಯಕೆ, ಸಾಹಸ, ತ್ಯಾಗ ಬಲಿದಾನಗಳಿಂದ ಚೋಳ ವಿಜಯ ನಮ್ಮದಾಗಿದೆ. ನಾವು ಕೇವಲ ನಿಮಿತ್ತ ಮಾತ್ರ ಎಂಬ ಅರಿವು ನಮ ಗಿದೆ. ಎಂತಲೇ ತಾವು ಇಂದು ಮಾಡಿದ ಮನ್ನಣೆಯನ್ನು, ಮಾನವನ ಆತ್ಮವಾಸಿಯಾದ ಧೀಶಕ್ತಿಗೆ ಅರ್ಪಿತವಾದ ಪುಷ್ಪಮಾಲೆಯನ್ನು, ಶಿರಸ್ಸು ಧರಿಸುವಂತೆ, ದೈವೀಶಕ್ತಿಗೆ ಅರ್ಪಿತವಾದ ಪೂಜೋಪಚಾರವನ್ನು ಶಿಲಾವಿಗ್ರಹ ಧರಿಸುವಂತೆ ಕನ್ನಡ ಜನತೆಯ ಪರವಾಗಿ ನಾವಿಂದು ಸ್ವೀಕರಿಸುತ್ತಿದ್ದೇವೆ. ಈ ಸ್ವೀಕಾರಕ್ಕೂ ಬೇಕಾದ ಅರ್ಹತೆ ನಮಗೆ ಬರಲೆಂದು ಜನತೆ ನಮ್ಮನ್ನು ಹರಸಬೇಕು. ಆ ದೃಷ್ಟಿಯಿಂದ, ತಾವಿಂದು ನಮ್ಮ ಶಿರದ ಮೇಲೆ ಕರೆದ ಪುಷ್ಪವೃಷ್ಟಿ ಆಶೀರ್ವಾದಾಕ್ಷತೆಯೆಂದು ಭಕ್ತಿಪುರಸ್ಸರವಾಗಿ ಸ್ವೀಕರಿಸಿದೇವೆ.

'ಇದೇ ವೇಳೆಯಲ್ಲಿ ಇಂದಿನ ವಿಜಯವನ್ನು ಸಾಧಿಸಿದ ನಮ್ಮ ಸೈನಿಕ ರಲ್ಲಿ, ನಮ್ಮ ಜನತೆಯಲ್ಲಿ ನಾವು ಮಾಡಿಕೊಳ್ಳಬೇಕಾದ ಮನವಿಯೊಂದಿದೆ.

'ಇಂದಿನ ಗೆಲವು–ನಮ್ಮ ಪ್ರಯಾಣದಲ್ಲಿ ಒಂದು ಮಜಲು ಮಾತ್ರ; ಇದೇ ಕೊನೆಯಲ್ಲ; ನಿಲುದಾಣವಲ್ಲ. ಮೃತ್ಯುಶಯ್ಯೆಯಲ್ಲೊರಗಿದ ನಮ್ಮ ಹಿರಿಯ ಸೋದರರು, ತಾವು ಈ ಜಗತ್ತನ್ನು ಬಿಟ್ಟು ಸ್ವರ್ಗವನ್ನು ಗೆಲ್ಲಲು ಹೋಗುವ ಗಳಿಗೆಯಲ್ಲಿ, ಇಂದು ಹಲಕೆಲವು ತುಂಡರಸು, ಹಲವಾರು ಮಂದಿ ಸಾರ್ವಭೌಮರುಗಳಿಂದ ಕಿಕ್ಕಿರಿದು, ಹಲ ತುಂಡಾಗಿ, ಕೊನೆಗೆ ವಿದೇಶಿಯರ ತುಳಿತಕ್ಕೆ ಸಿಕ್ಕಿದ, ಕೃಷ್ಣಾತೀರದಿಂದ, ನೀಲಗಿರಿಯವರೆಗಿನ ಕನ್ನಡನಾಡು ಒಂದಾಗಿ, ಇಂದು ಈ ದೇಶದಲ್ಲಿ ನೆಲೆಸಿರುವ ಅವ್ಯವಸ್ಥೆ, ಅತ್ಯಾಚಾರ, ನಿತ್ಯ ಸಮರ, ದಿನದುಃಖದ ಪರಿಸ್ಥಿತಿ ಕೊನೆಗಂಡು, ಕನ್ನಡಭೂಮಿ ಜಗಜ್ಯೋತಿ ಯಾಗಿ ಬೆಳಗುವ ದಿವ್ಯ ಕನಸೊಂದನ್ನು ಕಂಡು, ಆ ಕನಸನ್ನು ನನಸಾಗಿ